ಬೆಂಗಳೂರು ಸೆಂಟ್ರಲ್ ಕಾಲೆಜ್ ಕರ್ಣಾಟಕ ಸಂಘದ ಸದಸ್ಯರು ಬರೆದ ಲೇಖನಗಳ ಸಂಕಲನ—ಈ **'ಬಾಲ ಸರಸ್ವತಿ'**. ಇದು ಕೇವಲ ಹತ್ತು ವಾರಗಳ ವ್ಯವಸಾಯದ ಫಲ.

ಕಾಲೇಜಿನ ಡಿಗ್ರಿ ತರಗತಿಗಳಲ್ಲಿ ಓದುವವರು ಬರಹಕ್ಕೆ ಕೈಯಿಟ್ಟರೆ, ಎಂತಹ ವಿಷಯಗಳನ್ನು ಬರೆಯಬಹುದು, ಬರೆಯಬೇಕು, ಬರೆಯಬಲ್ಲರು—ಎಂಬುದನ್ನು ಇಲ್ಲಿ ಕಾಣಬಹುದು. ಬರೆದರೆ ಅದು ಹೇಗೆ ಇರಬೇಕು ಎಂಬುದನ್ನು ಇದರೊಳಗಿನ ಮಾದರಿಗಳಿಂದ ಇತರ ವಿದ್ಯಾರ್ಥಿಗಳು ನೋಡಿ ತಿಳಿಯಬಹುದು.

ಈ ಬರಹಗಳಲ್ಲಿ ಪ್ರಬಂಧ, ಹರಟೆ, ಕತೆ, ಜನಪದದ ಕತೆಗಳು, ಸಾಹಿತ್ಯವಿಮರ್ಶೆ, ಸಂವಾದ ಕಲ್ಪನೆ, ಒಂದೆರಡು ಕವನ—ಹೀಗೆ ಬೇರೆ ಬೇರೆ ವಿಧದ ರಚನೆಯುಂಟು.

ವಿಷಯದ ವಿವಿಧತೆಯನ್ನು ಅನುಸರಿಸಿ ವಿಧಾನದಲ್ಲಿ ವೈವಿಧ್ಯವೂ ವಿಧಾನಕ್ಕೆ ತಕ್ಕ ಹಾಗೆ ಭಾಷೆಯಲ್ಲಿ ಬದಲಾವಣೆಯೂ ಸಂದರ್ಭೋಚಿತವಾಗಿ ಹೊಂದಿಕೊಂಡು ಬಂದಿರುವ ಸೊಗಸು ಕೂಡ ಇಲ್ಲಿ ಗಮನಾರ್ಹವಾದದ್ದು.

ಮುಂದೆ ಸಿಹಿಯ ಫಲವಾಗುವುದು ಹೀಚಾಗಿರುವಾಗ ಒಗಚು, ಕಾಯಾಗಿರುವಾಗ ಹುಳಿ, ದೋರೆಯಾದಾಗ ಇಂಬುಳಿ, ಪಕ್ವವಾಗಿ ಹಣ್ಣಾದಾಗ ಇನಿದು—ಎಂಬುದು ಪ್ರಕೃತಿನಿಯಮ. ಇಲ್ಲಿರುವಂಥ ಇಂಬುಳಿಗಳಿಗೆ ಇನಿದಾಗುವ ಅನುಕೂಲತೆಗಳನ್ನು ಒದಗಿಸುವುದು ದೇಶದ ಸಾರಸ್ವತ ಸಂಪತ್ತಿನಲ್ಲಿ ಆಸಕ್ತಿಯುಳ್ಳವರೆಲ್ಲರ ಕರ್ತವ್ಯ.

[ಬೆಲೆ: **ಎರಡೂವರೆ ರೂಪಾಯಿ**

# ಬಾಲಸರಸ್ವತಿ

ಬರೆದವರು:

**ಕರ್ಣಾಟಕ ಸಂಘದ ಸದಸ್ಯರು**

ಸಂಪಾದಕರು:

**ಜಿ. ಪಿ. ರಾಜರತ್ನಂ**



**ಕರ್ಣಾಟಕ ಸಂಘ**

ಸೆಂಟ್ರಲ್ ಕಾಲೇಜ್, ಬೆಂಗಳೂರು

# ಅರಿಕೆ

'ಬಾಲ ಸರಸ್ವತಿ' ನಮ್ಮ ಸಂಘದ ಹೊಸ ಪ್ರಕಟನೆಗಳಲ್ಲಿ ಐದನೆಯದು. ಈ ವರ್ಷ ಕರ್ಣಾಟಕ ಸಂಘವು ತನಗೆ ನಿಯಮಿಸಿಕೊಂಡ ವಿಶಿಷ್ಟ ಕಾರ್ಯ ಕ್ರಮದ ಫಲವಾಗಿ, ಸಂಘದ ಸದಸ್ಯರು ಕಾಲಕಾಲಕ್ಕೆ ರಚಿಸಿದ ಕೃತಿಗಳಿಂದ ಈ ಪುಸ್ತಕ ರೂಪುಗೊಂಡಿದೆ. ಮೊದಲನೆಯ ನಾಲ್ಕು ಲೇಖನಗಳು ಹಿಂದಿನ ವರ್ಷಗಳಲ್ಲಿ ಸಂಘವು ನಡಸಿದ ಸ್ಪರ್ಧೆಗಳಲ್ಲಿ ಬಹುಮಾನವನ್ನು ಪಡೆದವು. ಉಳಿದ ಮೂವತ್ತೆರಡು ಲೇಖನಗಳು ಈ ವರ್ಷದ ಕೇವಲ ಹತ್ತು ವಾರಗಳ ಕೃಷಿಪ್ರಯೋಗದಿಂದ ಉತ್ಪನ್ನವಾದುವು.

"ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರ ಕೃತಿರಚನೆಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕೆಂದು ಸಂಘವು ಸಂಕಲ್ಪಿಸಿದೆ. ನೀವು ಇದುವರೆಗೆ ರಚಿಸಿರಬಹುದಾದ ಗದ್ಯಪದ್ಯ ಕೃತಿಗಳನ್ನು ಇದೇ ೧೬-೧೦-೫೨ ರ ಒಳಗಾಗಿ ಸಂಘಕ್ಕೆ ತಂದುಕೊಡಿ" ಎಂದು ಅಕ್ಟೋಬರ್ ತಿಂಗಳ ಆದಿಯಲ್ಲಿ ಒಂದು ತಿಳಿವಳಿಕೆ ಕೊಟ್ಟೆವು. ಅದಕ್ಕೆ ಉತ್ತರರೂಪವಾಗಿ ಬಂದ ಲೇಖನಗಳಲ್ಲಿ ಆಯ್ದುಕೊಂಡ ಎಂಟು ಲೇಖನಗಳು (ಬಾಲಸರಸ್ವತಿ-೫ ರಿಂದ ೧೨ ಪೂರ್ತಿ) ಇಲ್ಲಿ ಒಳಗಿವೆ.

೧೬ ನೆಯ ತಾರೀಕಿನ ವೇಳೆಗೆ ಇನ್ನೊಂದು ತಿಳಿವಳಿಕೆಯನ್ನು ಪ್ರಕಟಿಸಿದ್ದಾಯಿತು. ಐದು ಸ್ಪರ್ಧೆಗಳನ್ನು ಏರ್ಪಡಿಸಿ, ಒಂದೊಂದಕ್ಕೂ ಇಷ್ಟಿಷ್ಟು ವಿಷಯಗಳನ್ನು ಸೂಚಿಸಿ, ಬರೆಯುವವರಿಗೆ ಸಾಕಷ್ಟು ಸ್ಥಲಾವಕಾಶ ಕಾಲಾವಕಾಶಗಳನ್ನು ನಿಯಮಿಸಿ, ಕಾಲಕಾಲಕ್ಕೆ ಬಂದ ಬರವಣಿಗೆಗಳಲ್ಲಿ ಉತ್ತಮವಾದವುಗಳನ್ನು ಇದೇ ಪುಸ್ತಕದ ಒಳಗೆ (೧೩ ರಿಂದ ೩೬) ಕಾಣಬಹುದು. ಈ ಸಂದರ್ಭದಲ್ಲಿ ನಾವು ಪ್ರಕಟಿಸಿದ ತಿಳಿವಳಿಕೆಗಳನ್ನು ಮುಂದೆ ಪ್ರತ್ಯೇಕವಾಗಿ ಪುಸ್ತಕದ ಕೊನೆಯಲ್ಲಿ ಕೊಟ್ಟಿದೆ.

'ಬಾಲಸರಸ್ವತಿ'—ಇದ್ದ ಸ್ವಲ್ಪಾವಕಾಶದಲ್ಲಿ ನಡಸಿದ ಒಂದು ಸಣ್ಣ ಪ್ರಯೋಗ. ಕಾಲೇಜು ವಿದ್ಯಾರ್ಥಿಗಳ ವಯಸ್ಸು, ಓದು, ವಿದ್ಯೆ, ಅಭ್ಯಾಸ ಇವುಗಳನ್ನು ದೃಷ್ಟಿಯಲ್ಲಿಟ್ಟು ನೋಡಿದರೆ, ಈ ಲೇಖನಗಳ ಆಧಾರದಿಂದ, ವಿದ್ಯಾರ್ಥಿಗಳಲ್ಲಿ ಗರ್ಭಿತವಾಗಿರುವ ಶಕ್ತಿಸಾಮರ್ಥ್ಯಗಳ ಅರಿವಾಗಿ, ಕಿರಿಯರ

ಭವಿಷ್ಯದಲ್ಲಿ ಆಸಕ್ತಿಯುಳ್ಳವರಿಗೆಲ್ಲ ಸಂತೋಷವಾದೀತು, ಭರವಸೆ ಬಲಿದೀತು. ಇಂಥ ವಿದ್ಯಾರ್ಥಿಗಳ ವಿಕಾಸಕ್ಕೆ ತಕ್ಕ ಅವಕಾಶ ಅನುಕೂಲ ಒದಗಿದರೆ, 'ವಿದ್ಯೆ' ನಿಜವಾಗಿಯೂ 'ಅರ್ಥ'ವಾಗುವುದರಲ್ಲಿ ಸಂಶಯವಿಲ್ಲ.

ಸುಮಾರು ಸಾವಿರ ಕನ್ನಡ ವಿದ್ಯಾರ್ಥಿಗಳಿರುವ ಕಾಲೇಜಿನಲ್ಲಿ ನಾವು ಎಣಿಸಿದಷ್ಟು ಜನ ಈ ಕರ್ತವ್ಯದಲ್ಲಿ ಭಾಗವಹಿಸದೆ ಹೋದರೂ, ಬಂದಷ್ಟಾದರೂ ಬಂದರಲ್ಲ, ಬಂದುದರಲ್ಲಿ ಇಷ್ಟಾದರೂ ಒಳ್ಳೆಯದು ಕಂಡೆವಲ್ಲ ಎಂಬ ತೃಪ್ತಿ ಸಂಘಕ್ಕೆ ತುಂಬ ಇದೆ. ಈ ಸಲದ ಈ ಪ್ರಕಟನೆಯಿಂದ ಮುಂದಿನ ವರ್ಷಗಳಲ್ಲಿ ಇನ್ನೂ ಹೆಚ್ಚು ಜನ ಇಂಥ ಕಾರ್ಯಗಳನ್ನು ಕರ್ಣಾಟಕ ಸಂಘದಿಂದ ಮಾಡಿಸಿ, ಅದರಿಂದ ತಾವು ಪುಷ್ಟಿಹೊಂದಿ, ತಮ್ಮವರಿಗೆ ತುಷ್ಟಿ ಕೊಟ್ಟು, ತಮ್ಮ ಬೆಳೆಯುವ ಬುದ್ಧಿಯ ಗುರುತುಗಳನ್ನು ಖಚಿತವಾಗಿ ಮುಂದಿನವರಿಗೆ ಮಾರ್ಗದರ್ಶಕ ವಾಗುವಂತೆ ಊರಿ ನಿಲ್ಲಿಸಿ ಹೋದಾರು ಎಂಬ ಒಂದು ಆಸೆಯಿಂದ ಈ 'ಬಾಲ ಸರಸ್ವತಿ'ಯನ್ನು ಸಹೃದಯರ ಮಡಿಲಿನಲ್ಲಿ ಇರಿಸುತ್ತೇವೆ.

**ಜಿ. ಪಿ. ರಾಜರತ್ನಂ**
ಕರ್ಣಾಟಕ ಸಂಘದ ಪರವಾಗಿ

## ಲೇಖನಗಳ ವಿವರ


| | | | ಪುಟ |
|---|---|---|---|
| ೧. | ಬೆಲ್ಲದ ಕಹಿ | .... .... | ೧ |
| ೨. | ಉಪ್ಪಿನಕಾಯಿ | .... .... | ೯ |
| ೩. | ಮಲ್ಲಯ್ಯನ 'ಬಸವ' | .... .... | ೧೩ |
| ೪. | ಕಾದಿರುವನು ಶ್ರೀಹರಿ | .... .... | ೧೬ |
| ೫. | ಚಿನ್ನದ ದೋಸೆ | .... .... | ೧೯ |
| ೬. | ಕಾಲಾಣೆ | .... .... | ೨೬ |
| ೭. | ಅವಾಂತರ | .... .... | ೨೯ |
| ೮. | ನಾನೂ ನನ್ನ ನೆರೆಯವರೂ | .... .... | ೩೧ |
| ೯. | 'ಇತ್ಯಾದಿ'ಯ ಆತ್ಮಕಥೆ | .... .... | ೩೫ |
| ೧೦. | ಮಗು ಅತ್ತರೆ ಸ್ವರ್ಗ! | .... .... | ೪೦ |
| ೧೧. | ಪ್ರಯಾಣದ ಅಸೌಕರ್ಯಗಳು | .... | ೪೩ |
| ೧೨. | ತಾಳ್ಮೆಯ ಮೂರ್ತಿ | .... .... | ೪೮ |
| ೧೩. | ಮರಗೋಪಿ | .... .... | ೫೪ |
| ೧೪. | ಕ್ಲಾಸಿನಲ್ಲಿ ಕಡಲುಯಾತ್ರೆ | .... .... | ೬೩ |
| ೧೫. | ಗಾಜಿನ ಕಂಭ | .... .... | ೬೭ |
| ೧೬. | ಚಂದ್ರಮತಿ | .... .... | ೭೨ |
| ೧೭. | ಗಳ-ಗಂಟೆ | .... .... | ೮೧ |
| ೧೮. | ತಕ್ಕಣ್ಣನ ಮಗ | .... .... | ೮೭ |
| ೧೯. | ಬೀರಣ್ಣ | .... .... | ೯೨ |
| ೨೦. | ಚಂದ್ರಕುಮಾರಿ | .... .... | ೯೮ |
| ೨೧. | ತೂಕಡಿಸುವ ಬ್ಯಾಟರನಿಗೆ | .... .... | ೧೦೭ |
| ೨೨. | ಸ್ನೇಹದ ಬೆಲೆ | .... .... | ೧೦೮ |
| ೨೩. | ಕಲ್ಪಿಸಿದ ಕನಸು | .... .... | ೧೧೧ |
| ೨೪. | ಬಹುಮಾನ | .... .... | ೧೨೪ |

ಪುಟ

೨೫. 'ಹಾಳುಬಿದ್ದ ಹಳ್ಳಿ' .... .... ೧೨೫
೨೬. 'ದಿ ಬ್ಲ್ಯೂ ವೈಲ್' .... .... ೧೩೩
೨೭. 'ಲೈಟ್ ಆಫ್ ಏಷ್ಯಾ' .... .... ೧೩೭
೨೮. 'ರಬ್ಬೈ ಬೆನ್ ಎಜ್ರ' .... .... ೧೪೪
೨೯. ಪ್ರಮಾದ .... .... ೧೫೨
೩೦. ಮಾದರಿಯ ಮಾವ .... .... ೧೬೦
೩೧. ಸಮವಿಷಮವರ್ತಿ .... .... ೧೬೬
೩೨. ಪೊಸದು ತೆರನೀ ಮಿಥಿಲೆಯರಸನದು .... ೧೭೩
೩೩. ಮುನಿರಾಕ್ಷಸ .... .... ೧೭೬
೩೪. ಯಮನಾದನ್ ಅನಾಮಿಕನ್ .... ೧೮೧
೩೫. ಗೆದ್ದವ ಸೋತ, ಸೋತವ ಸತ್ತ .... ೧೮೫
೩೬. 'ಯಾರಿಗೆ ಬೇಕು ಈ ಎಲ್ಲ ಕಗ್ಗ? .... ೧೮೯

ನಮ್ಮ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸ್ಥಾಪಕರೂ
ಬಹುಕಾಲ ಅದರ ಪ್ರವರ್ತಕರೂ
ಅಲ್ಲಿನ "ಪ್ರಬುದ್ಧ ಕರ್ಣಾಟಕ" ಪತ್ರಿಕೆಯ
ಉದಯ ಅಭಿವೃದ್ಧಿಗಳಿಗೆ ಕಾರಣರೂ
ಆದ

**ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.**

**(ವಿಶ್ರಾಂತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ)**

ಇವರಿಗೆ
ಸಂಘದ ಸದಸ್ಯರು ರಚಿಸಿರುವ
ಈ 'ಬಾಲಸರಸ್ವತಿ'ಯನ್ನು
ಕೃತಜ್ಞತೆಯಿಂದ ಭಕ್ತಿಪೂರ್ವಕವಾಗಿ
ಸಂಘವು ಸಮರ್ಪಿಸುತ್ತದೆ

## ವಂದನೆ

ಕೆಲವು ಕಡೆ, ಲೇಖನಗಳು ಮುಗಿದ ಮೇಲೆ, ಒಂದಿಷ್ಟು ಪುಟ ಮಿಕ್ಕದ್ದು ವ್ಯರ್ಥವಾಗಬಾರದೆಂದು, ಓದುಗರ ಲಾಭಕ್ಕಾಗಿ, ಅಲ್ಲಿ '**ಮಂಕುತಿಮ್ಮನ ಕಗ್ಗ**'ದಿಂದ ಕೆಲವು ವಚನಗಳನ್ನು ಎತ್ತಿ ಕೊಟ್ಟಿದ್ದೇವೆ.

ಇವುಗಳನ್ನು ಉಪಯೋಗಿಸಿಕೊಳ್ಳಲು ವಿಶ್ವಾಸದಿಂದ ಅನುಮತಿ ಕೊಟ್ಟದ್ದಕ್ಕಾಗಿ ಕಾವ್ಯಕರ್ತೃಗಳಾದ **ಶ್ರೀ ಡಿ. ವಿ. ಗುಂಡಪ್ಪ**ನವರಿಗೂ ಕಾವ್ಯದ ಪ್ರಕಾಶಕರಾದ **ಕಾವ್ಯಾಲಯ ಸಂಸ್ಥೆಯ ಶ್ರೀ ಕೆ. ಚಿದಂಬರಂ** ಅವರಿಗೂ ಸಂಘವು ವಂದಿಸುತ್ತದೆ.

# ಬೆಲ್ಲದ ಕಹಿ

ಪಾತ್ರಗಳು

**ರಾಯರು :** ಸುಮಾರು ೪೦ ವರ್ಷ

**ಆಕೆ :** ಅವರ ಹೆಂಡತಿ

**ಹುಡುಗ :** ಅವರ ಮಗ

ಸ್ಥಾನ: ಮನೆಯ ಒಳ ಅಂಗಳ.

ಸಮಯ: ಸುಮಾರು ಬೆಳಗ್ಗೆ ಒಂಬತ್ತು ಗಂಟೆ.

[ರಾಯರು ಕುರ್ಚಿಯಲ್ಲಿ ಪೇಪರು ಓದುತ್ತಾ ಕುಳಿತಿರುವರು. ಆಕೆ ಕೈಯಲ್ಲಿ ರೇಷನ್ ಕಾರ್ಡು ಹಿಡಿದು ಪ್ರವೇಶಿಸುವರು.]

**ಆಕೆ:** ಏನೂ ಅಂದ್ರೆ . . . ಇಲ್ನೋಡಿ . . . ನಿಮ್ಮನ್ನೇ ಅಂದ್ರೆ ಕೂಗ್ತಾ ಇರೋದು . . . (ರಾಯರು ಮುಖಕ್ಕೆ ಮುಸುಕಿಕೊಂಡಿದ್ದ ಪೇಪರನ್ನು ಕೆಳಕ್ಕಿಳಿಸುತ್ತಾರೆ.) ಅಲ್ಲಾ ಅಂದ್ರೆ . . . ಎಷ್ಟು ಸಾರಿ ಕೂಗೋದು? . . . ಬರ್ತಾಬರ್ತಾ ಕಿವೀನೂ ಕೇಳಿಸೋಲ್ಲವೆ? . . . ಚೆನ್ನಾಯ್ತು! . . . ಬೆಳಗ್ಗೆ ಎದ್ದು ಹೀಗೆ ಕೂತುಕೊಂಡುಬಿಟ್ರೆ, ಹೇಗೆ ಅಂದ್ರೆ?

**ರಾಯರು:** ಲೇ, ಯಾಕೇ ಹಾಗೆ ಕೂಗಾಡ್ತೀಯ? ಸ್ವಲ್ಪ ನಿಧಾನಿಸಬಾರದೇ . . . ಸ್ವಲ್ಪ ನಿಧಾನವಾಗಿ ಮಾತನಾಡೋದು ಬಿಟ್ಟು . . .

**ಆಕೆ:** ಚೆನ್ನಾಯ್ತು ಅಂದ್ರೇ! . . . ಗಟ್ಟಿಯಾಗಿ ಕೂಗೀನೇ ನಿಮಗೆ ಕೇಳಿಸಬೇಕಾದ್ರೆ ಹತ್ತು ನಿಮಿಷ ಆಯ್ತು. ಇನ್ನು ನಾನು ನೀವ್ಹೇಳಿದ ಹಾಗೆ ನಿಧಾನವಾಗಿ ಮಾತನಾಡ್ತಾ ಇದ್ರೆ, ದೇವರೇ ಗತಿ!

**ರಾಯರು:** ಸ್ವಲ್ಪ ನಿಧಾನಿಸೇ . . . (ಸರಿಯಾಗಿ ಕುರ್ಚಿಯಲ್ಲಿ ಕುಳಿತು, ಪೇಪರನ್ನು ಮಡಿಸುತ್ತಾ) ನೀನು ಕೂಗಿದ್ದು ಕಿವೀಗೆ ತಗುಲಿ, ತಲೇಗೆ ಹೋಗಿ, ಮೆದುಳಿಗೆ ತಾಗಿ, ಮನಸ್ಸಿಗೆ ಅರಿವಾಗೋಕೆ ಹೊತ್ತಾಗೊಲ್ವೆ . . . ?

**ಆಕೆ:** ಸರಿಸರಿ . . . ವಯಸ್ಸಾದರೂ ನಿಮಗೆ ಹುಡುಗಾಟಿಕೆ ಹೋಗಲಿಲ್ಲ. ಬೆಳಗ್ಗೆ ಎದ್ದು ಪಕ್ಕದ ಮನೆ ಇಂದ ಪೇಪರ್ ತಂದು ಭವಿಷ್ಯ ನೋಡ್ತಾ ಕುಳಿತುಬಿಟ್ರೆ ವರ್ತಮಾನಕಾಲದ ಗತಿ ಏನೂ ಅಂತ ನೋಡೋರು ಯಾರು?

**ರಾಯರು:** (ಕುರ್ಚಿಯಿಂದ ಎದ್ದು ನಿಂತು) ಏನೇ ಅದು, ಅಂಥ ವರ್ತಮಾನ? . . . ಯಾರಾದರೂ ಏನಾದರೂ . . . ಸುದ್ದಿ . . . ?

**ಆಕೆ:** ಚೆನ್ನಾಗಿದೆ, ಯಾವಾಗಲೂ ಇಂಥ ಬುದ್ಧೀನೇ . . . ಅದೇನು ಕೆಲಸ ಮಾಡ್ತೀರೋ ಆಫೀಸಿನಲ್ಲಿ . . . ಈ ತಲೆ ಇಟ್ಟುಕೊಂಡು!

**ರಾಯರು:** ಹಾಗೆ ಹೇಳು . . . ಅದಕ್ಕೇ ನಿನಗೆ ಹೇಳ್ತಾಯಿರೋದು ನಾನು . . . ನಿಂಗೆ ತಲೆ ಇಲ್ಲಾ ಅಂತ. ಅಲ್ವೇ . . . ಆಫೀಸಿನಲ್ಲಿ ಕೆಲಸ ಮಾಡೋ ಗುಮಾಸ್ತೆಗಳಿಗೆ ತಲೇ ಅವಶ್ಯಕತೆ ಇದೆ ಅಂದುಕೊಂಡಿಧೀಯೇನು? ಅಗತ್ಯವಿಲ್ಲ, ಅಗತ್ಯವಿಲ್ಲ . . . ಅಲ್ಲಿ ಬೇಕಾದ್ದು ಬರೇ ಕೈಕಾಲು . . . ಆಫೀಸರು ಹೇಳಿದಾಗ ಅವರ ಮನೇಗೆ ಹೋಗಿ, ಅವರ ಅಮ್ಮಾವ್ರು ಹೇಳಿದ ಕಡೆ ಅಲೆದು ಬರೋಕೆ ಬೇಕಾದ ಕಾಲು; ಆಫೀಸಿನಲ್ಲಿ, ಆ ಪುಸ್ತಕದಲ್ಲಿರೋದನ್ನ ಈ ಪುಸ್ತಕ ದಲ್ಲಿರೋದನ್ನ ಆ ಪುಸ್ತಕಕ್ಕೆ ಬರೀತಾ, ಕೂಡಿದ್ದನ್ನ ಕಳೆದು, ಕಳೆದದ್ದನ್ನ ಕೂಡಿ, ಲೆಕ್ಕಪತ್ರಗಳನ್ನ ಆಫೀಸರಿಗೇ ಆಗಲಿ, ಆಡಿಟರ್‌ಗೇ ಆಗಲಿ ಅರ್ಥ ವಾಗದ ಹಾಗೆ ಬರೆಯೋಕೆ ಬೇಕಾದ ಬಲವಾದ್ದೊಂದು ಬಲಗೈ . . . ಜೊತೆಗೆ, ಯಾರಾದ್ರೂ ಯಾತ್ರಾರ್ಥಿಗಳು ಬರ್ತಿರುತ್ತಾರಲ್ಲಾ ಆಫೀಸಿಗೆ, ಅವರು ಬಂದು, ಮೇಜಿನಮುಂದೆ ನಿಂತು ಕೈ ಆಡಿಸಿದಾಗ, ಅವರ ಗುಪ್ತದಾನಾನ ಸ್ವೀಕರಿಸೋಕೆ, ಮೇಜಿನ ಇನ್ನೊಂದು ತುದೀ ತನಕಾ ಹೋಗಿ, ಅಲ್ಲಿ ಅವರು ಕೊಡೋ ಕಾಗದಾನ ಸ್ವೀಕರಿಸಿ, ಸ್ಪೈಜಿನ ಸ್ಪರ್ಶಮಾತ್ರದಿಂದಲೇ ಅದರ ಮೇಲೆ ಅಚ್ಚಾ ಗಿರೋ ಅಂಕಿ ಎಂತಹದು ಅಂತ ತೀರ್ಮಾನಮಾಡಿ, ತಲೇಗೆ ಟೆಲಿಗ್ರಾಫ್ ಮಾಡೋ ಒಂದು ಉದ್ದವಾದ ಎಡಗೈ . . . ಇಷ್ಟು ಇದ್ದರೆ ಸಾಕು ಕಣೇ ಆಫೀಸಿಗೆ . . . ತಲೆ ಯಾಕಂತೆ ತಲೆ . . . ?

**ಆಕೆ:** (ರಾಯರ ಕಡೆಯೋ ದಿಗ್ಭ್ರಾಂತಿಯಿಂದ ನೋಡುತ್ತಾ) ಸರಿ ಹೋಯ್ತು . . . ಇದಕ್ಕೇ ಅಂತ ಕಾಣುತ್ತೆ, ನೀವು ಸೇರಿದಾಗಿನಿಂದಾ ಹೆಡ್ ಗುಮಾಸ್ತೆ ಪದವೀನೇ ಅಲಂಕರಿಸಿಕೊಂಡಿರೋದು ಇನ್ನೂನು . . .

**ರಾಯರು:** ಲೇ . . . ತಿರುಗಿ 'ಹೆಡ್' ಅಂತೀಯಲ್ಲಾ . . . ನಾನು —ಪರ್ಸನಲ್ ಕ್ಲಾರ್ಕ್ ಅಂತ ಗೊತ್ತಿಲ್ಲವೇನೇ?

**ಆಕೆ:** ಹೆಡ್‌ಗುಮಾಸ್ತೇನೋ, ಪರ್ಸ್‌ಗುಮಾಸ್ತೇನೋ . . . ಏನೋ ಒಂದು . . . ಎಲ್ಲಾ ಒಂದೇ . . . ಏನಾದರೇನು? . . . ರೇಷನ್ನಿಗೆ ತಾಪ

ತ್ರಯ ಪಡೋದಂತೂ ತಪ್ಪಲಿಲ್ಲ. ಅಂದ ಹಾಗೆ . . . ನೋಡಿ, ಬಂದ ಕೆಲಸಾನೇ ಮರೆತುಬಿಟ್ಟೆನಲ್ಲಾ . . . ನಿಮ್ಮ ಮಾತಿನ ಭರಾಟೆಯಲ್ಲಿ! ಸೊಸೈಟಿಗೆ ಬೆಲ್ಲಾ ಬಂದಿದೆಯಂತೆ . . . ಕಂಟ್ರೋಲ್ ಬೆಲೆಗೆ ಪ್ರಪಂಚದಲ್ಲೇ ಎಲ್ಲೂ ಸಿಕ್ಕೊಲ್ಲ ಅಂತಿದ್ರಲ್ಲಾ, ನೋಡಿ, ಈಗ ಸೊಸೈಟಿಯಲ್ಲಿ ಕೊಡ್ತಾ ಇದಾರಂತೆ. ಪಕ್ಕದ ಮನೇ ಕಮಲಮ್ಮನ ಗಂಡ ಎಷ್ಟು ಚುರುಕು ನೋಡಿ . . . ಆಗಲೇ ಆರು ಗಂಟೆಗೇ ಹೋಗಿ ಕ್ಯೂನಲ್ಲಿ ನಿಂತಿದ್ದು, ಈಗ ತಂದ್ರು. ಈಗ ಗಲಾಟೆ ಯೆಲ್ಲಾ ಆಗಿ ಹೋಗಿರುತ್ತೆ ಅಂದ್ರು . . . ಬೇಗ ಹೋಗಿ ಬನ್ನಿ . . . ಒಂದು ವೀಸೆಯಾದ್ರೂ ತನ್ನಿ . . . ಆಮೇಲೆ ಸಿಕ್ಕುತ್ತೋ ಇಲ್ವೋ . . .

**ರಾಯರು :** (ನಿಧಾನವಾಗಿ, ಯೋಚನಾಸಕ್ತರಾಗಿ) ಲೇ . . . ಅವೆಲ್ಲಾ ಚೆನ್ನಾಗಿರುತ್ತೊ ಇಲ್ವೋ . . . ಅಲ್ಲದೆ ಮೊನ್ನೆ ತಾನೇ . . .

**ಆಕೆ :** ಸರಿ ಸರಿ . . . ಪ್ರಾರಂಭ ಮಾಡಿದಿರಲ್ಲಾ ನಿಮ್ಮ ಆಟಾನ! . . . ಅದೇನು ಮೈಗಳ್ಳತನ ಅಂದ್ರೆ ನಿಮ್ದು? ಹೋಗಿ, ಕ್ಯೂನಲ್ಲಿ ಒಂದು ಗಂಟೆ ನಿಂತ್ಕೊಂಡು ತರೋಕೆ ಕೈಲಾಗೊಲ್ವೆ . . . . ಏನು ಗಂಡಸರೋ . . . . ಅಡಿಗೆ ಆದ್ರೂ ಮನೇಲಿ ನೀವು ಮಾಡೋ ಹಾಗಿದ್ದಿದ್ರೆ ನಾನೇ ಹೋಗಿ ತರ್ತಾ ಇದ್ದೆ . . .

**ರಾಯರು :** ಲೇ ಸ್ವಲ್ಪ ತಾಳು . . . ಕೂಗಬೇಡ. ಪಕ್ಕದ ಮನೆಯೋರಿಗೆಲ್ಲಾ ಕೇಳಿಸೀತು ಸದ್ಯ . . . ತಾ ಇಲ್ಲಿ ಆ ಕಾರ್ಡನ್ನ (ರೇಷನ್ ಕಾರ್ಡನ್ನು ಕೈಗೆ ತೆಗೆದುಕೊಂಡು ನೋಡಿ) ಇಲ್ನೋಡ್ದ್ಯೇನೇ . . . ಮೊನ್ನೆ ತಾನೇ ಒಂದು ವೀಸೇನ ನಮ್ಮ ಕಾರ್ಡಿನಲ್ಲಿ ತಂದಿದೆಯಲ್ಲೇ . . . ಸೊಸೈಟಿಯಲ್ಲಿ ಕಾರ್ಡು ನೋಡಿಯೇ ಅಲ್ವೇ ಬೆಲ್ಲಾ ಕೊಡೋದು . . .

**ಆಕೆ :** ಸರಿಹೋಯ್ತು . . . ನಿಮಗೆ ಏನಾದ್ರೂ ಒಂದು ನೆಪ! ಕಮಲಮ್ಮನ ಗಂಡನ್ನ ನೋಡಿ ಕಲಿತ್ಕೊಬಾರ್ದೆ? ಅವರ ಮನೇಲೂ ನಿನ್ನೆ ತಂದೇ ಇದ್ರು . . . ಆದರೆ ಆತ ಹೋಗಿ ತರಲಿಲ್ವೆ . . . ಮುಖ್ಯ ಚಾಲೂಕಿಲ್ಲಾ ಅನ್ನಿ . . . ಅದಕ್ಕೇ ನಮ್ಮಪ್ಪ ಅಂತಿದ್ದದ್ದು—'ನನ್ನ ಅಳಿಯನಿಗೆ ಕೊಂಚ ತಲೆ ಕಡಿಮೇ' ಅಂತ . . .

**ರಾಯರು:** ಲೇ, ಸಾಕು ಮಾಡೇ ಸದ್ಯ . . . ಹಳೇ ಪುರಾಣವೆಲ್ಲಾ ತೆಗೀಬೇಡ ಈಗ. ನಿನಗೆ ಅಲ್ಲಿ ನಾನು ಒಂದು ಗಂಟೆ ಕ್ಯೂನಲ್ಲಿ ನಿಂತು

ಬಂದರೇ ಸಮಾಧಾನ . . . ಹೋಗ್ತೇನೇಳು . . . (ನೇಪಥ್ಯದ ಕಡೆ ತಿರುಗಿ) ಲೋ . . . ಮಗೂ . . .

**ಹುಡುಗ :** (ಒಳಗಿನಿಂದ) ಬಂದೇ ಅಣ್ಣಾ . . .

[ರಾಯರ ಮಗ, ಸುಮಾರು ೧೨ ವರ್ಷದವನು. ಕೈಯಲ್ಲಿ ಒಂದು ಪುಸ್ತಕ, ಪೆನ್ ಹಿಡಿದುಕೊಂಡು ಬರೆಯುತ್ತಿದ್ದವನು ಹಾಗೆಯೇ ಎದ್ದು ಬರುವನು.]

**ಹುಡುಗ :** ಏನಣ್ಣಾ . . . ಕೂಗಿದ್ಯಾ ?

**ರಾಯರು :** ಹೂನಪ್ಪಾ . . . ಸ್ವಲ್ಪ ಸೊಸೈಟೀಗೆ . . .

**ಆಕೆ :** ಚೆನ್ನಾಯ್ತು . . . ನೀವು ಹೋಗೀ ಅಂದ್ರೆ . . . ಹುಡುಗನ್ನ ಕಳಿಸ್ತೀರಾ . . . ಚೆನ್ನಾಗಿದೆ. ಯಾವುದಕ್ಕೋ ಹೇಳಿದರೆ ಯಾವುದೋ ತನ್ನ ಬಾಲಕ್ಕೆ ಹೇಳಿತಂತೆ!

**ರಾಯರು :** ಲೇ, ಕೊಂಚ ಹೊತ್ತು ನೀನು ಸುಮ್ಮನೇ ಇದ್ದರೆ ಎಲ್ಲಾ ಸರಿಹೋಗುತ್ತೆ. ನೋಡು, ಈ ಕಾರ್ಡಿಗೆ ಒಂದು ಸಾರಿ ಬೆಲ್ಲ ಕೊಟ್ಬಿಟ್ಟಿದ್ದಾರೆ . . . ಈ ವಾರದಲ್ಲಿ ತಿರುಗಿ ಕೊಡೋಲ್ಲ . . . ಎಲ್ಲಿಯಾದರೂ ಹೋಗಿ ಬೇರೆ ಕಾರ್ಡು ಸಂಪಾದಿಸಬೇಕು . . . (ಹುಡುಗನ ಕಡೆ ತಿರುಗಿ) ನಡಿಯೋ . . . ಅಲ್ಲಿ ರಾಮಣ್ಣನ ಕಟ್ಟೆಗೆ ಅಂಗಡೀಲಿ ಸರ್ವೆ ಕಟ್ಟಿಗೆ ಬರುತ್ತೆ ಅಂತ ಹೇಳಿದ್ದ . . . ಹೇಗೂ ಗಲಾಟೆ ಇರುತ್ತೆ . . . ಅಲ್ಲಿ ನಮ್ಮ ಕಾರ್ಡು ಕ್ಯೂನಲ್ಲಿಟ್ಟು, ಕ್ಯೂನಲ್ಲಿ ನಮ್ಮ ಕಾರ್ಡಿನ ಪಕ್ಕದಲ್ಲಿ ಯಾರು ಕಾರ್ಡು ಇಟ್ಟಿರ್ತಾರೋ ಅವರ ಹತ್ತಿರ ಮಾತನಾಡ್ತಾ ಇರತೇನೆ. ಆಗ ನೀನು ಬಂದು, 'ಕಾರ್ಡು ಬೇಕಂತೆ. ಅಮ್ಮ ಹೇಳಿದಳು' ಅಂತ ಅನ್ನು. 'ಅಲ್ಲಿದೆ, ತೆಗೋ' ಅಂತ ಹೇಳಿ, ನಾನು ಅವರನ್ನ ಮಾತಾಡಿಸ್ತಾ ಇರ್ತೇನೆ. ನೀನು ಅವರ ಕಾರ್ಡ್ನ ಎತ್ತಿಕೊಂಡು ಬಂದುಬಿಡು . . . ಅದರಲ್ಲಿ ಬೆಲ್ಲ ತೆಗೊಂಡು ಆದ ಮೇಲೆ, 'ಮರೆತು ತೆಗೊಂಡು ಹೋದೆ' ಅಂತ ಹಿಂದಕ್ಕೆ ಕೊಟ್ಟರೆ ಆಯ್ತು . . . ಅವರೆಲ್ಲಿ ನೋಡ್ಕೋತಾರೆ ಆ ಅವಸರದಲ್ಲಿ . . . ?

**ಹುಡುಗ :** ನಾನು ಬರೋಲ್ಲಣ್ಣ . . . ಬರೀಬೇಕಾದ್ದು ಬೇಕಾದಷ್ಟಿದೆ . . . ೨೫ ಲೆಕ್ಕ ಕೊಟ್ಟಿದ್ದಾರೆ ಮೇಷ್ಟ್ರು ನೆನ್ನೆ . . .

**ರಾಯರು :** ನಡಿಯೋ ಕಂಡಿದೀನೀ . . . ನೀ ಮಾಡೋ ಲೆಕ್ಕಾನ . . . (ಹುಡುಗನ ಭುಜದ ಮೇಲೆ ಕೈಯಿಟ್ಟು ಹೊರಡುವಂತೆ ತಳ್ಳುವರು. ಹುಡುಗ

ವಿರೋಧಿಸುವಂತೆ ಮುಖ ಸೊಟ್ಟಗೆ ಮಾಡಿ ನಿಲ್ಲುವನು.) ನಡಿಯೋ ಕಂಡಿದೀನಿ ನಿಮ್ಮ ಸ್ಕೂಲ್ನ . . . ಇವತ್ತು ರಜಾ ಚೀಟಿ ಬರೆದು ಕಳಿಸೋಣ. (ಹುಡುಗ ಸಂತೋಷದಿಂದ ನಡೆಯುವನು. ಒಳಗೆ ಗಡಿಯಾರ ಒಂಬತ್ತು ಗಂಟೆ ಹೊಡೆಯುವುದು. ರಾಯರು ಹೆಂಡತಿಯ ಕಡೆಗೆ ತಿರುಗಿ) ನೋಡಿದೆಯಾ, ಆಗಲೇ ಒಂಬತ್ತು ಗಂಟೆ ಆಯ್ತು; ಸದ್ಯ ಬೇಗ ಬೇಯಿಸು, ಹೋಗು . . . ಹತ್ತು ಗಂಟೆಗೇ ಹೋಗಬೇಕು ಇವತ್ತು ಆಫೀಸಿಗೆ . . . (ಎನ್ನುತ್ತಾ ಹುಡುಗನೊಡನೆ ಹೋಗುವರು. ಆಕೆ ಬಂದು ಕ್ಷಣ ನಿಂತಿದ್ದು ಒಳಗೆ ಹೋಗುವರು.)

[ಅರೆ ನಿಮಿಷ ರಂಗಸ್ಥಳ ಖಾಲಿಯಾಗಿರುವುದು. ಒಳಗೆ ಗಡಿಯಾರ ಒಂದು ಸಾರಿ ಗಂಟೆ ಹೊಡೆದು, ಅರ್ಧ ಗಂಟೆ ಕಳೆಯಿತೆಂಬುದನ್ನು ತೋರಿಸುವುದು. ಆಕೆ ಮತ್ತೆ ಬರುವರು.]

**ಆಕೆ:** ಇದೇನಿದು . . . ಅರ್ಧ ಗಂಟೆ ಆದರೂ ಇನ್ನೂ ಬರಲಿಲ್ಲ . . . ಇವರೋ ಯಾವ ಮೋಸಕ್ಕೂ ಹೇಸೊಲ್ಲ . . . ಎಲ್ಲಾದರೂ ಕಾರ್ಡಿನವರಿಗೆ ಇವರ ಮೋಸ ಗೊತ್ತಾದರೆ ಏನುಗತಿ? . . . ಸದ್ಯ . . . ಯಾಕಾದರೂ ನಾನು 'ಬೆಲ್ಲ ತನ್ನಿ' ಅಂತ ಅಂದೆನೋ? . . . ಯಾರ ಕಾರ್ಡು ಸಿಕ್ಕುತ್ತೋ ಇವರ ಕೈಗೆ (ಯೋಚಿಸುತ್ತಾ ನಿಲ್ಲುವರು. ನೇಪಥ್ಯದ ಕಡೆ ನೋಡಿ ಸಂತೋಷದಿಂದ) ಸದ್ಯ . . . ಬರ್‍ತಿದಾರಲ್ಲ . . . ನಗನಗತಾನೇ ಇದ್ದಾರೆ, ಪರವಾ ಇಲ್ಲ . . . (ರಾಯರು ಸಂತೋಷವಾಗಿ ಬರುವರು) ಏನು ಅಂದ್ರೆ, ಸಿಕ್ತೇ?

**ರಾಯರು:** ಸಿಕ್ದೇ? ನಾನು ಹೋದಮೇಲೆ ಸಿಕ್ಕದೆ ಇರುತ್ಯೇ? ನೋಡೇ . . . ಯಾರದೋ ದೊಡ್ಡ ಮನೆಯೋರದೇ ಸಿಕ್ಕಿದೆ . . . ೨೫ ಜನ ಅಂತ ಕೊಟ್ಟಿದಾರೆ ಕಾರ್ಡಿನಲ್ಲಿ . . . ನಿಜವಾಗಿರೋರು ಎಷ್ಟೋ ದೇವರೇ ಬಲ್ಲ!

**ಆಕೆ:** ಅದು ಹೋಗಲಿ . . . ಬೆಲ್ಲ ತಂದಿರೇನು? ಸದ್ಯ ಜಾಗ್ರತೆ ಅವರ ಕಾರ್ಡು ಅವರಿಗೆ ತಲುಪಿಸಿಬಿಡಿ.

**ರಾಯರು:** ಅಲ್ವೇ, ದುಡ್ಡು ನಿನ್ನ ಹತ್ರ ಇಟ್ಕೊಂಡು ನನ್ನ 'ಬೆಲ್ಲಾ ತಂದ್ರಾ' ಅಂತೀಯಲ್ಲಾ . . . ದುಡ್ಡು ಕೊಡ್ದೇ ಬೆಲ್ಲಾ ಕೊಡೋಕೆ ಸೊಸೈಟಿಯವರೇನು ನನ್ನ ಮಾವ ಅಂದ್ಕೊಂಡ್ಯಾ?

**ಆಕೆ:** ಅಂದ್ಹಾಗೆ . . . ನನಗೂ ಮರ್ತೇ ಹೋಗಿತ್ತಲ್ಲ ಅಂದ್ರೆ! (ಒಳಕ್ಕೆ ಹೋಗಲು ತಿರುಗುವರು.)

**ರಾಯರು :** ಮಾವ ಕೂಡಾ ಕೊಡೊಲ್ಲ . . .

**ಆಕೆ :** ('ಮಾವ' ಎಂಬ ಮಾತು ಕಿವಿಗೆ ಬಿದ್ದೊಡನೆಯೆ ಸರಕ್ಕನೆ ನಿಂತು, ಹಿಂದಿರುಗಿ ನೋಡಿ) ಏನೂ ಅಂದ್ರೆ? ಏನೋ ಮಾನ ಅಂದ್ರಿ?

**ರಾಯರು :** ಇಲ್ಲ ಇಲ್ಲ . . . ನಿನ್ನಲ್ಲ ಕಣೇ . . . ಜಾಗ್ರತೆ ಕೊಡು . . . ಇಲ್ದಿದ್ರೆ ನನ್ನ 'ಮಾನ' ಹೋದೀತೂ ಅಷ್ಟೆ, ಹೋಗು ದುಡ್ಡು ತಾ . . .

[ಆಕೆ ಒಳಗೆ ಹೋಗಿ ದುಡ್ಡು ತಂದು ರಾಯರ ಕೈಗೆ ಕೊಡುತ್ತಾರೆ.]

**ಆಕೆ :** ಅಲ್ಲಾ ಅಂದ್ರೆ . . . ಕಾರ್ಡು ವಾಪಸ್ಸು ಕೊಡೋಕೆ ನೀವು ಹೋಗಬೇಡಿ. ಅವರೇನಾದರೂ ನೋಡಿಕೊಂಡಾರು ಎದುರುಗೇನೇ. ಹುಡುಗನ್ನ ಕಳಿಸಿಬಿಡಿ . . .

**ರಾಯರು :** ಸದ್ಯ ನಿನ್ನ ಬುದ್ಧಿವಾದ ಕಡಿಮೆ ಮಾಡಿದರೆ ಸಾಕು.

[ಹೋಗುವರು. ಆಕೆಯೂ ಒಳಗೆ ಹೋಗುವರು.]

[ಒಂದು ನಿಮಿಷ ರಂಗ ಬರಿದಾಗಿರುವುದು. ಒಳಗೆ ಗಡಿಯಾರ ಹತ್ತು ಗಂಟೆ ಹೊಡೆಯುವುದು. ಅನಂತರ ಬೆಲ್ಲದ ಪೊಟ್ಟಣದೊಂದಿಗೆ ರಾಯರು ಪ್ರವೇಶಿಸುವರು. ರಾಯರು ಹಸನ್ಮುಖದಿಂದ ಸುತ್ತಲೂ ನೋಡಿ—]

**ರಾಯರು :** ಲೇeeeeeee . . . !

**ಆಕೆ :** ಏನೂ ಅಂದ್ರೆ . . . ಹಾಗೆ ಕೂಗ್ತೀರಾ? ಮುಂದಿನ ಸಾರಿ ಚುನಾವಣೆಗೆ ನಿಲ್ತೀರೇನು? . . . (ಕೈಯಲ್ಲಿದ್ದ ಪೊಟ್ಟಣ ನೋಡಿ) ಸದ್ಯ ಸಿಕ್ಕಿತೇ? ನಾನು, ಏನೋ ಸಿಕ್ಕುತ್ತೋ ಇಲ್ಲವೋ ಅಂದುಕೊಂಡಿದ್ದೆ . . . ಎಲ್ಲೀ? (ಪೊಟ್ಟಣ ಗಂಡನ ಕೈಯಿಂದ ತೆಗೆದುಕೊಂಡು) ಇದೇನೂ . . . ಇಷ್ಟು ಭಾರ ಇದೆ . . . ಎರಡು ವೀಸೇನೇ?

**ರಾಯರು :** ಅಲ್ಲಾ ಕಣೆ . . . ಹೇಗೂ ಕಾರ್ಡು ಸಿಕ್ಕಿತು . . . ಯಾಕೆ ಬಿಡಬೇಕೂ ಅಂತ ಎರಡು ವೀಸೆ ತಂದುಬಿಟ್ಟೆ . . . ಆ ಕಾರ್ಡಿನಲ್ಲಿ ಜನಾನೂ ಜಾಸ್ತಿ ಇದ್ರು . . . ಅಲ್ಲದೆ, ಒಂದು ಸಾರೀನೂ ಬೆಲ್ಲ ತೆಗೆದು ಕೊಂಡಿರಲಿಲ್ಲ. ಸರಿ ಅಂತ ಉಪಯೋಗಿಸಿದೆ ನನ್ನ ಬುದ್ಧೀನ. ಏನಾದರೂ ಆಗಲಿ ಅಂತ ತಂದೇಬಿಟ್ಟೆ, ಎರಡು ವೀಸೇನ. ಅಲ್ಲಾ, ನಿಮ್ಮ ತಂದೆ ಅಂತಿದ್ರು ಅಂತ ನೀನೂ ಅಂತೀಯಲ್ಲಾ ನನಗೆ ಬುದ್ಧಿಯಿಲ್ಲಾ ಅಂತ . . . ನೋಡಿದೆಯಾ ನನ್ನ ಬುದ್ಧೀನ?

**ಆಕೆ :** ಅದು ಸರಿ . . . ಮಗೂನ ಎಲ್ಲಿ ಕಳಿಸಿದ್ರಿ ? . . .

**ರಾಯರು :** ಅಲ್ಲಾ ಕಣೇ, ನೀನೇ ಹೇಳ್ಲಿಲ್ವೆ? . . . ನಾನೇ ಕಾರ್ಡು ಕೊಡೋಕೆ ಹೋದರೆ ಆಗ ಅವರು ಅಕಸ್ಮಾತ್ ಕಾರ್ಡು ತೆಗೆದು ನೋಡಿಬಿಟ್ಟರೆ . . . ನನ್ನ ಮಾನದ ಗತಿಯೇನು ? . . . ಹುಡುಗ ಆದರೆ . . . ಅದೇನೋ ನಂಗೇನು ಗೊತ್ತು ಅಂದುಬಿಡಬಹುದು . . . ಅಲ್ಲದೆ ಹುಡುಗನ್ನ ಯಾರು ಅಷ್ಟು ಕೇಳೋಕೆ ಹೋಗ್ತಾರೆ . . . ಅಂತ ನೀನೇ ಹೇಳ್ಲಿಲ್ವೆ ?

**ಆಕೆ :** ಅಲ್ಲಾಂದ್ರೇ . . . ನೀವೇನೋ ಬೆಲ್ಲ ತಂದುಬಿಟ್ರಲ್ಲಾ . . . ಅವರು ಕಾರ್ಡನ್ನ ನೋಡಿಕೊಂಡು . . . ನಿಮ್ಮನ್ನೆ ಹುಡುಕಿಕೊಂಡು ಬಂದ್ರೆ?

**ರಾಯರು :** ಬಿಡೇ ಬಿಡೇ. ಅದಕ್ಕೇನು ದಿಗಿಲು? ಒಂದು ಸಾರಿ ಅವರ ಕೈಗೆ ಕಾರ್ಡು ಹೊರಟುಹೋಗಿ, ನಮ್ಮ ಕಾರ್ಡು ನಮ್ಮ ಕೈಗೆ ಬಂದು ಬಿಟ್ಟಮೇಲೆ, 'ನೀವೇ ಬೆಲ್ಲ ಬೆಳಗ್ಗೆ ತೆಗೆದುಕೊಂಡಿದ್ರೋ ಏನೋ' ಅಂತ ದಬಾಯಿಸಿದರೆ ಆಯಿತು. ಬರ್ಲಿ ಕೇಳೋಕೆ ಅಂತ . . . ನೋಡೋಣ ನನ್ನ ಎದುರಿಗೆ ನಿಂತು ಮಾತಾಡೋಕೆ ಯಾರಿಗಿದೆ ಧೈರ್ಯ ಅಂತಾ . . .

**ಆಕೆ :** ಇರಲಿ ನಿಮ್ಮ ಪ್ರತಾಪ. ಸದ್ಯ ಹುಡುಗ ಇಷ್ಟು ಹೊತ್ತಾದ್ರೂ ಬರ್ಲಿಲ್ಲ . . . ಹೋಗಿ ನೋಡಿ. (**ನೇಪಥ್ಯದ ಕಡೆ ನೋಡಿ**) ಅಗೋ ಬಂದ!

[**ಹುಡುಗ, ರೇಷನ್ ಕಾರ್ಡಿನೊಡನೆ ಪ್ರವೇಶಿಸುವನು.**]

**ರಾಯರು :** ಕೊಟ್ಟೆಯೇನೋ ಅವರ ಕಾರ್ಡನ್ನ ?

**ಹುಡುಗ :** (ತಂದೆಯ ಕೈಗೆ ಕಾರ್ಡನ್ನು ಕೊಟ್ಟು) ಅವರು ತೆಗೆದು ಕೂಡಾ ನೋಡಲಿಲ್ಲ, ಅಣ್ಣ. ತೊಗೊಂಡು ಹೋದೆ. ಅವರು ನಮ್ಮ ಕಾರ್ಡು ಕೈಯಲ್ಲಿಟ್ಟುಕೊಂಡು ಕ್ಯೂ ಹತ್ತಿರವೇ ಕಾದಿದ್ರು. 'ಏನಪ್ಪಾ ಮಗೂ, ನಮ್ಮ ಕಾರ್ಡು ನೀ ತೆಗೆದುಕೊಂಡು ಹೋಗಿದ್ದೆಯಾ?' ಅಂದ್ರು. ನಾನು, ನೀನು ಹೇಳಿಕೊಟ್ಟ ಹಾಗೇನೇ 'ಸಾರಿ ಕಣ್ರೀ, ನೋಡದೇ ಅವಸರದಲ್ಲಿ ತೆಗೊಂಡು ಹೋಗ್ಬಿಟ್ಟೆ' ಅಂದೆ. ಅದಕ್ಕೆ ಅವರು 'ಏನೂ ಚಿಂತೆ ಇಲ್ಲಪ್ಪಾ. ಏನು ಮಾಡೋಕಾಗುತ್ತೆ ? ಅವಸರದಲ್ಲಿ ಬದಲಾವಣೆ ಆಗುತ್ತೆ' ಅಂತ ಹೇಳಿ, ಅವರ ಕಾರ್ಡನ್ನ ತೆಗೊಂಡು, ಅದನ್ನ ತೆಗೆದುಕೂಡಾ ನೋಡದೇ, ನಮ್ಮ ಕಾರ್ಡು ತೆಗೆದು ನನ್ನ ಜೇಬಿನಲ್ಲಿ ತಾವೇ ಮಡಿಸಿಟ್ಟು, 'ಹುಷಾರಾಗಿ ಹೋಗಪ್ಪಾ ಮಗೂ' ಅಂತ ಬೆನ್ನು ತಟ್ಟಿ ಕಳಿಸಿದ್ರು . . .

**ರಾಯರು :** ಸದ್ಯ, ಹೋದ ಕಾರ್ಡು ಕೈಗೆ ಬಂತಲ್ಲ ಅಂತ ಪ್ರಾಣಿ ತುಂಬ ಸಂತೋಷಪಟ್ಟಿರಬೇಕು. ಪಾಪ! ಬೆಲ್ಲ ತಿಂದಷ್ಟು ಸಂತೋಷ ಆಗಿರಬೇಕು ಅವನಿಗೆ. ಕಾರ್ಡು ತೆಗೆದು ನೋಡಿಕೊಂಡಾಗ ಗೊತ್ತಾಗುತ್ತೆ ಆ ಪ್ರಾಣಿಗೆ ಅದರ ಕಹಿ . . . ಹೋಗ್ಲಿ, ಹತ್ತೂವರೆ ಆಗ್ತಾ ಬಂತು . . . ಎಲೆ ಹಾಕ್ಬೇನು? . . . ತಗೋ, ಕಾರ್ಡು ಒಳಗಿಡು. (ಎಂದು ಕಾರ್ಡನ್ನು ಆಕೆಯ ಕೈಗೆ ಕೊಡುವರು.)

**ಆಕೆ :** ಪಾಪ! ಎಷ್ಟು ನೊಂದುಕೊಳ್ಳುತಾರೊ ಅವರು ಕಾರ್ಡನ್ನ ನೋಡಿಕೊಂಡಾಗ! (ಎನ್ನುತ್ತಾ ಕಾರ್ಡನ್ನು ಕೈಗೆ ತೆಗೆದುಕೊಂಡು, ಒಳಗೆ ಹೋಗಲು ತಿರುಗಿ, ಹಾಗೆಯೇ ಅದನ್ನು ಬಿಚ್ಚಿ ನೋಡಿ, ಬೆಚ್ಚಿ, ತಿರುಗಿ) ಅಯ್ಯೋ! ಇಲ್ನೋಡೀ ಅಂದ್ರೇ . . . ಇದೇನೋ ಕಾರ್ಡ್ನಲ್ಲಿ ಹೊಸದಾಗಿ ಬರೆದಿರೋ ಹಾಗಿದೆ!

**ರಾಯರು :** ಏನೇ ಅದೂ? (ಎನ್ನುತ್ತಾ ಕಾರ್ಡನ್ನು ಕೈಗೆ ತೆಗೆದುಕೊಂಡು ನೋಡಿ, ಹಾಗೆಯೇ ಎರಡು ಹೆಜ್ಜೆ ಹಿಂದಕ್ಕೆ ಸರಿದು ಕುರ್ಚಿಯ ಬಳಿ ನಿಂತು) ಅಯ್ಯೋ! ನೋಡಿದ್ಯೇನೇ! ಮೂರು ವಾರದ ಅಕ್ಕೀನೂ ಕಾರ್ಡಿನಲ್ಲಿ ಬರೆಸಿ ತಗೊಂಡು ಬಿಟ್ಟಿದ್ದಾರಲ್ಲೇ! ಅಯ್ಯಯ್ಯೋ! ಇನ್ನೇನು ಗತಿ! ಇನ್ನೂ ಇಪ್ಪತ್ತು ದಿವಸ ಇದೆಯಲ್ಲಾ ತಿಂಗಳಿಗೆ! (ಎನ್ನುತ್ತಾ ಸುಸ್ತಾಗಿ ಕುರ್ಚಿಯಲ್ಲಿ ಕುಕ್ಕರಿಸುವರು.)

**ಆಕೆ :** (ಕೈ ಕೈ ಹಿಸುಕಿಕೊಳ್ಳುತ್ತ,) ಅಯ್ಯೋ . . . ಅನ್ಯಾಯವಾಯ್ತಲ್ಲಾ ಅಂದ್ರೆ . . . ಅವರ ಗುರುತಾದರೂ ಇದೆಯೇ ಅಂದ್ರೆ ನಿಮಗೇ? (ರಾಯರು ಕುರ್ಚಿಯಲ್ಲಿ, ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತು, 'ಇಲ್ಲ' ಎಂಬಂತೆ ತಲೆಯಾಡಿಸಿ, ಕೈ ಅಲ್ಲಾಡಿಸುವರು.) ಇನ್ನೇನು ಗತೀ ಅಂದ್ರೆ . . . ಇನ್ನು ಇಪ್ಪತ್ತು ದಿವಸ ಏಕಾದಶೀ ವ್ರತ ಆಯ್ತಲ್ಲಾ . . . ನಾನವತ್ತೇ ಹೇಳಿದೆ: 'ತಿಂಗಳಿಗೆ ರೇಷನ್ ಒಟ್ಟಿಗೇ ತಂದುಬಿಡಿ' ಅಂತ . . . ನನ್ನ ಮಾತು ಎಲ್ಲಿ ಕೇಳ್ತೀರಿ . . . ನಿಮ್ಮದೇ ವಿಚಿತ್ರ ಬುದ್ಧಿ . . . ಅನುಭವಿಸಿ ಈಗ . . . ಬೆಲ್ಲ ಸಿಕ್ಕಿದ ಕಹೀನ . . . ಇನ್ನೂ ಇಪ್ಪತ್ತು ದಿವಸ . . . ಅಷ್ಟಲ್ಲದೇ ಅಂತಾ ಇದ್ರೇ ನಮ್ಮಪ್ಪ . . . (ಎನ್ನುತ್ತಾ ಕೆಳಗೆ ಬಿದ್ದಿದ್ದ ಕಾರ್ಡನ್ನು ಕೈಗೆ ತೆಗೆದುಕೊಳ್ಳುವರು. ರಾಯರು ತಲೆಯಮೇಲೆ ಕೈ ಇಟ್ಟುಕೊಂಡೇ ಕುಳಿತಿರುವರು.)

[ತೆರೆ ನಿಧಾನವಾಗಿ ಬೀಳುವುದು.]

—ಕಾ. ನಾ. ಶೇಷಗಿರಿರಾವ್

# ಉಪ್ಪಿನ ಕಾಯಿ

ಎಲ್ಲರಿಗೂ ತಿಳಿದ ಹಾಗೆ ಉಪ್ಪಿನಕಾಯಿ—ಹಾಗಲಕಾಯಿ, ಹೇರಿಳೆ ಕಾಯಿ, ನಿಂಬೆಕಾಯಿ ಮೊದಲಾದವುಗಳಂತೆ ಗಿಡದಲ್ಲಿ ಬೆಳೆಯುವ ಪದಾರ್ಥ ವಲ್ಲವಾದರೂ, ಮನೆಯ ಗೃಹಿಣಿಯ ಕೈವಾಡದಿಂದ ಜನ್ಮತಾಳಿ, ಮನೆಯ ಜಾಡಿಯಲ್ಲಿ ಉಪ್ಪು ಖಾರ ತಿಂದು ಜೀವಿಸಿ, ಅದರ ಪೋಷಕರಿಗೆ ಆಹ್ಲಾದ ವನ್ನುಂಟುಮಾಡಲು ಹಟತೊಟ್ಟಿರುವ ವಸ್ತು—ಉಪ್ಪಿನಕಾಯಿ.

ಉಪ್ಪಿನಕಾಯಿ 'ಹಾಕು'ವುದಕ್ಕೆ ಅನೇಕ ಕಾಯಿಗಳನ್ನು ಉಪ ಯೋಗಿಸುತ್ತಾರೆ. ಉದಾಹರಣೆಗೆ—ನಿಂಬೆಕಾಯಿ, ಹೇರಿಳೆಕಾಯಿ, ನೆಲ್ಲಿ ಕಾಯಿ, ಮಾವಿನಕಾಯಿ ಇತ್ಯಾದಿ. ಉಪ್ಪಿನಕಾಯಿಗೆ, ಅದರ ಹೆಸರೇ ಸೂಚಿಸುವಂತೆ, ಉಪ್ಪೇ ಆಧಾರ. ಉಪ್ಪಿದ್ದರೆ ಅನೇಕ ಪದಾರ್ಥಗಳನ್ನು ಕೆಡದಂತೆ ಇಡಬಹುದು. ಆ ಅನೇಕ ಪದಾರ್ಥಗಳಲ್ಲಿ ಉಪ್ಪಿನಕಾಯಿಯೂ ಒಂದು. ಉಪ್ಪಿಲ್ಲದೆ ಯಾವ ಜಾತಿಯ ಉಪ್ಪಿನಕಾಯಿಯೂ ತನ್ನನ್ನು ತನ್ನ ಶತ್ರುಗಳಿಂದ ರಕ್ಷಿಸಿಕೊಳ್ಳಲಾರದು. ಉಪ್ಪಿನಕಾಯಿ ಜನಜೀವನದಲ್ಲಿ ಎಂತಹ ಪ್ರಮುಖ ಸ್ಥಾನವನ್ನು ಗಳಿಸಿದೆ ಎಂದರೆ, ಉಪ್ಪಿನಕಾಯಿ ಇಲ್ಲದ ಮನೆಯನ್ನು ಉಪ್ಪಿಲ್ಲದ ಮನೆಯನ್ನು ಪರಿಗಣಿಸುವ ದೃಷ್ಟಿಯಲ್ಲೆ ಪರಿಗಣಿಸುತ್ತೇವೆ.

ಜ್ವರದಿಂದ ಬೆಂದು ಬಳಲಿರುವ ಒಬ್ಬ ರೋಗಿ ಅನೇಕ ಸಿಹಿ ಪದಾರ್ಥ ಗಳಿಗಿಂತಲೂ ಒಂದು ಉಪ್ಪಿನಕಾಯಿ ಹೋಳನ್ನು ಪ್ರೀತಿಸುತ್ತಾನೆ. ಅದು ಅವನಿಗೆ ಅಮೃತದಷ್ಟು ಹಿತವಾಗಿರುತ್ತದೆ. ಅದು ಬಾಯಲ್ಲಿದ್ದಿತೆನ್ನಿ—ಆಗ ಅವನ ಮುಖ ಪ್ರಫುಲ್ಲವಾಗುತ್ತದೆ, ಕಣ್ಣಿನ ಕಾಂತಿ ಅದರ ಎರಡರಷ್ಟಾಗುತ್ತದೆ, ಬಾಯಲ್ಲಿ ನೀರಿನ ಕಟ್ಟೆಯೊಡೆಯುತ್ತದೆ.

ದೊಡ್ಡ ದೊಡ್ಡ ಮನೆಗಳಲ್ಲಿ, ಅದರಲ್ಲೂ ಹಳೇ ಶ್ಯಾನುಭೋಗರ ಮನೆ ಗಳಲ್ಲಿ, ಅವರು ನಮಗೆ ತೋರಿಸುವುದೇನು ಗೊತ್ತೆ? ಅವರ ಹಿಂದಿನವರು ಉಪ್ಪಿನಕಾಯಿ 'ಹಾಕಲು' ಉಪಯೋಗಿಸುತ್ತಿದ್ದ ಮರಿಗೆಗಳನ್ನು. ಅಬ್ಬ! ಅವೆಷ್ಟು ದೊಡ್ಡವು! ಈಗೀಗ ನಾವು ಅದಕ್ಕಿಂತ ಒಂದೆರಡು ಸುತ್ತು ದೊಡ್ಡ ಪಾತ್ರೆಗಳನ್ನು ನಮ್ಮ ನೀರುಮನೆಯಲ್ಲಿ ನೀರು ಶೇಖರಿಸುವ ಕೊಳದಪ್ಪಲೆ ಯಾಗಿ ಉಪಯೋಗಿಸುತ್ತಿದ್ದೇವೆ! ಈಗೀಗ ಉಪ್ಪಿನಕಾಯಿ ತನ್ನ ಸ್ಥಾನ

ವನ್ನು ಸ್ವಲ್ಪಸ್ವಲ್ಪ ಕಳೆದುಕೊಳ್ಳುತ್ತಿದೆ. ಆದರೂ ಇನ್ನೂ ಪೂರ್ತಿಯಾಗಿ ಕಳೆದುಕೊಂಡಿಲ್ಲ, ಕಳೆದುಕೊಳ್ಳುವುದಿಲ್ಲ; ಹಬ್ಬ ಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ, ತಿಥಿ ಮೊದಲಾದ ದಿನಗಳಲ್ಲಿ, ಎಲೆಯ ಎಡಗಡೆ ಮೇಲ್ಭಾಗ ದಲ್ಲಿ ಉಪ್ಪಿನ ಪಕ್ಕದಲ್ಲಿ, ಗಂಡನೊಡನಿರುವ ಹೆಂಡತಿಯಂತೆ ಕಂಗೊಳಿಸು ತ್ತಿರುತ್ತದೆ.

ವೈಜ್ಞಾನಿಕರು ಯಾವುದಾದರೊಂದು ಪದಾರ್ಥದ ಗುಣವಿಶೇಷಗಳನ್ನು ಕಂಡುಹಿಡಿಯಲು ಅದರ ಮೇಲೆ ಎಷ್ಟು ಪ್ರಯೋಗಗಳನ್ನು ಮಾಡಿದ್ದರೊ, ಮಾಡುತ್ತಾರೊ, ಅಷ್ಟು ಅಥವಾ ಅಷ್ಟಕ್ಕಿಂತ ಹೆಚ್ಚು ಪ್ರಯೋಗಗಳನ್ನು ನಮ್ಮ ಹಿರಿಯರು ಉಪ್ಪಿನಕಾಯಿಯ ಮೇಲೆ ನಡೆಸಿದ್ದಾರೆ. ನಾವು ಉಪಯೋಗಿಸದ ಅನೇಕ ಕಾಯಿ ಬೇರುಗಳನ್ನು ಇದರೊಡನೆ ಸೇರಿಸುವ ಪ್ರಯತ್ನ ಮಾಡಿದರು. ದೇವರ ದಯೆಯಿಂದ ಅವರ ಪ್ರಯತ್ನ ಸಫಲವಾಗಿದೆ. ಅದರಂತೆ ಈಗೀಗ ನಾವು ಉಪ್ಪಿನಕಾಯಿಯೊಡನೆ ಹಾಗಲಕಾಯಿ, ಮಾಕಳಿಬೇರು ಇವುಗಳನ್ನು ಸೇರಿಸುತ್ತಿಲ್ಲವೆ? ಇವುಗಳ ಸೇರುವಿಕೆಯಿಂದ ಉಪ್ಪಿನಕಾಯಿಗೆ ಒಂದು ವಿಧ ವಾದ ರುಚಿ, ಸುವಾಸನೆ, ಬರುತ್ತದೆ. ಅದೂ ಅಲ್ಲದೆ ಉಪ್ಪಿನಕಾಯಿ ಬಹಳ ಕಾಲ ಕೆಡದೆ ಇರಬಲ್ಲದೆಂದು ಕಂಡುಹಿಡಿದಿದ್ದಾರೆ. ಸಾಮಾನ್ಯವಾಗಿ ಉಪ್ಪಿನ ಕಾಯಿಗೆ ಅದಕ್ಕೆ ಬೇಕಾದ ಪದಾರ್ಥಗಳನ್ನು ಹೆಚ್ಚಿ ಹಾಕಿಬಿಟ್ಟರೆ ಅದು ಉಪ್ಪು ಖಾರಗಳೊಡನೆ ಬೆರೆತು ಪಕ್ವವಾಗಲು ಬಹುಕಾಲ ಹಿಡಿಯುತ್ತದೆ. ಮನೆಯಲ್ಲಿ ಉಪ್ಪಿನಕಾಯಿ ಥಂಡಿಯಾಗಿ ಇದ್ದೂ ಅದನ್ನು ಉಪಯೋಗಿ ಸಲು ಸಾಧ್ಯವಿಲ್ಲ. ಅದರಲ್ಲೂ ನಿಂಬೆಯ ಉಪ್ಪಿನಕಾಯನ್ನು ಅದು ಪಕ್ವ ವಾಗುವ ವರೆಗೂ ನಾಲಗೆಗೆ ಸೋಕಿಸುವುದೇ ಕಷ್ಟ. ಅಬ್ಬ! ಅದೆಷ್ಟು ಕಹಿ ವಿಷ! ಇಷ್ಟು ಕಹಿಯಾಗಿದ್ದರೂ ಅದನ್ನು ಉಪಯೋಗಿಸದೆ ಇರಲು ಮನಸ್ಸು ಒದ್ದಾಡುತ್ತದೆ. ಆದರೆ ನಿಂಬೆಕಾಯನ್ನು ಹಚ್ಚದೆ ಬೇಯಿಸಿ (ಬೇಯಿಸಲು ಒಂದು ಮಿತಿ ಇದೆ. ಅದು ಸಾಕಷ್ಟು ಬೆಂದಾಗ, ನೋಡಲು 'ಮುದುಕಿ ಕೆನ್ನೆ' ಯಂತಾಗುತ್ತದಂತೆ.) ಆದಕ್ಕೆ ಉಪ್ಪಿನಕಾಯಿಗೆ ಮಾಡುವ ಪ್ರಯೋಗಗಳನ್ನು ಮಾಡಿದರೆ ಆಗ ಆ ಉಪ್ಪಿನಕಾಯಿ ಎರಡೇ ದಿನದಲ್ಲಿ ಉಪಯೋಗಿಸಲು ಯೋಗ್ಯವಾಗುವುದೆಂದು ಕಂಡುಹಿಡಿದರು. ಈ ಪ್ರಯೋಗದ ಪರಿಣಾಮವಾಗಿ ಮದುವೆ ಮುಂಜಿ ನಡೆಯಬೇಕಾದ ದಿವಸಕ್ಕೆ ಎರಡು ಮೂರು ದಿನದ ಮುಂಚೆ

ಹೊಸದಾಗಿ ಈ ವಿಧದ ಉಪ್ಪಿನಕಾಯನ್ನು ಹಾಕುತ್ತಾರೆ. ಈ ಪ್ರಯೋಗಗಳ ಅನಂತರ 'ಉಂಡೆ ಉಪ್ಪಿನಕಾಯಿ'ಯ ಉಪಯೋಗ ಹೆಚ್ಚಿದೆ.

'ಲೋಕೋ ಭಿನ್ನರುಚಿಃ' ಅಲ್ಲವೆ? ಅದರಂತೆ ಅನೇಕರ ಮನೆಗಳಲ್ಲಿ ಉಪ್ಪಿಗಿಂತ ಖಾರವನ್ನೆ ಹೆಚ್ಚು ಉಪಯೋಗಿಸುತ್ತಾರೆ. ಆ ಉಪ್ಪಿನಕಾಯನ್ನು ನಾಲಗೆಯ ಮೇಲೆ ಇಟ್ಟರಾಯಿತು, ಇಲ್ಲ ನಾಲಗೆಯೆ ಕಳಚಿ ಬಿದ್ದು ಹೋಯಿತೊ! ಅಥವಾ, ನಾಲಗೆ ಖಾರದಲ್ಲಿ ಕರಗಿಹೋಯಿತೋ! ಎನ್ನಿಸುತ್ತದೆ. ಆದರೂ ಒಂದಿಷ್ಟು ದಿನ ಅದನ್ನು ಬಿಟ್ಟರಾಯಿತು,—ಅದೆಲ್ಲಿಂದ ಬರುತ್ತದೋ ಆ ಸಣ್ಣ ಒಂದು ಮಿಲಿಮೀಟರ್ ಉದ್ದದ ಬಿಳಿ ಕ್ರಿಮಿಗಳು!

ಆ ಖಾರದ ಮಡುವಿನಲ್ಲಿ ಮನುಷ್ಯ ಬದುಕಿರುವುದೇ ಕಷ್ಟ. ಅಂತಹದ ರಲ್ಲಿ ಈ ಕ್ರಿಮಿಗಳು ಹೇಗೆ ಬದುಕಿರುತ್ತವೊ ಆ ಪರಶಿವನೇ ಬಲ್ಲ. ನಮ್ಮಂತಹ ಶುದ್ಧ ಸಾತ್ತ್ವಿಕರ ಎಲೆಯಲ್ಲಿ ಇಂತಹ ಕ್ರಿಮಿಗಳು ಕಾಣಿಸಿದರೆ, ಅದೆಷ್ಟು ಅಸಹ್ಯವಾಗಬಹುದು!

ನನಗೆ ಓದಲು ಬಂದಮೇಲೆ ಕಥೆಪುಸ್ತಕಗಳನ್ನು ಓದುವ ಹಂಬಲ ಹೆಚ್ಚಾಯಿತು. ಇದು ಎಷ್ಟು ಹೆಚ್ಚಾಯಿತೆಂದರೆ: ನಾನು ಅನೇಕ ವೇಳೆ ಊಟದ ತಟ್ಟೆಯ ಮುಂದೆಯೂ ಓದುತ್ತಾ ಕುಳಿತಿರುತ್ತಿದ್ದೆ. ಈ ಅಭ್ಯಾಸ ವನ್ನು ದುರಭ್ಯಾಸವೆಂದರೂ, ನಾನು ನನ್ನ ಚಟವನ್ನು ಬಿಡಲಿಲ್ಲ.

ಒಂದು ದಿನ ನಮ್ಮ ಮನೆಗೆ ಅನೇಕ ಅತಿಥಿಗಳು ಬಂದಿದ್ದರು. ನಾನು ಎಂದಿನಂತೆಯೇ ಎಲೆಯ ಮುಂದೆ ಕುಳಿತು 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಓದುತ್ತಿದ್ದೆ. ಅದರಲ್ಲಿ ಮಾಂಸ ಮೊದಲಾದ ವಿಷಯಗಳು ಬಂತು. ಊಟದ ಹೊತ್ತಿನಲ್ಲಿ ಇದೇಕೆ ಓದಬೇಕೆಂದು ಪುಸ್ತಕವನ್ನು ಮುಚ್ಚಿ ಪಕ್ಕಕ್ಕಿಟ್ಟೆ. ಎಲೆ ನೋಡಿದರೆ—ಎಡಗಡೆ ಉಪ್ಪು, ಅದರ ಪಕ್ಕದಲ್ಲಿ ಉಪ್ಪಿನಕಾಯಿ, ಅದರ ಮಗ್ಗುಲಲ್ಲಿ ಪಲ್ಯ, ಅದಕ್ಕೆ ಓರಗೆಯಾಗಿ ಮಜ್ಜಿಗೆ ಹುಳಿ, ಮಧ್ಯೆ ಅನ್ನ, ಅನ್ನದ ಎಡಗಡೆ ಚಿತ್ರಾನ್ನ, ಅದರ ಮೇಲೊಂದು ಹಪ್ಪಳ, ಅದರಲ್ಲೆರಡು ಸಂಡಿಗೆ, ಎಲೆಯ ಬಲಗಡೆ ಕೆಳಭಾಗದಲ್ಲಿ ಶಾವಿಗೆ ಪಾಯಸ, ಅನ್ನದ ಕೊನೆ ಯಲ್ಲಿ ತೊವ್ವೆ, ಅದರ ಮೇಲೊಂದು ಮಿಳ್ಳೆ ತುಪ್ಪ. ಇವು ನನ್ನ ಕಡೆ ನೋಡಿ ನಗುತ್ತಿದ್ದುವು. ಊಟ ಮೊದಲಾಯಿತು. ಮಜ್ಜಿಗೆ ಹುಳಿಗೆ ಉಪ್ಪು ಸಾಕಷ್ಟಿರ ಲಿಲ್ಲವೆಂದು ತಲೆ ಎತ್ತಿ ಕೈ ಪಕ್ಕಕ್ಕಿಟ್ಟೆ. ಆದರೆ ನನ್ನ ಕಣ್ಣು ನನ್ನ ಅಪ್ಪಣೆ

ಇಲ್ಲದೆಯೆ ಉಪ್ಪಿನಕಾಯಿಯ ಮೇಲೆ ಹರಿಯಿತು. ಅಲ್ಲಿ ನಾನೇನು ಕಂಡೆ, ಗೊತ್ತೆ? ಆಗಲೆ ಹೇಳಿದೆನಲ್ಲ, ಅಂತಹ ಬಿಳಿಯ ಹುಳುವೊಂದು ತಲೆ ಎತ್ತಿ ನನ್ನನ್ನು ಎತ್ತಿಕೊ ಎಂದು ಕರೆಯುತ್ತಿತ್ತು. ನನಗೇನೋ ತುಂಬಾ ಅಸಹ್ಯ ವಾಯಿತು. ಅತ್ತಿತ್ತ ನೋಡಿ, ಯಾರೂ ನೋಡುತ್ತಿಲ್ಲವೆಂದು ಖಚಿತಮಾಡಿ ಕೊಂಡು, ಉಪ್ಪಿನಕಾಯನ್ನು ಎಲೆಯ ಕೆಳಗೆ ತಳ್ಳಿದೆ. ನಮ್ಮ ಅತಿಥಿಗಳಾರೂ ನೋಡಲಿಲ್ಲ. ನೋಡಿದ್ದರೆ, ಮನಸ್ಸಿಗೆ ಎಷ್ಟು ತೊಂದರೆಪಟ್ಟುಕೊಳ್ಳುತ್ತಿದ್ದರೊ?

ಆದಿನ ಲಾಗಾಯ್ತು, ಎಲೆಯ ಮುಂದೆ ಕುಳಿತು ಓದುವ ಚಟ ಹಾರಿ ಹೋಯಿತು. ಎಲೆಯಲ್ಲಿರುವ ಪದಾರ್ಥಗಳನ್ನು, ಅದರಲ್ಲಿಯೂ ಉಪ್ಪಿನ ಕಾಯನ್ನು, ಪರೀಕ್ಷಿಸುವ ಕಾರ್ಯವನ್ನು ಕೈಗೊಂಡೆ; ಸದಾ ಎಲೆಯಲ್ಲಿರುವ ಉಪ್ಪಿನಕಾಯನ್ನು ಕಣ್ಣವೆ ಸಹ ಮುಚ್ಚದೆ ಪರೀಕ್ಷಿಸುತ್ತಿದ್ದೆ. ಒಂದು ದಿನ ನಮ್ಮ ತಾಯಿಯವರು ನನ್ನನ್ನು ಬೈದರು. ಎಷ್ಟು ದಿವಸ ಪರೀಕ್ಷಿಸಿದರೂ ನನ್ನ ಕಣ್ಣಿಗೇನೂ ಬೀಳಲಿಲ್ಲ. ಅದರಿಂದ ನನ್ನ ಉತ್ಸಾಹ ಕಡಮೆಯಾಯಿತು. ಆದರೆ ನನ್ನನ್ನು ಎಚ್ಚರಿಸಲೇನೋ ಎಂಬಂತೆ ಮತ್ತೊಂದು ದಿನ ಅದೇ ವಿಧವಾದ ಘಟನೆ ನಡೆಯಿತು. ಇದರಿಂದ ನನಗೀಗ ಉಪ್ಪಿನ ಕಾಯಿಯ ಮೇಲೆ ನಂಬಿಕೆಯೇ ಇಲ್ಲ. ಈ ನಡುವೆ ಮತ್ತೊಂದು ಉಪಾಯವನ್ನು ಹುಡುಕಿ ದ್ದೇನೆ. ಏನೆಂದರೆ—ನನಗೆ ಉಪ್ಪಿನಕಾಯೇ ಸೇರುವುದಿಲ್ಲವೆಂದು. ಇದರಿಂದ ನನಗೂ ಅನುಕೂಲ, ಮತ್ತು ನಮ್ಮ ಮನೆಯವರಿಗೂ ಉಪ್ಪಿನಕಾಯಿಯ ಖರ್ಚು ಕಡಿಮೆ. ಅದೂ ಅಲ್ಲದೆ ನನ್ನ ದೃಷ್ಟಿಯೂ ಸ್ವಲ್ಪ ಮಂದ ಎನ್ನಿ. ಇಂತಹದರಲ್ಲಿ ನನ್ನ ದುರದೃಷ್ಟಕ್ಕೆ ನನಗೆ ಕಾಣದಂತೆ ಯಾವುದಾದರೂ ಕ್ರಿಮಿಗಳಿದ್ದರೆ? ಆದ್ದರಿಂದ ನಾನು ಈಗ ಉಪ್ಪಿನಕಾಯಿ ಬಿಟ್ಟಿದ್ದೇನೆ.

ಆದರೂ ನಾನು ಉಪ್ಪಿನಕಾಯಿಗೆ ಶುಭಾಶಯವನ್ನು ಕೋರುತ್ತೇನೆ. ಜಗತ್ತಿನಲ್ಲೆಲ್ಲಾ ಉಪ್ಪಿನಕಾಯಿ ತನ್ನ ಕೀರ್ತಿಧ್ವಜವನ್ನು ಮತ್ತೆ ಹಿಡಿದು ಮೆರೆಯಲಿ, ಜಗತ್ತಿನಲ್ಲೆಲ್ಲರಿಗೂ ಆಹ್ಲಾದವನ್ನುಂಟುಮಾಡುತ್ತಿರಲಿ, ಸರ್ವರೂ ಉಪ್ಪಿನಕಾಯುಂಡು ಸುಖವಾಗಿರಲಿ, ಎಂದು ಹಾರೈಸುತ್ತೇನೆ.

—ಎಂ. ಆರ್. ಸಿ. ನಾಗರಾಜನ್

*

# ಮಲ್ಲಯ್ಯನ 'ಬಸವ'

ಆಗಲೇ ಶಶಿ, ಗಗನದಲ್ಲಿ, ನೆತ್ತಿಯ ಮೇಲೆ ಬಂದಿದ್ದ. ಹಿರೇ ಹಳ್ಳಿಯ ಮೇಲೆ ತನ್ನ ಶೀತಲ ಕಿರಣಗಳಿಂದ 'ಹಾಲು ಬೆಳ್ದಿಂಗಳನ್ನು' ಚೆಲ್ಲುತ್ತಿದ್ದ. ಆಗ ಮಲ್ಲಯ್ಯ ತನ್ನ ಗುಡಿಸಿಲ ಮೂಲೆಯೊಂದರಲ್ಲಿ ನಿಟ್ಟುಸಿರುಬಿಡುತ್ತಿದ್ದ. ಅವನ ಬಾಯಿಂದ 'ಬಸವ' ಎಂಬ ಪದ ಅಸ್ಫುಟವಾಗಿ ಹೊರಬರುತಿತ್ತು.

'ಬಸವ' ಅವನ ಮಮತೆಯ ಎತ್ತು. ಬಸವ, ಇನ್ನೂ ಎರಡು ತಿಂಗಳ ಕರುವಾಗಿದ್ದಾಗಲೇ, ತನ್ನ ತಾಯಿ ಗೌರಿಯನ್ನು ಕಳೆದುಕೊಂಡಿತ್ತು. ಆ ವರ್ಷ ಹಬ್ಬಿದ ಚಪ್ಪೇರೋಗಕ್ಕೆ ಬಲಿಯಾದ ನೂರಾರು ದನಕರುಗಳಲ್ಲಿ, ಗೌರಿಯೂ ಒಂದಾಗಿತ್ತು. ಅಂದಿನಿಂದಲೂ, ಮಲ್ಲಯ್ಯ, ಬಸವನನ್ನು ತನ್ನ ಮಗ ಬೈರಣ್ಣ ನಂತೆಯೇ ಸಾಕಿ ಸಲಹಿದ್ದ. ಈಗ ಮುದಿಯಾಗಿ, ಬಸವ ಕೆಲಸಕ್ಕೆ ಬಾರ ದಾಗಿತ್ತು.

ಅಂದಿಗೆ ಎರಡು ದಿನ ಹಿಂದೆ, ಬೈರಣ್ಣ ಮಲ್ಲಯ್ಯನಿಗೆ ಹೇಳಿದ್ದ: "ಅಪ್ಪಯ್ಯೊ, ಬಸವಗೆ ವಯಸ್ಸಾಯಿತು. ಅದನ್ನ ಇನ್ನು ಕಟ್ಟಿಕೊಂಡು ಏನೂ ಪ್ರಯೋಜನ ಇಲ್ಲ. ಸುಮ್ಮಗೆ ಮೇವು ದಂಡ ಆಗತದ. ತುಮಕೂರಿನ ನಾಳೆ ವಾರದ ಸಂತೇಲಿ ಕಟುಕರಿಗೆ ಮಾರಿಬಿಡುತೀನಿ."

ಮಗನ ಮಾತನ್ನು ಕೇಳಿ, ಮಲ್ಲಯ್ಯನಿಗೆ ಕಣ್ಣೀರು ಹನಿಗೂಡಿದವು. ಆದರೂ ಅದನ್ನು ತೋರಿಸಿಕೊಳ್ಳದೆ, ಮಗನಿಗೆ, "ಬೇಡ, ಮಾರಾಯ, ಅವ ನಮ್ಮನೇಗೇ ಹುಟ್ಟಿದಾನೆ, ನಮ್ಮನೇಗೇ ಸಾಯಲಿ. ಈಸು ದಿನ ನಮ್ಮ ಸೇವೆ ಅವ ಮಾಡಿಲ್ಲವೆ? ಅವನ್ನ ಮಾರಬೇಡ, ಬೈರಣ್ಣ. ನನ್ನಾಣೆಗೂ ಮಾರ ಬೇಡ." ಅಂತ ಹೇಳಿದ. ಇಷ್ಟು ಹೇಳಬೇಕಾದರೆ ಅವನಿಗೆಷ್ಟೋ ಕಷ್ಟವಾಯಿತು.

ಅದಕ್ಕೆ ಬೈರಣ್ಣ ಹೇಳಿದ್ದ: "ಹೋಗು, ಹೋಗು, ನಿನಗೆ ಬುದ್ಧಿ ಐತಾ, ಇಲ್ಲವಾ? ನೀನೇನಾರಾ ಅನ್ಕೊ, ನಾನು ಮಾರಿಬಿಡೋನೆ."

ಆಗ ಮಲ್ಲಯ್ಯನಿಗೆ ಅಲ್ಲಿ ನಿಲ್ಲಲಿಕ್ಕೆ ಆಗಲಿಲ್ಲ. ಅಲ್ಲಿಂದ ನೆಟ್ಟಗೆ ಕೊಟ್ಟಿಗೆಗೆ ಹೋದ. ಬಸವ ಮಲಗಿಕೊಂಡು, ಮೆಲ್ಲನೆ ಹುಲ್ಲು ಕಡಿಯುತ್ತಿತ್ತು. ಮಲ್ಲಯ್ಯ ಬಸವನ ಹತ್ತಿರ ಕುಳಿತುಕೊಂಡು, "ಬಸವಾ, ಹೋಗುತೀಯಾ? ನನ್ನ ಬಿಟ್ಟು

ಹೋಗುತೀಯಾ?" ಅಂತ ಹೇಳಿ, ಬಸವನ್ನ ಅಪ್ಪಿಕೊಂಡು ಗಳಗಳನೆ ಅತ್ತುಬಿಟ್ಟ. ಸ್ವಲ್ಪ ಹೊತ್ತಿನನಂತರ, ಚೇತರಿಸಿಕೊಂಡು, ಬಸವನ್ನ ನೋಡಿದ. ಬಸವನ ಕಣ್ಣಿನಿಂದ ಎರಡು ಹನಿ ಉದುರಿದುವು. ಅದನ್ನು ನೋಡಿ ಮಲ್ಲಯ್ಯ "ನನ್ನಪ್ಪಾ, ಬಸವಾ, ಅಳಬೇಡವೋ, ನಿನ್ನ ಜೊತೇಗೇ ನಾನೂ ಬಂದು ಬಿಡುತೇನೋ" ಎಂದು ಹೇಳಿ, ಅಲ್ಲಿಂದ ಹೊರಕ್ಕೆ ಬಂದಿದ್ದ.

ಅವೊತ್ತಿನಿಂದಲೂ ಮಲ್ಲಯ್ಯನಿಗೆ ಏನೂ ಬೇಕಾಗಿರಲಿಲ್ಲ. ಹಗಲೆಲ್ಲಾ ಕೊಟ್ಟಗೆಯಲ್ಲಿ ಬಸವನ ಬಳಿ ಕುಳಿತುಕೊಂಡು, ಒಂದೇ ಸಮನೆ ಕಣ್ಣೀರಿಡು ತ್ತಿದ್ದ. ರಾತ್ರಿಯೆಲ್ಲಾ, ಗುಡಿಸಿಲಿನ ಮೂಲೆಯೊಂದರಲ್ಲಿ 'ಬಸವ, ಬಸವ' ಎಂದು ಹೇಳಿಕೊಂಡು ನಿಟ್ಟುಸಿರುಬಿಡುತ್ತಿದ್ದ.

ಬಸವನನ್ನು ಸಂತೆಗೆ ಹೊಡೆದುಕೊಂಡು ಹೋಗುವ ದಿನ ಹತ್ತಿರವಾದ ಹಾಗೆಲ್ಲಾ ಮಲ್ಲಯ್ಯನ ಸಂಕಟ ಅಧಿಕವಾಗತೊಡಗಿತು. ಊಟ ತಿಂಡಿ ಎಲ್ಲಾ ಬಿಟ್ಟು, ಒಂದೇ ಸಮನೆ ಗೋಳಾಡತೊಡಗಿದ.

ತುಮುಕೂರಿನ ಸಂತೆಯ ದಿನ ಬಂತು. ಬೈರಣ್ಣ ಬೆಳಗ್ಗೆ ಎದ್ದವನೆ ಮುಖ ತೊಳೆದುಕೊಂಡು, ಸಂತೆಗೆ ಹೊರಡಲನುವಾದ. ಮಲ್ಲಯ್ಯ ಕೊಟ್ಟಗೆಗೆ ಹೋಗಿ ಬಸವನ ಮೈ ತಡವುತ್ತಾ, "ಬಸವಾ, ಹೊಗುತೀಯಾ? ನನ್ನ ಬಿಟ್ಟು ಹೋಗು ತೀಯಾ? ಬೇಡಾಪ್ಪ, ಇಬ್ಬರೂ ಒಟ್ಟಾಕೇ ಹೋಗೋಣಪಾ. ಈಸು ನನ್ನ ಮಾತು ನಡೆಸಪ್ಪಾ. ನಡೆಸುತೀಯಾ, ಬಸವಾ?" ಎಂದು ಕೇಳಿದ. ಬಸವ, ಅವನ ಪ್ರಶ್ನೆಗೆ ಉತ್ತರ ಕೊಡುವ ಹಾಗೋ, ಏನೋ, ಅಂತೂ ಗೋಣುಹಾಕಿತು. ಅಷ್ಟರಲ್ಲಿ ಬೈರಣ್ಣ ಬಂದು, ಅಪ್ಪನನ್ನು ನೋಡಿ, "ನಿನಗೇನು ಹುಚ್ಚು ಹಿಡಿ ದದಾ? ಯಾಕೆ ಸುಮ್ಮಗೆ ಒಂದೇ ಸಮನೆ ಬಡಕೊತಿದಿಯಲ್ಲಾ" ಅಂತ ಹೇಳಿ, ಕಟ್ಟಿಹಾಕಿದ್ದ ಹಗ್ಗವನ್ನು ಬಿಚ್ಚಿಕೊಂಡು, ಬಸವನನ್ನು ಎಳೆದುಕೊಂಡು ಹೊರಟ. ಬಸವ ಹೊರಡಲೇ ಒಲ್ಲದು. ಬೈರಣ್ಣ ಬಿಡ. ಹಾಗೂ ಹೀಗೂ ಮಾಡಿ, ಬೈರಣ್ಣ ಬಸವನನ್ನು ಬಲವಂತವಾಗಿ ಎಳೆದುಕೊಂಡೇ ಹೊರಟುಹೋದ.

ಬಸವ ತನ್ನ ದೃಷ್ಟಿಯಿಂದ ಮರೆಯಾದೊಡನೆಯೆ, ಮಲ್ಲಯ್ಯ ನಿಂತ ಲ್ಲಿಯೇ ಕುಸಿದುಬಿದ್ದ. ಮಲ್ಲಯ್ಯ, ಕಣ್ಣೀರಿಡುತ್ತಾ, "ಬಸವಾ, ನನ್ನಪ್ಪಾ, ನನ್ನ ಬಿಟ್ಟು ಹೋದೆಯಾ. ಇಗೋ, ನಾನೂ ಬರುತೀನಿ. ಇಬ್ಬರೂ ಒಟ್ಟಾಕೇ ಹೊಗೋಣಂತೆ" ಎಂದು ತಡವರಿಸಹತ್ತಿದ.

ಅರ್ಧತಾಸಿನನಂತರ, ಬೈರಣ್ಣ ಕೊಟ್ಟಿಗೆಯನ್ನು ಪ್ರವೇಶಿಸಿದ. ಕೊರಗುತ್ತಿದ್ದ ಅಪ್ಪನನ್ನು ಕಂಡು, "ಅಪ್ಪಯ್ಯಾ, ಬಸವನ್ನ ಅರ್ಧ ಫರ್ಲಾಂಗು ಎಳಕೊಂಡು ಹೋಗೋದರಾಗೇ ಕುಸಿದು ಬಿದ್ದಿತ. ಹಾಗೂ ಹೀಗೂ ಮಾಡಿ, ಮನೆವರೆಗೂ ವಾಪಸು ಎಳಕೊಂಡು ಬಂದೀನಿ" ಅಂತ ಹೇಳಿದ. ಅದನ್ನು ಕೇಳಿ, ಮಲ್ಲಯ್ಯ ತತ್‌ಕ್ಷಣ ಹೊರಕ್ಕೆ ಓಡಿದ. ತನ್ನ ಮನೆಯ ಮುಂದೆ, ಬಸವ ಸೊರಗುತ್ತಾ ಬಿದ್ದಿತ್ತು. ಮಲ್ಲಯ್ಯ ಅದರ ಹತ್ತಿರಕ್ಕೆ ಹೋಗಿ, ಪಕ್ಕದಲ್ಲಿ ಕುಳಿತುಕೊಂಡ. ಬಸವ ಬಹಳ ತ್ರಾಸಪಟ್ಟು, ತನ್ನ ಕತ್ತನ್ನು ಮಲ್ಲಯ್ಯನ ಕಡೆಗೆ ತಿರುಗಿಸಿತು. ಅದರ ಲೋಚನಗಳಿಂದ ದೃಗ್ಜಲ ಧಾರಾಕಾರವಾಗಿ ಹರಿಯುತ್ತಿತ್ತು. ಮಲ್ಲಯ್ಯನನ್ನು ಮನತುಂಬುವಂತೆ ನೋಡಿ ಕಣ್ಣು ಮುಚ್ಚಿತು. ಅದನ್ನು ನೋಡಿ, ಮಲ್ಲಯ್ಯ, ಹೌಹಾರಿ, 'ಬಸವಾ' ಎಂದು, ಅದರ ಮೇಲೆ ಒರಗಿದ. ಆ ಎರಡು ಆತ್ಮಗಳೂ ಮತ್ತೆ ಒಂದುಗೂಡಿದ್ದವು.

—ಟಿ. ಕೆ. ಪುಟ್ಟಸ್ವಾಮಿ.

---

## ಮುಂದು ಸಾಗುವ ಮಾರ್ಗ

ಅರೆಗಣ್ಣು ನಮದೆಂದು ಕೊರಕೊರಗಿ ಫಲವೇನು?
ಅರೆಬೆಳಕು ಧರೆಯೊಳೆಂದೊರಲಿ ಸುಖವೇನು?
ಇರುವ ಕಣ್ಣಿರುವ ಬೆಳಕಿನೊಳಾದನಿತ ನೋಡಿ
ಪರಿಕಿಸಿದೊಡದು ಲಾಭ—ಮಂಕುತಿಮ್ಮ

ಒಂದಿಹುದುಪಾಯವೋರೊರ್ವನರೆಗಣ್ಣುಗಳು
ವೊಂದೊಂದು ಸತ್ಯಾಂಶಕಿರಣಗಳ ಪಿಡಿದು
ಒಂದುಗೂಡಿದೊಡವರ್ಗಳರಿವನೆಲ್ಲವನಾಗ
ಮುಂದು ಸಾಗುವೆವಿನಿತು—ಮಂಕುತಿಮ್ಮ

# ಕಾದಿರುವನು ಶ್ರೀಹರಿ

ಹೌದು. ಕಾದಿರುವನು ಶ್ರೀಹರಿ, ಇವತ್ತಾದರೂ M.O. ಬರುವುದೆಂದು.

ಈ M. O. ಸುದ್ದಿ ಎತ್ತಿದರೆ ನನಗೆ ತುಂಬ ಸಂಕಟವಾಗುತ್ತೆ. ಇದು ಬರೀ ಕಾಗದದ ಮೂಲಕ ಬಂದರೂ, ಪು.ತಿ.ನ ಹೇಳುವ ಹಾಗೆ, ಇದು "ಲಕ್ಷ್ಮಿ ಯಿಂದ ಅಧಿಷ್ಠಿತಳಾದ ಸರಸ್ವತಿ." ಅಂದಮೇಲೆ, M. O.ನ ಕೈಹಿಡಿಯೋಕೆ ಯಾರು ತಾನೆ ಎದುರುನೋಡೊಲ್ಲ? ಆದರೆ ನನ್ನ ಗ್ರಹಚಾರವೊ, ಅಥವಾ M. O. ಅನ್ನೋದು ಖುದ್ದಾಗಿ ನನ್ನ ಹೆಸರಿಗೆ ಬರಲೇಕೂಡದು ಅಂತ ಭಾರತ ರಾಜ್ಯಾಂಗಶಾಸನದಲ್ಲೇ ಒಂದು ಕಲಂ ಮಾಡಿದ್ದಾರೋ, ಅಂತೂ—ಕಾದಿರು ವನು ಶ್ರೀಹರಿ, ಇನ್ನೂ, ಇವತ್ತಾದರೂ M.O. ಬರುವುದೆಂದು.

ನಾನು ಹಳ್ಳೀಲಿ ಹುಟ್ಟಿ ಬೆಳೀತಿರೋನು. ಆದರೂ ಅಕ್ಷರಸ್ಥ. ಅಂದ ಮೇಲೆ ಊರಿನ ಕಷ್ಟ ಸುಖ ಏನು ಯಾರಿಗೆ ಬರೀಬೇಕಾದರೂ ನಾನೇ. ಎಲ್ಲ ರೈತರೂ ನನ್ನ ಹತ್ತಿರಕ್ಕೇ ಓಡಿಬರುತ್ತಾರೆ: "ಸೋಮಿ, ಇದು ಒಸಿ ಬರ್ಕೊಡಿ" ಅಂತ. ಹಾಗೇನೇ ಅವರಿಗೆ ಈ M. O. ಫಾರಮುಗಳು ಭರ್ತಿಮಾಡಿಕೊಡ ಬೇಕಾದರೂ ನಾನೇ. ಅಷ್ಟೇ ಅಲ್ಲ, ಅವರು M. O. ರಿಸೀವ್‌ಮಾಡಬೇಕಾದ ಸಂದರ್ಭದಲ್ಲಿ ಸಾಕ್ಷಿ ಗುರುತು ಹಾಕೋನೂ ನಾನೇ. ಆದರೆ ಮಾತ್ರ, ಖುದ್ದಾಗಿ M. O. ಪಡೆದುಕೊಳ್ಳುವ ಅದೃಷ್ಟ ನನ್ನ ಹಣೇಲಿ ಬರೆದಹಾಗಿಲ್ಲ.

ಮನೇಲೂ ಅಷ್ಟೆ. M. O. ಯಾರಿಗಾದರೂ ಕಳಿಸಬೇಕಾದರೆ ಬರೆ ಯೋನು ನಾನು, M. O. ಯಾರಿಂದಲಾದರೂ ತರಿಸಬೇಕಾದರೂ ಬರೆ ಯೋನು ನಾನೇ. ನಮ್ಮತ್ತೆ ಒಂದುಸಲ ನನ್ನ ಕರೆದು, "ನೋಡೋ! ನಿಮ್ಮ ಮಾವನವರಿಂದ ಯಾಕೋ ಇಷ್ಟು ದಿನ ಆದರೂ M. O. ಬರಲಿಲ್ಲ. ಒಂದು ಕಾಗದ ಬರಿ" ಅಂದರು. ನಾನು ಆಗ ಸ್ವಲ್ಪ ಬುದ್ಧಿವಂತಿಕೆ ಉಪಯೋಗಿಸಿ, ನನ್ನ ವಿಳಾಸ ಕೊಟ್ಟು, ಅವರಿಗೆ ಕಾಗದ ಬರೆದೆ. ನನ್ನ ವಿಳಾಸಕ್ಕೇನೆ M. O. ಏನೋ ಬಂತು, ಆದರೆ ಅದರ ತಲೆ ಮೇಲೆ ನಮ್ಮ ಅತ್ತೆ ಹೆಸರನ್ನು C/o ನನ್ನ ಹೆಸರಿಗೆ ಬರೆದುಬಿಟ್ಟಿದ್ದರು. ಆಯ್ತಲ್ಲ!

ಬುದ್ಧಿ ಇದ್ದವನಿಗೆ ದುಡ್ಡು ತರಿಸಿಕೊಳ್ಳೋಕೆ ಒಂದು ದಾರೀನೆ? ತುಮ ಕೂರಿನಲ್ಲಿ ನಮ್ಮ ಚಿಕ್ಕಪ್ಪ ಒಬ್ಬರಿದ್ದಾರೆ—ಇಂಜನಿಯರು. ಅವರಿಗೆ ಏನೋ

ಸಬೂಬು ಬರೆದು, ಮೂರು ರೂಪಾಯಿ ಮಣಿಯಾರ್ಡರು ಮಾಡಿ ಅಂತ ಕೇಳಿ ಕೊಂಡೆ. ಅವರಿಂದ ಜವಾಬು ಬಂತು: "ನಿಮ್ಮ ಚಿಕ್ಕಮ್ಮ ಹತ್ತು ರೂಪಾಯಿ ಕೇಳಿದ್ದರು. ಎರಡು M. O. ಬೇರೆ ಬೇರೆ ಯಾಕೆ ಅಂತ ಅವರ ಹೆಸರಿಗೇ ಹದಿಮೂರು ಕಳಿಸಿದ್ದೇನೆ. ಅದರಲ್ಲಿ ಮೂರು ನೀನು ತೆಕೋ." ನಿಜವಾಗಿಯೂ 'ತೆಕೋಬೇಕು' ಅನ್ನಿಸ್ತು! ಆದರೆ ಯಾರೂ ಕೈಗೆ ಸಿಕ್ಕಲಿಲ್ಲ, ತೆಕೋಳೋಕ್ಕೆ.

ಉಸಿರಿರೋವರೆಗೂ ಆಸೆ ಇರುತ್ತೆ—ಅಂತ ದೊಡ್ಡೋರು ಹೇಳ್ತಾರೆ. ನಾನಂತೂ ನಮ್ಮ ಪೋಸ್ಟ್‌ಮ್ಯಾನನ್ನ ಕಂಡಾಗಲೆಲ್ಲ "ಏನೂ M. O. ಇಲ್ಲವೆ?" ಅಂತ ತಪ್ಪದೆ ಕೇಳುತಿದ್ದೆ. ಅವನು ಪೋಸ್ಟ್‌ಮ್ಯಾನ್ ಆದ್ರೂ ಜೆಂಟಲ್‌ಮ್ಯಾನ್. "ಇಲ್ಲ" ಅಂತ ಒಂದೇಸಲ ಮುಖ ಮುರೀತಿರಲಿಲ್ಲ. "ಯಾವುದೋ ಇದ್ದಹಾಗಿತ್ತು" ಅಂತ ನಿದಾನವಾಗಿ ಹುಡುಕೋನು . . . "ಅಲ್ಲ, ಶ್ರೀಹರಿರಾಯರದಲ್ಲ, ನರಹರಿರಾಯರದು" ಅಂತ ತಲೆಯಾಡಿಸಿ ಹೋಗೋನು. ಒಂದೊಂದು ಸಲ "ಊಂ, ಏನೋ ಒಂದು ಇದೆ. M. O. ಅಲ್ಲ, M. O. ರಸೀತಿ" ಅಂತ ಅದನ್ನು ತೆಗೆದುಕೊಡೋನು. ನೋಡಿದರೆ, ಅದು ನಾನು ನನ್ನ ಭಾವನಿಗೆ ದುಡ್ಡು ಕಳಿಸಿದ್ದಕ್ಕೆ, ಅವನು ಅದನ್ನು ಸ್ವೀಕರಿಸಿದ್ದಕ್ಕೆ—ನನಗೆ ಬಂದ ರಸೀತಿ!

ಅಯ್ಯೋ, ಈ M. O. ಶಾರದಾಲಕ್ಷ್ಮಿ ನನ್ನನ್ನ ಚಿಟುಕುಮುಳ್ಳಾಡಿ ಸುತ್ತಿರೋದು ಹೇಳತಾಹೋದರೆ, ಅದೇ ಒಂದು ಬ್ರಹ್ಮಾಂಡ ಪುರಾಣ. ಇಲ್ಲ, ಅದರ ಅಪ್ಪನ ಅಪ್ಪನ ಪುರಾಣ ಆದರೂ ಆಗಬಹುದು.

ಒಂದು ಸಲ ಏನಾಯ್ತು—ಈ ಬಡಪ್ರಾಣಿಯ ಮೇಲೆ ದೇವರು ತನ್ನ ಕೃಪಾಕಟಾಕ್ಷ ಬೀರಿದಹಾಗೆ ಆಕಾಶವಾಣಿಯಿಂದ ನನಗೊಂದು ಆಹ್ವಾನ ಬಂತು. ವಿಷಯ—ವಿಚಿತ್ರ: "ಇವತ್ತೂ M. O. ಬರಲಿಲ್ಲ." ಅದು ಹೇಗೆ ಗೊತ್ತಾಯಿತೋ ಅವರಿಗೆ—ನಾನೇ ಇದಕ್ಕೆ ಅರ್ಹನಾದ ಆಸಾಮಿ ಅಂತ? ಸರಿ, ಒಪ್ಪಿಕೊಂಡೆ, ಹೋದೆ, ಮಾತನಾಡಿದೆ. ಸಂಭಾವನೆ ಕೊಡತೇವೆ, ಅಂದರು. ದಯಮಾಡಿ ಊರಿಗೆ ಕಳಿಸಿ, ಇಲ್ಲಿ ಬೇಡ, ಅಂತ ಓಡಿದೆ. ಊರಲ್ಲಿ ಕಾದೆ. ಸಂಭಾವನೆ ಬಂತು. ಆದರೆ, ಪಾಪಿ ಪರಲೋಕಕ್ಕೆ ಹೋದರೂ—ಅಂತನ್ನೋ ಹಾಗೆ, ಮೈಸೂರಿನ ಟ್ರೆಷರಿ ಆರ್ಡರ್ ಒಂದು ಲಕೋಟೆಯಲ್ಲಿ ಬಂತೇ ಹೊರತು, M. O. ರೂಪದಲ್ಲಿ ನನ್ನ ಮೋಹಿನಿ ನನಗೆ ಮಾಲೆಹಾಕಲಿಲ್ಲ.

ಆದರೇನು—'ಧೈರ್ಯಂ ಸರ್ವತ್ರ ಸಾಧನಂ.' ಮೈಸೂರಿನ ನಮ್ಮ ಬೀಗರಿಗೆ ಆ ಟ್ರೆಷರಿ ಆರ್ಡರ್ ಕಳಿಸಿ, ಅದನ್ನು ಕ್ಯಾಷ್‌ಮಾಡಿದ ದುಡ್ಡು M. O. ಮಾಡಿ ಅಂತ ಬರೆದೆ. ಮೂರು ದಿವಸ ಆದಮೇಲೆ ಅವರು ಬರೆದರು: "ಕ್ಯಾಷ್ ಆಯ್ತು. ಆದರೆ ಹುಡುಗನ ಅಪ್ಲಿಕೇಷನ್ ಫೀಸಿಗೆ ಸಾಲದೆ ಬಂದದ್ದ ರಿಂದ ಬಳಸಿಕೊಂಡಿದ್ದೇನೆ. ಮುಂದಿನ ತಿಂಗಳು ಖಂಡಿತ ತಪ್ಪದೆ ಕಳಿಸಿ ಕೊಡುತ್ತೇನೆ." ಅಂತ.

ಮುಂದಿನ ತಿಂಗಳು ಬಂದೀತೇ ಅಂತ ಮಳೆಹನಿಗೆ ಚಾತಕ ಕಾಯುತ್ತಂತಲ್ಲಾ ಹಾಗೆ ಕಾದೆ. ಒಂದು ದಿನ ಪೋಸ್ಟ್‌ಮ್ಯಾನ್ ನನ್ನ ಹೆಸರುಹಿಡಿದು ಕೂಗಿದ. ಮೈಯೆಲ್ಲಾ ಜುಮುಜುಮು ಅಂತು. ಕೈ ನೀಡಿದೆ. ಒಂದು ಲಕೋಟೆ ಕೊಟ್ಟ. ಒಡೆದು ನೋಡಿದರೆ, ಹದಿನೈದು ರೂಪಾಯಿಗೆ ಒಂದು ಪೋಸ್ಟಲ್ ಮನಿಆರ್ಡರ್! ಸ್ತ್ರೀ ಬರಬೇಕಾಗಿದ್ದ ಕಡೆ ಶಾಸ್ತ್ರೀ ಬಂದರೆ ಎಷ್ಟು ಮರಣಾನಂದವಾಗಬಹುದೋ ಅಷ್ಟೇ ಆಯಿತು, ಮನಿಆರ್ಡರ್ ಅನ್ನು ಎದುರು ನೋಡುತ್ತಿದ್ದ ನನಗೆ ಪೋಸ್ಟಲ್ ಮನಿಆರ್ಡರ್ ಬಂದಾಗ!

ಕಡೆಗೆ ಈಗೊಂದು ತೀರ್ಮಾನಕ್ಕೆ ಬಂದಿದ್ದೇನೆ. ಏನೆಂದರೆ: ಒಳ್ಳೇ ಸಾಹುಕಾರರ ಹುಡುಗಿ ಯಾರನ್ನಾದರೂ ಚುನಾಯಿಸಿ ಮದುವೆಮಾಡಿಕೊಂಡು ಬಿಡೋದು. ಆಗಂತೂ M. O. ಬರಲೇಬೇಕಲ್ಲ!

ನೋಡಿ, ಅಂಥವರು ಯಾರಾದರೂ ಮಾವಂದಿರಾಗುವವರು ಇದ್ದರೆ, ಕಾದಿರುವನು—ಶ್ರೀಹರಿ.

—**ಕೆ. ಎನ್. ಶ್ರೀಹರಿ.**

---

## ಮನದ ರಾಜ್ಯ

ಗ್ರೀಸಿನಾ ಕಬ್ಬಗಳನೋದುವರು ದೆಹಲಿಯಲಿ
ಕಾಶಿಯಾ ಶಾಸ್ತ್ರಗಳನಾಕ್ಸ್‌ಫರ್ಡಿನವರು
ದೇಶ ಕಾಲ ವಿಭಾಗ ಮನದ ರಾಜ್ಯದೊಳಿರದು
ಶ್ವಾಸವದು ಬೊಮ್ಮನದು—ಮಂಕುತಿಮ್ಮ

# ಚಿನ್ನದ ದೋಸೆ

ಕಾರಂತರ ಕಾದಂಬರಿ "ಔದಾರ್ಯದ ಉರುಳಲ್ಲಿ" ಓದುತ್ತಿದ್ದೆ. ಕತೆಯ ಉರುಳಲ್ಲಿ ಸಿಕ್ಕಿ, ಏಳನೆಯ ಅಧ್ಯಾಯ ಮುಗಿಸುವವರೆಗೂ ಪ್ರಜ್ಞೆಯಿಲ್ಲದೆ ಓದಿಬಿಟ್ಟೆ. ನೇತ್ರಾವತಿ ನದಿಯ ನೆರೆಯ ಹಾವಳಿ ಓದಿದಾಗ ನನ್ನ ಕಣ್ಣೊ ಅವಳ ಜ್ಞಾಪಕ ಮಾಡಿತು. ಎಂಟನೆಯ ಅಧ್ಯಾಯ ಪ್ರಾರಂಭ ಮಾಡಿದೆ: "ನೆರೆಗೆ ಬಲಿಯಾದ ಊರವರ ಚಿಂತೆಯು ನೂರಾರು ಬಗೆಯಾಗಿತ್ತು." ಅಷ್ಟು ಹೊತ್ತಿಗೆ ಒಳಗೆ ದೋಸೆ ಹೊಯ್ಯುತ್ತಿರುವ ಶಬ್ದ ಕೇಳಿಸಿತು. ಹಸಿವಿಗೆ ಬಲಿಯಾದ ನನ್ನ ಹೊಟ್ಟೆಯ ಚಿಂತೆ ಪ್ರಾರಂಭವಾಯಿತು. ಗಡಿಯಾರ ನೋಡಿದೆ. ಆಗಲೇ ಒಂದು ಗಂಟೆ! "ಇದೇನು ಇಷ್ಟು ಹೊತ್ತಾದರೂ ಅಜ್ಜಿಯ ಕರೆ ಇಲ್ಲ!"—ಎಂದು ಅಡಿಗೆಯ ಕೋಣೆ ಹೊಕ್ಕೆ. "ಆಯ್ತು ಕಣೋ. ಒಂದು ದಿನ ಸ್ವಲ್ಪ ಹೊತ್ತಾಯ್ತು ಅಂದರೆ ಆಯ್ತು! ಈಗಿನ ಹುಡುಗರಿಗೆ ಅದೇನು ತಾಳ್ಮೆಯೋ ನಾ ಕಾಣೆ! ಹೋಗಲಿ, ದಿನಾ ದೇವರ ದರ್ಶನ ತೆಗೆದು ಕೊಳ್ಳದಿದ್ದರೆ ಅಷ್ಟೇ ಹೋಯಿತು. ವಿದ್ಯಾರ್ಥಿ ನೀನು. ಸರಸ್ವತಿಗೆ ನಮ ಸ್ಕಾರ ಮಾಡು. ಪರೀಕ್ಷೆಯಲ್ಲಿ ಪಾಸಾಗ್ತೀಯ. ನೋಡು, ನಿನ್ನ ತಂಗಿ ಪುಸ್ತಕಗಳನ್ನು ಹೇಗೆ ಇಟ್ಟು ಅಲಂಕಾರ ಮಾಡಿದ್ದಾಳೆ!" ಸರಿ, ಅಜ್ಜಿ ಹೇಳಿದ ಮೇಲೆ ನಾನು ಮಾತನಾಡುವ ಹಾಗಿಲ್ಲ. ದೇವರ ಕೋಣೆಯ ಕಡೆ ಹೋದೆ. ನನ್ನ ತಂಗಿ "ಸರಸ್ವತೀ ದೇ ಮಜ ದಿವ್ಯಮತಿ"—ಹಾಡುತ್ತಾ ನಮಸ್ಕಾರ ಹಾಕುತ್ತಿದ್ದಳು. "ಸರಿ. ಇವಳಿಗೆ ಬುದ್ಧಿ ಇಲ್ಲ ಅಂತ ಇವಳು ಸರಸ್ವತಿಯನ್ನು ಕೇಳಿಕೊಳ್ಳುತ್ತಾಳೆ. ನಾನು, ಬುದ್ಧಿ ಇರೋನು, ಸೆಂಟ್ರಲ್ ಕಾಲೇಜಿನಲ್ಲಿ ಓದೋನು, ಸರಸ್ವತಿಗೆ, ಒಂದಡಿ ಕಾಗದಕ್ಕೆ, ಅದರ ಮುಂದೆ ಇಟ್ಟಿರುವ ನನ್ನ ತಂಗಿಯ ಹಳೆಯ ಹರಿದುಹೋದ ಪುಸ್ತಕಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕೆ! ಹೀಗೆ ಒಂದು ವೇಳೆ ನಮಸ್ಕಾರ ಮಾಡಿದ್ದರಿಂದ ನನಗೆ ವಿದ್ಯೆ ಬರುವ ಹಾಗಿದ್ದರೆ, ನಾನು ದಿನವೂ ಕಾಲೇಜಿನ ತನಕ ನಡೆದು ಕೊಂಡು ಹೋಗಿ, ಅಲ್ಲಿ ಮಧ್ಯಾಹ್ನ ನಿದ್ದೆ ಬಂದರೂ ತಡೆದುಕೊಂಡು, ಅಧ್ಯಾ ಪಕರ ಕೊರೆತಕ್ಕೆ ನನ್ನ ತಲೆ ಏಕೆ ಒಡ್ಡಬೇಕು? ಎಲ್ಲಾ ಸುಳ್ಳು. ಅಜ್ಜಿ ಗೊಂದು ಕೆಲಸವಿಲ್ಲ." ಎಂದುಕೊಂಡು ಹಾಗೆಯೇ ಹಿಂದಿರುಗಿ ಹೋಗೋಣವೇ

ಎಂದು ನೋಡಿದೆ. ಅಷ್ಟರಲ್ಲಿ ಬಾಗಿಲ ಹಿಂದೆ ಅವಿತು ನೋಡುತ್ತಿದ್ದ ನನ್ನ ತಂಗಿ "ತಡಿ, ಅಜ್ಜಿಗೆ ಹೇಳ್ತೀನಿ. ನಮಸ್ಕಾರಮಾಡದೆ ಹಾಗೇ ಬರ್ತೀಯಾ?" ಎಂದು ಹೊರಟಳು. "ಇಲ್ಲಾ ಕಣೆ. ಇಲ್ಲಿ ಬಾರೆ. ನನ್ನ ಷರ್ಟ್ ತೆಗೆದಿಟ್ಟು ನಮಸ್ಕಾರ ಮಾಡೋಣ ಅಂತ . . . " ಎಂದು ನಾನು ತಡವರಿಸಬೇಕಾಯ್ತು. ನನಗೆ ನನ್ನ ತಂಗಿ ಅಂದರೆ ಹೆದರಿಕೆ. ಅವಳು ಹೇಳಿದ್ದು ಅಜ್ಜಿಗೆ ವೇದವಾಕ್ಯ. ಯಾವುದೋ ಹಬ್ಬದ ದಿನ ಮರೆತು ಊಟಕ್ಕೆ ಅಂತ ಕುಳಿತೆ. "ಅಜ್ಜಿ, ಅಣ್ಣ ದೇವರಿಗೆ ನಮಸ್ಕಾರ ಮಾಡಲಿಲ್ಲ" ಎಂದಳು. ಸರಿ, ಅಜ್ಜಿ ನನ್ನ ಬಿಡ್ತಾಳೆಯೆ? "ಹೌದೇನೋ?" ಎಂದಳು. "ಇಲ್ಲ ಅಜ್ಜಿ, ಅವಳು ಸುಳ್ಳೇ ಹೇಳ್ತಾಳೆ" ಎಂದೆ. "ನಮ್ಮ ನಿರ್ಮಲಾ ಸುಳ್ಳು ಹೇಳ್ತಾಳೇನೊ? ಅವಳಿನ್ನೂ ಮಗು. ಮಗು ಅಂದರೆ ದೇವರೇ. ದೇವರು ಸುಳ್ಳು ಹೇಳ್ತಾನೇನೋ? ಸುಳ್ಳು ಹೇಳೋದು ನೀವೇ—ಕಾಲೇಜಿನ ಕೋಣಗಳು!" ಎಂಥ ಸಿಟ್ಟು ಬಂದಿತ್ತು ಗೊತ್ತೆ? ನಿರ್ಮಲಾ ಅದೃಷ್ಟ ಚೆನ್ನಾಗಿತ್ತು ಅಪೊತ್ತು. ಕೊನೆಗೂ ನಾನು ನಮಸ್ಕಾರ ಮಾಡಿ ಬಂದ ಮೇಲೆ ಊಟ ಬಿತ್ತು. ಮತ್ತೆ ಹಾಗೆಯೇ ಆದೀತು ಎಂದು ಹೆದರಿದೆ. ಷರ್ಟ್ ತೆಗೆದಿಟ್ಟು, "ಸರಸ್ವತೀ, ಈ ನಿರ್ಮಲಾಗೆ ಒಳ್ಳೆಯ ಬುದ್ಧಿ ಕೊಡಮ್ಮ" ಎಂದು ನಮಸ್ಕಾರ ಹಾಕಿಯೇಬಿಟ್ಟೆ.

ಅಷ್ಟು ಹೊತ್ತಿಗೆ ಅಜ್ಜಿಯೇ ಅಲ್ಲಿಗೆ ಒಂದು ಮಡಕೆ ಹಿಡಿದುಕೊಂಡು ಬಂದರು. "ಇದೇನಜ್ಜಿ ಮಡಕೆ?" ಎಂದೆ. ನಿರ್ಮಲಾ "ಅಣ್ಣಾ, ಅದರಲ್ಲಿ ಸೌತೆಕಾಯಿ ದೋಸೆ ಇದೆ." ಎಂದಳು. "ಸೌತೆಕಾಯಿ ದೋಸೆ! — ಮಡಕೇಲಿ?" ಎಂದೆ ಆಶ್ಚರ್ಯದಿಂದ. "ಹೌದಣ್ಣ. ನಾಳೆ ಅದು ಚಿನ್ನ ಆಗಿ ಬಿಡುತ್ತೆ!" "ಚಿನ್ನ! ಏನೆ ಹಾಗೆಂದರೆ? ಹಾಗೆ ಚಿನ್ನ ಆಗೋ ಹಾಗಿದ್ದರೆ ನಾನು ಓದ್ತಾನೇ ಇರಲಿಲ್ಲ. ಒಂದು ದೋಸೆ ಇಡೋ ಕಡೆ ಹತ್ತು ದೋಸೆ ಇಟ್ಟರೆ ಆಗಿಹೋಯ್ತು!" ಎಂದೆ. ಅದೇನೋ ನನ್ನನ್ನು ವಾದದಲ್ಲಿ ಎಲ್ಲರೂ ಸೋಲಿಸುವವರೇ. "ಅತಿ ಆಸೆ ಗತಿಗೇಡು. ಆಸೆಪಟ್ಟರೆ ಆಗೋಲ್ಲ" ಎಂದಳು. ನನಗೆ Ben Jonsonನ "Alchemist" ನಾಟಕ ಜ್ಞಾಪಕಕ್ಕೆ ಬಂತು. ಅದರಲ್ಲೂ ಹಾಗೇನೆ. "ನೀನು ಆಸೆ ಪಟ್ಟದ್ದರಿಂದ Philosopher's stone ತಯಾರು ಮಾಡಲಿಕ್ಕೆ ಆಗಲಿಲ್ಲ", ಅಂತ Subtle ಕೇಡಿ ತಿಳಿಗೇಡಿ Sir Epicure Mammonಗೆ ಹೇಳ್ತಾನೆ. ಅವನೇನೋ ನಂಬಿದ. ನಾನು Sir

Epicure Mammonನೇ? ಅಷ್ಟು ಹೊತ್ತಿಗೆ ಅಜ್ಜಿ "ನೋಡೋ. ಅವಳಿಗೆ ಇರುವಷ್ಟು ಜಾಣತನ ನಿನಗಿಲ್ವಲ್ಲೋ. ಹೋಗಲಿ, ಊಟಕ್ಕೆ ಬಾ. ಹಿಂದೆ ನಡೆದ ಒಂದು ಸಮಾಚಾರ ಹೇಳ್ತೇನೆ" ಎಂದಳು. ಸರಿ, ಊಟಕ್ಕೆ ಹೊರಟೆವು. ನನಗೆ ಅಜ್ಜಿಯ 'ಸಮಾಚಾರ' ಅಂದರೆ ಅವಳು ಕತೆ ಕೇಳುವುದು ಅಂದರೆ ತುಂಬಾ ಆಸೆ. ಅವಳಿಗೂ ನಾನು ಅವಳ ಕತೆ ಕೇಳುವುದು ಅಂದರೆ ಆಯ್ತು. ನಾನು ಸುಮ್ಮನೆ ಅವಳು ಹೇಳಿದಕ್ಕೆ 'ಹೂ' ಎಂದು ಹೇಳುತ್ತಾ ಕುಳಿತು ಬಿಡ್ತೇನೆ. ಆಮೇಲೆ ಹಗೂರ ಟೀಕೆ ಪ್ರಾರಂಭ ಮಾಡ್ತೇನೆ. ಆಗ ಅವಳಿಗೆ ಸಿಟ್ಟು ಬಂದುಬಿಡುತ್ತದೆ. 'ಕೇಳೋ ತನಕ ಕೇಳಿ ಈಗ ಸಡ್ಡು ತೆಗೀತೀಯಾ?' ಅಂತ ಕೂಗಾಡಿಬಿಡ್ತಾಳೆ.

ಸರಿ. ಊಟಕ್ಕೆ ನಾನೂ ನಿರ್ಮಲಾ ಕುಳಿತೆವು. ಅಜ್ಜಿ ಈ ಕಡೆ ಬಡಿಸ್ತಾ ಆ ಕಡೆ ಕತೇನೂ ಹೇಳಲಿಕ್ಕೆ ಪ್ರಾರಂಭ ಮಾಡಿದರು:

"ನಾನು ಇವಳ ಹಾಗೆ (ನಿರ್ಮಲಾ ವಯಸ್ಸಿನಷ್ಟು) ಇರಬೇಕಾದರೆ ನಮ್ಮ ಪಕ್ಕದ ಮನೇಲಿ 'ಸುಬ್ಬಮ್ಮ' ಅಂತಿದ್ಳು. 'ಸುಬ್ಬಮ್ಮ'—ಅಂದರೆ ಅವಳ ಹಾಗೆ ದೇವರ ಮೇಲೆ ಭಕ್ತಿ ಯಾರಿಗೂ ಇರಲಿಲ್ಲ. ಬಡವಿ ಪಾಪ. ಗಂಡ ಹೆಂಡತಿ ಯಾರ ಮನೆಯಲ್ಲಾದರೂ ಅಡಿಗೆ ಮಾಡಿ ಬಂದದ್ದರಲ್ಲಿ ಜೀವನ ಸಾಗಿಸುತ್ತಿದ್ದರು. ಗಂಡ ಒಂದು ತರಹ ಬೆಪ್ಪು. ಹೇಳಿದ ಕೆಲಸ ಒಂದಿಷ್ಟು ಮಾಡೋನು. ಕೆಲಸ ಇಲ್ಲದ ಹೊತ್ತಿನಲ್ಲಿ ಜಗಲಿ ಮೇಲೆ ಕುಳಿತು ಎಲೆ ಅಡಿಕೆ ತಿನ್ತಾ ಕುಳಿತಾ ಅಂದರೆ ಆಯ್ತು, ಗಂಟೆಗಟ್ಲೆ, ಆದರೂ ಏಳ್ತಾ ಇರಲಿಲ್ಲ. ಪಾಪ ಅವಳ ಮನೆ—ಮನೆ ಎಂದರೆ ಏನು ಮನೆ?—ಸಣ್ಣ ಗುಡಿಸಿಲು—ಆದರೂ ಹೇಗೆ ಅಚ್ಚುಕಟ್ಟಾಗಿಟ್ಟಿದ್ದಳು ಅಂತೀಯಾ? ನೀವು ನೋಡಿ, ಇಷ್ಟು ಚೆನ್ನಾಗಿರೋ ಮನೇನ ಯಾತಕ್ಕೂ ಬೇಡದ ಹಾಗೆ ಮಾಡಿಬಿಡ್ತೀರಲ್ಲಾ. ಕಾಲೇಜಿಂದ ಬಂದ ಕೂಡಲೇ ಪುಸ್ತಕ ಎಲ್ಲೋ ಎಸೆದ—ಬೂಟ್ಸ್ ಮೂಲೆಗೆ ಒಗೆದ—ಒಂದೊಂದು ಸಾರಿ ಹಾಗೇನೆ ಅಡಿಗೆ ಮನೆಗೂ . . . "

"ಈ ಸುಬ್ಬಮ್ಮನ ವಿಚಾರ ಅನ್ನೋದು ಒಳ್ಳೆ ಗ್ರಹಚಾರಕ್ಕೆ ಬಂತಲ್ಲ" ಎಂದುಕೊಂಡೆ. "ಅದಿರಲಿ, ಸುಬ್ಬಮ್ಮನ ಕತೆ ಹೇಳಜ್ಜಿ." ಅಷ್ಟುಹೊತ್ತಿಗೆ ನಿರ್ಮಲಾ ಅನ್ನ ಕೇಳಿದಳು. ಅಜ್ಜಿ ಅವಳಿಗೆ ಅನ್ನ ಸಾರು ಬಡಿಸಿ ಮತ್ತೆ ಪ್ರಾರಂಭ ಮಾಡಿದಳು:

"ಸರಿ, ಎಲ್ಲಿಯತನಕ ಹೇಳಿದೆ?" ಎಂದು ಕೇಳಿದಳು. "ಸುಬ್ಬಮ್ಮ ಗುಡಿಸಲು ಅಚ್ಚುಕಟ್ಟಾಗಿ ಇಟ್ಟಿದ್ದಳು" ಎಂದು ಜ್ಞಾಪಿಸಿದೆ.

"ಹ್ಞ. ಒಂದು ದಿನ ಇದೇ ದಿವಸ ಶಾರದೆ ಪೂಜೆ, ದೇವರಿಗೆ ನೈವೇದ್ಯಕ್ಕೆ ಇಡೋಣ ಅಂದರೆ ಮನೇಲೇನೂ ಇಲ್ಲ. ಅದೇನೋ ಅವಳಿಗೆ ಆದಿನ ಸೌತೆ ಕಾಯಿ ದೋಸೆ ಮಾಡಿ ದೇವರಿಗೆ ಕೊಡಬೇಕು ಅಂತ. ಯಾರ ಮನೇಲಾದರೂ ಸ್ವಲ್ಪ ಹಣ ಕೇಳೋಣ ಅಂದ್ರೆ—'ಈ ಬಡವಿ ಮತ್ತೆ ಹಿಂತಿರುಗಿ ಎಲ್ಲಿ ಕೊಡ್ತಾಳೆ?—' ಎಂದು ಯಾರೂ ಕೊಡೋಪ್ರಿಲ್ಲ. ಆಲೋಚನೆ ಮಾಡಿ ಮಾಡಿ, ಕೊನೆಗೆ ತನ್ನ ಮಗನನ್ನ ಅಡವಿಟ್ಟು ಆದರೂ ದೇವರ ಸೇವೆ ಮಾಡ ಬೇಕು ಅಂತ ನಿಶ್ಚಯ ಮಾಡಿದಳು."

ನಿರ್ಮಲಾ ಬಾಯಿಗೆ ಒಯ್ದ ತುತ್ತು ಕೆಳಗೆ ಕೆಡವಿಕೊಂಡಳು. "ಹಾ! ಮಗೂನ ಅಡವಿಟ್ಟಳೆ? ನಾನು ನನ್ನ ಗೊಂಬೆ ಕೂಡ ಏನಾದರೂ ಕೊಡೋಲ್ಲ?" ಎಂದಳು.

"ಅದಕ್ಕೇ ನಿಮಗೆ ದೇವರು ಪ್ರಸನ್ನ ಆಗೋಲ್ಲ" ಎಂದಳು ಅಜ್ಜಿ.

"ಹಾಗಾದರೆ ನಿನಗೆ ದೇವರು ಕಾಣಸ್ತಾನೇನಜ್ಜಿ?" ಎಂದು ಕೇಳೋಣ ಎಂದುಕೊಂಡೆ. ಆಮೇಲೆ ಜ್ಞಾಪಕಾ ಆಯ್ತು, ಅವಳು ಕತೆ ಮುಂದೆ ಹೇಳದಿದ್ದರೆ?

ಸರಿ. ಅಜ್ಜಿ ನನಗೆ ಅನ್ನ, ಮಜ್ಜಿಗೆ ಬಡಿಸಿದಳು. ನಿರ್ಮಲಾಗೆ ಪಲ್ಯ ಬಡಿಸಿ ಆಯ್ತು. ಮತ್ತೆ ಕತೆ ಮುಂದುವರಿಯಿತು:

"ಮಗೂನ ಅಡವಿಡ್ತೀನಿ ಅಂದರೂ ಇಟ್ಟುಕೊಳ್ಳುವವರು ಯಾರಿದ್ದಾರೆ? ಅವಳಿಗೆ ಜ್ಞಾಪಕ ಆಯ್ತು. ಪಕ್ಕದ ಕೇರೀಲಿ 'ಲಕ್ಷ್ಮಮ್ಮ' ಅಂತ ಇದ್ದರು. ಲಕ್ಷ್ಮಮ್ಮ ಅಂದರೆ ಸಾಕ್ಷಾತ್ ಲಕ್ಷ್ಮೀನೇ ಆಕೆ. ಬಂಗಾರ ಅಂದರೇನು ಅವರ ಮನೇಲಿ! ಊಟ ಮಾಡೋ ತಟ್ಟೆ ಕೂಡ ಬಂಗಾರದ್ದು! ಆದರೇನು ಮಾಡ್ತೀಯಾ, ಅವಳಿಗೆ ಮಕ್ಕಳೇ ಇರಲಿಲ್ಲ. ಎಷ್ಟು ದೇವರಿಗೆ ಹರಕೆ ಹಾಕಿ ಕೊಂಡಳೊ, ಎಷ್ಟು ಜನರಿಗೆ ದಾನ ಮಾಡಿದಳೊ! ಸನ್ಯಾಸಿಗಳು ಹೇಳಿದ ಹಾಗೆ ಮಾಡಿ ನೋಡಿದಳು. ಏನು ಆದರೂ ಮಕ್ಕಳೇ ಆಗಲಿಲ್ಲ. ಅವಳಿಗೆ ಈ ಸುಬ್ಬಮ್ಮನ ಮಗುವಿನ ಮೇಲೆ ಕಣ್ಣಿತ್ತು. ಆ ಮಗೂ ಆದರೂ ಹೇಗಿತ್ತು ಅಂತೀಯಾ? ಹೇಗೆ-ಹೇಗೆ—ಒಳ್ಳೆ ಚೆಂಡು ಇದ್ದ ಹಾಗಿತ್ತು. ಯಾರು

ನೋಡಿದರೂ ಅದನ್ನು ಮುದ್ದು ಮಾಡದೇ ಇರುತ್ತಿರಲಿಲ್ಲ. ಈ ಮಗೂನ ಮುದ್ದಿಡೋಕೋಸ್ಕರ ಲಕ್ಷ್ಮಮ್ಮ ಸುಬ್ಬಮ್ಮನಿಗೆ ಆಗಾಗ ರವೆ ಉಂಡೆ, ಅದು ಇದು ಮಾಡಲಿಕ್ಕೆಂದು ಕರೆಯುತ್ತಿದ್ದಳು. ಒಂದು ದಿನ ಹಗೂರ 'ನಿನಗೇಕಮ್ಮ ಈ ಮಗು? ನಿನ್ನ ಬಡತನದಿಂದ ಇದಕ್ಕೇಕೆ ಕಷ್ಟ ಕೊಡ್ತೀಯಾ. ನನಗೆ ಸಾಕಲಿಕ್ಕೆ ಕೊಟ್ಟುಬಿಡು' ಎಂದಳಂತೆ ಲಕ್ಷ್ಮಮ್ಮ. ಲಕ್ಷ್ಮಮ್ಮ ಹೀಗೆ ಹೇಳಿದಳು ಅಂತ ಸುಬ್ಬಮ್ಮ ನಮ್ಮಮ್ಮನ ಹತ್ತಿರ ಹೇಳಿ, ತನ್ನ ಬಡತನಕ್ಕೆ ಆಗಾಗ ಕಣ್ಣೀರು ಹಾಕ್ತಿದ್ದಳಂತೆ. ಅದು ಹೇಗಾದರೂ ಇರಲಿ. ಸುಬ್ಬಮ್ಮನಿಗೆ ಈಗ ಲಕ್ಷ್ಮಮ್ಮನ ಜ್ಞಾಪಕ ಆಯ್ತು. 'ಅವಳ ಹತ್ತಿರ ಹೋದರೆ ಹಣ ಸಿಗುತ್ತದೆ. ಮಗೂನ ಅವಳ ಹತ್ತಿರ ಬಿಟ್ಟು ಪೂಜೆ ಮಾಡಿಬಿಡೋದು. ನಾಳೆ ಕೆಲಸ ಎಲ್ಲಾದರೂ ಸಿಗುತ್ತೆ. ಹಣ ಕೊಟ್ಟು ಮಗೂನ ಬಿಡಿಸಿಕೊಂಡು ಬಂದು ಬಿಡೋದು' ಅಂತ ಮನಸ್ಸಿನಲ್ಲಿ ಮಾಡಿಕೊಂಡು, ಲಕ್ಷ್ಮಮ್ಮನ ಹತ್ತಿರ ಹೋದಳು. ಕೇಳಿದಳು. ಲಕ್ಷ್ಮಮ್ಮ ಇದೇ ಹೊತ್ತು ಅಂತ 'ಹೂ' ಎಂದಳು. 'ಎಷ್ಟು ಬೇಕು?' ಎಂದಳು. ಸುಬ್ಬಮ್ಮನಿಗೆ ಒಂದು ರೂಪಾಯಿ ಸಿಕ್ಕರೆ ಸಾಕಾಗಿತ್ತು, ಅಷ್ಟೇ ಕೇಳಿದಳು. ಲಕ್ಷ್ಮಮ್ಮ ಕೊಟ್ಟಳು. ಸುಬ್ಬಮ್ಮ ಅದನ್ನು ತೆಗೆದುಕೊಂಡು ಹೋಗಿ, ಹಿಟ್ಟು ಸೌತೆಕಾಯಿ ಕೊಂಡು, ಸೌತೆಕಾಯಿ ದೋಸೆ ಮಾಡಿ, ಒಂದು ಮಡಕೆಯಲ್ಲಿ ದೇವರ ಮುಂದಿಟ್ಟು, ಮುಚ್ಚಿ ನಮಸ್ಕಾರ ಮಾಡಿ, ನಾಳೆ ಎಲ್ಲಾದರೂ ಕೆಲಸ ಸಿಗುತ್ತೇನೋ ನೋಡೋಣ ಅಂತ ಹೊರಟಳು. ಅಷ್ಟರಲ್ಲೇ ಲಕ್ಷ್ಮಮ್ಮ ಏನು ಮಾಡಿದಾಳೆ ಗೊತ್ತೆ?— ಆ ಊರಿನ ಹೆಂಗಸರಿಗೆಲ್ಲಾ ಹೇಳಿಬಿಟ್ಟಿದ್ದಾಳೆ: 'ಸುಬ್ಬಮ್ಮನನ್ನ ಕೆಲಸಕ್ಕೆ ಕರೀಬೇಡಿ. ಕರೆದರೆ ನೋಡಿ!' ಎಂದು ಎಲ್ಲರಿಗೂ ಹೆದರಿಸಿಬಿಟ್ಟಿದ್ದಾಳೆ. ಲಕ್ಷ್ಮಮ್ಮನ ಮಾತು ಯಾರಾದರೂ ಮೀರೋದು ಅಂದರೆ ಏನು! ದಾರೀಲಿ ಹೋಗ್ತಿದ್ದರೆ ಕೆಲಸ ಇಲ್ಲದಿದ್ದರೂ ಸುಮ್ಮನೆ ಕರೆದು ನಾಲ್ಕು ಒಳ್ಳೆಯ ಮಾತನಾಡೋ ಹೆಂಗಸರು ಕೂಡ ಸುಬ್ಬಮ್ಮನ ಕಡೆ ನೋಡೋದಿಲ್ಲ ಆ ದಿನ. ಸುಬ್ಬಮ್ಮನಿಗೆ ಅರ್ಥವಾಗಲಿಲ್ಲ. ಆಗ ಅವಳಿಗೆ ಒಂದು ಮುದುಕಿ ಹೇಳಿದಳಂತೆ: 'ನೋಡು, ಲಕ್ಷ್ಮಮ್ಮ ಹೀಗೆ ಹೆದರಿಸಿಬಿಟ್ಟಿದ್ದಾಳೆ. ನಿನ್ನ ಮಗೂ ಹೊಡೆಯೋ ಆಲೋಚನೆ ಇದೆಲ್ಲ. ಅಯ್ಯೋ ಬೆಪ್ಪೆ, ಮಗೂ ಕೊಟ್ಟು ಕೂರೋದೂ ಉಂಟೆ!' ಎಂದು ಹೇಳಿದಳು. ಸುಬ್ಬಮ್ಮನಿಗೆ ಏನು ಮಾಡಬೇಕು ಅಂತ ತಿಳಿಯಲಿಲ್ಲ."

ನನಗೂ ಏನು ಮಾಡಬೇಕು ಅಂತ ತಿಳಿಯಲಿಲ್ಲ. ನನ್ನ ಊಟ ಮುಗಿದು ಹೋಗಿ ಕೈ ಕೂಡ ಒಣಗಲಿಕ್ಕೆ ಬಂತು. ನಾನು ಏಳಲಿಲ್ಲ ಅಂತ ನಿರ್ಮಲಾ ಅವಳೂ ಕುಳಿತಿದ್ದಾಳೆ. "ಅಜ್ಜಿ, ಕೈ ತೊಳೆದು ಬರ್ತೀವಿ, ನೀನೂ ಊಟ ಮಾಡಿಬಿಡು. ಆಮೇಲೆ ಸುಬ್ಬಮ್ಮನ ಕತೆ ಹೇಳು" ಎಂದೆ. 'ಹಾಗೇ ಮಾಡು' ಎಂದು ತಾನೂ ಊಟಕ್ಕೆ ಕೂತಳು. ನಾನೂ ನಿರ್ಮಲಾಎದ್ದೆವು. ಕೈ ತೊಳೆದು ಕೊಂಡು ಬಂದೆವು. ನನಗೆ ನಿರ್ಮಲಾ ಮೇಲೆ ಸಿಟ್ಟು ಇದ್ದೇ ಇತ್ತು. "ಈಗ ಅಜ್ಜಿ ಕತೆ ಹೇಳಿದ ಮೇಲೆ"—ಎನ್ನುವಷ್ಟರಲ್ಲೇ, ಅಜ್ಜಿ ಬಾಯಲ್ಲಿ ತುತ್ತು ಇದ್ದಾಗ್ಲೂ "ಕತೆ ಅಲ್ಲಾ ಕಣೋ ಕತ್ತೆ—ನಡೆದ ಸಮಾಚಾರ" ಎಂದಳು. "ಹಾಗೇ ಆಗಲಿ, ಅಜ್ಜಿ. ನೀನು ಮೊದಲು ಊಟ ಮಾಡು" ಎಂದೆ. ಮತ್ತೆ ನಿರ್ಮಲಾ ಕಡೆ ತಿರುಗಿ "ಅಜ್ಜೀದು ಆದ ಮೇಲೆ ಪಾಠ ಓದಿಕೋಬೇಕು ತಿಳಿತೋ? ರಾಜಿ ಜೊತೆಗೆ ಆಟಕ್ಕೆ ಓಡೀಯಾ ?" ಎಂದೆ. "ನಾನು ಪುಸ್ತಕ ಎಲ್ಲ ಸರಸ್ವತಿ ಮುಂದಿಟ್ಟುಬಿಟ್ಟಿದ್ದೇನೆ. ಸಾಯಂಕಾಲ ಪೂಜೆ ಆದ ಮೇಲೇನೆ ತೆಗೆಯೋದು" ಎಂದಳು. ನನಗೆ 'ಅಯ್ಯೋ' ಎನ್ನಿಸಿತು. ನನಗೆ ಹಾಗೆ ಅಂತ ಅವಳು ಮೊದಲೇ ಹೇಳಿದ್ದರೆ, ನನ್ನ ಅಷ್ಟು ಪುಸ್ತಕಾನೂ ತಂದು ಪೇರಿಸಿ "ದೇವಿ, ಈ ದಿನ ನೀನೇ ಇದನ್ನೆಲ್ಲ ಓದಿಕೋ ಅಂತ ಹೇಳಿಬಿಡುತ್ತಿದ್ದೆನಲ್ಲಾ!" ಎನ್ನಿಸಿತು. ಇನ್ನು ಹೇಗೆ ಈ ನಿರ್ಮಲಾ ಮೇಲೆ ಸೇಡುತೀರಿಸಿಕೊಳ್ಳಲಿ ಎಂತ ಆಲೋಚನೆ ಮಾಡ್ತಾ ಇದ್ದೆ. ಅಷ್ಟು ಹೊತ್ತಿಗೆ ಅಜ್ಜಿ ಊಟ ಆಯ್ತು ಅಂತ ತಿಳಿಯೋ ಹಾಗೆ ಒಂದು ತೇಗು ಅಡಿಗೆ ಮನೆಯಿಂದ ಬಂತು. ಸರಿ ಅಂತ ಷರ್ಟು ಹಾಕಿಕೊಂಡು ಬಂದೆ. ಅಷ್ಟು ಹೊತ್ತಿಗೆ ನಿರ್ಮಲಾ ಎಲೆ ಅಡಿಕೆ ಜಜ್ಜಿ ಅಜ್ಜಿಗೆ ಕೊಡಲು ಬಂದಳು. "ಎಲಾ ಎಲಾ! ಹೀಗೆ ಸೀಸಿ ಹೊಡೆಯಲು ಹೆಂಗಸರು ಸಣ್ಣವರಿರಬೇಕಾದರೇ ಪ್ರಾರಂಭ ಮಾಡ್ತಾರಲ್ಲ" ಎಂತ ನನಗೆ ಆಶ್ಚರ್ಯ ಆಯ್ತು. ಅದಕ್ಕೇ ಕಾಲೇಜಿ ನಲ್ಲಿ ಯಾವ ಆನರ್ಸ್ ತೆಗೆದುಕೊಳ್ಳಿ—Merit scholarship ಇವರಿಗೇ!

ಎಲೆಅಡಿಕೆ ಅಗಿಯುತ್ತಾ—ಜಗಿಯೋದೇನು ಬಂತು ಅಲ್ಲಿ! ಹಲ್ಲಿದ್ದ ರಲ್ಲವೆ? ಮೆಲಕು ಹಾಕುತ್ತಾ—ಅಜ್ಜಿ ನಿರ್ಮಲ ಚಾಪೆ ಮೇಲೆ ಕುಳಿತರು. ನಾನೂ ಕುಳಿತುಕೊಂಡೆ.

ಅಜ್ಜಿ, "ಎಲ್ಲಿ ತನಕ ಹೇಳಿದೆ?" ಎಂದು ಕೇಳಿದರು. ನನಗೂ ಈ ಗಲಾಟೇಲಿ ಮರೆತುಹೋಗಿತ್ತು. ನಾನು ಆಲೋಚಿಸಲು ಪ್ರಾರಂಭಮಾಡಿದೆ.

ಅಷ್ಟರಲ್ಲಿ ನಿರ್ಮಲಾ "ಸುಬ್ಬಮ್ಮನ ಫಜೀತಿ—" ಎಂದಳು. "ನೋಡಿದೆಯಾ, ಈ ಹುಡುಗಿಗಿರೋ ಅಷ್ಟು ಜ್ಞಾಪಕಶಕ್ತಿ ನಿನಗಿಲ್ಲ. ಈ ವಯಸ್ಸಿನಲ್ಲೇ ಹೀಗಾದರೆ ಮುಂದೆ ಹೇಗೋ ಅಪ್ಪ" ಎಂದು ಅಜ್ಜಿ ನಿಟ್ಟುಸಿರುಬಿಟ್ಟಳು. "ಈ ಶನಿ ಒಳ್ಳೇ ನನಗೆ ಬಯ್ಸಿಕೊಳ್ಳೋ ಹಾಗೆ ಮಾಡ್ತಾಳಲ್ಲ. ಸ್ವಲ್ಪ ಹೊತ್ತು ಸುಮ್ಮನಿರಲಿಕ್ಕೇನಾಗಿತ್ತು ಇವಳಿಗೆ?" ಎಂದುಕೊಂಡೆ. ಹೆಂಗಸರಿಗೆ ಜ್ಞಾಪಕ ಶಕ್ತಿ ಜಾಸ್ತಿ ಎನ್ನುವುದು ಆಗ ನನಗೆ ತೋರದೇ ಇರಲಿಲ್ಲ. ಮತ್ತೆ ಅಜ್ಜಿ—

"ಸುಬ್ಬಮ್ಮನಿಗೆ ರಾತ್ರಿ ಎಲ್ಲಾ ನಿದ್ದೆ ಇಲ್ಲ. 'ದೇವರೇ, ನನ್ನ ಮಗೂನ ನನಗೆ ಕೊಡೋ ಹಾಗೆ ಮಾಡು' ಅಂತ ಅತ್ತಿದ್ದೂ ಅತ್ತಿದ್ದೆ. ಅತ್ತು ಅತ್ತು ಹಾಗೇ ನಿದ್ದೆ ಹತ್ತಿತು. ಬೆಳಗ್ಗೆ ಎದ್ದಳು. ಮಗೂ ಜ್ಞಾಪಕ ಆಯ್ತು. 'ಅಯ್ಯೋ, ಮಗೂಗೆ ಹಸಿವಾಗಿದೆಯೋ ಏನೋ, ಈ ದೋಸೆ ಆದರೂ ಒಯ್ತೀನಿ' ಅಂತ ದೇವರ ಮುಂದಿಟ್ಟ ಮಡಕೆ ಮುಚ್ಚಳ ತೆಗೆದು ನೋಡ್ತಾಳೆ— ಜಗಜಗ ಹೊಳೀತಾ ಇದೆ!"

"ಏನೂ?"

"ಚಿನ್ನ ಕಣೋ!"

"ಅಂದರೆ?"

"ದೋಸೆ ದೇವರ ಆಶೀರ್ವಾದದಿಂದ ಚಿನ್ನ ಆಗಿಹೋಯ್ತು. ಹಾಗೇ ಚಿನ್ನ ಮಾರಿ ಮಗೂನ ಬಿಡಿಸಿಕೊಂಡು ಸಾಯೋತನಕ ಸುಖವಾಗಿದ್ದಳು. ಅದಕ್ಕೇ ನಾವು ವರ್ಷಾ ವರ್ಷಾ ಶಾರದೆ ಪೂಜೆಯ ದಿನ ಮಡಿಕೇಲಿ ಸೌತೆ ಕಾಯಿ ದೋಸೆ ಇಡೋದು!"

"ನಿಜವಾಗಿಯೂ ಚಿನ್ನ ಆಗುತ್ತೇನಜ್ಜಿ?" ಎಂದು ನಿರ್ಮಲಾ ಕೇಳಿದಳು.

"ಹಾಗೆ ಸುಬ್ಬಮ್ಮನಿಗಾಯ್ತು ಅಂತ ನಮುಗಾಗುತ್ತ್ಯೇನೆ?"

ನನಗೆ ಇದೇ ಹೊತ್ತು ಅಂತ ಹೇಳಿದೆ: "ನಿರ್ಮಲಾನ ಅಡವಿಟ್ಟು ದೋಸೆ ಮಾಡಿ ನೋಡಜ್ಜಿ!" ನಿರ್ಮಲಾ ನನ್ನನ್ನ ಗುರುಗುರು ನೋಡಿದಳು. ಇನ್ನು ಬುಳುಬುಳು ಅತ್ತರೆ ಸಮಾಧಾನ ಹೇಗಪ್ಪಾ ಮಾಡೋದು ಅಂತ ನನ್ನ ಕೋಣೆಗೆ ಓಡಿಬಿಟ್ಟೆ.

—**ಹಾಲಾಡಿ ಮಾರುತಿರಾವ್.**

# ಕಾಲಾಣಿ

ಅವೊತ್ತು ಭಾನುವಾರ. ಗಂಟೆ ಐದಾಗಿದ್ರೂನೂ ಬಿಸಿಲು ಜೋರಾಗೇ ಇತ್ತು. ನನಗೂ ರೂಂನಲ್ಲಿ ಒಬ್ಬನೇ ಇದ್ದದ್ದರಿಂದ ಬೇಜಾರಾಗಿತ್ತು. ಸ್ನೇಹಿತ ರಾಮೂ ಮನೇಗಾದರೂ ಹೋಗೋಣಾಂತ ಮನಸ್ಸಾಯ್ತು. ಎದ್ದು ಮುಖ ತೊಳ್ಕೊಂಡು, ಆಗ ತಾನೆ ಅಗಸನ ಮನೆಯಿಂದ ironಆಗಿ ಬಂದ ಬಟ್ಟೆ ಧರಿಸಿಕೊಂಡು ಹೊರಗೆ ಹೊರಟೆ. ಶೇಷಾದ್ರಿಪುರ! ಅದೇ ಸರ್ಕಲ್ಲು, ಅದೇ ಜನದ ಗುಂಪು. ಪೇಪರ್ ನೋಡ್ಕೊಂಡು, ಹಾಗೇ ಕಾಫಿ ಕುಡ್ಕೊಂಡ್ಬರೋಣ ಅಂತ ರೀಡಿಂಗ್ ರೂಂ ಕಡೆಗೆ ಬಂದೆ. ಬಿಸಿಲಿಗೆ ಮುಖ ಕಂಗೆಟ್ಟಿತ್ತು. ಮುಖದ ಬೆವರು ಒರಸಿಕೊಂಡು ಕ್ರಾಪು ತಿದ್ದಿಕೊಳ್ಳೋಣಾಂತ ಜೇಬಿನಿಂದ ಕರ್ಚೀಫ್ ತೆಗೆದೆ. "ಠಣ್" ಅಂತ ಏನೋ ಕೆಳಗೆ ಬಿದ್ದ ಸದ್ದು ಕೇಳಿಸಿತು. ಅದೇನೋ ನೋಡೋಣ ಅಂತ ಅಲ್ಲೇ ಹುಡುಕಾಡತೊಡಗಿದೆ. "ಇಟಲಿಯ ಮಂತ್ರಿ ಮಂಡಲದಲ್ಲಿ ಬಿಕ್ಕಟ್ಟು . . . ಕಾಶ್ಮೀರ ನಿಯೋಗದ ವಿಫಲ ಸಂಧಾನ . . . '—ರವರಿಂದ ಗಾಂಧೀಜಿ ಪ್ರತಿಮೆಯ ಅನಾವರಣ . . . ಬೊಂಬಾಯಿನಲ್ಲಿ ಭಾರಿ ಬೆಂಕಿ ಅನಾಹುತ; ಐದು ಜನ ಸತ್ತು ಆರು ಜನರಿಗೆ ಘಾಯ . . . ರಾಯಲಸೀಮೆಯಲ್ಲಿ ಕ್ಷಾಮ . . . ಅಸ್ಸಾಮಿನಲ್ಲಿ ಭೂಕಂಪದ ಅಪಘಾತ . . . ಬ್ರಹ್ಮಪುತ್ರಾ ನದಿಯಲ್ಲಿ ಪ್ರವಾಹ; ನೊಂದವರಿಗೆ ಪರಿಹಾರ . . . ನೆಹ್ರೂ ವಿಷಾದ . . . " ಅಂತ ಅಲ್ಲಿ ಪೇಪರು ಓದುತ್ತಿದ್ದವರಿಗೆಲ್ಲ ಈ ಶಬ್ದದ ಕಡೆಗೇ ಗಮನ. ಎಲ್ಲರೂ ಬಗ್ಗಿದ ನನ್ನನ್ನ ನೋಡುವವರೇನೆ! ಗಾಂಧೀಜಿ ಸತ್ತು ವರ್ಷದ ಮೇಲಾಗಿದ್ರೂನೂ ಆ ಮಹಾತ್ಮ ಉಪದೇಶ ಮಾಡಿದ ಕರುಣೆ, ಅನುತಾಪ, ಸಹಾನುಭೂತಿ ಇನ್ನೂ ತಮ್ಮಲ್ಲಿದೆ ಅಂತ ತೋರಿಸ್ಕೊಳ್ಳೋಕ್ಕೆ ಗಾಂಧಿ ಟೋಪಿ ಭಕ್ತರು ಒಬ್ಬೊಬ್ಬರಾಗಿ ನನ್ನ ಜೊತೇಲಿ ಹುಡ್ಕೋಕ್ಕೆ ಸೇರ್ಕೊಂಡ್ರು.

ಒಬ್ಬಾತ, "ಏನು ನೀವು ಹುಡುಕುತಿರೋದು?" ಎಂದು ಮುಂದೆ ಬಂದು, "ನೋಡಿ, ನಮ್ಮ ಮುನಿಸಿಪಾಲಿಟಿಗಳಿಗೆ ಸ್ಯಾನಿಟರಿ ಇಂಜನೀಯರಿಂಗ್ ಅಂದ್ರೇನೂ ಅನ್ನೋದೆ ಗೊತ್ತಿಲ್ಲ. ಒಳಚರಂಡಿ ವ್ಯವಸ್ಥೆ ಅಂತ ಅನ್ನೋದೇನು, ಇಂಥ ಸ್ಥಳಗಳಲ್ಲಿ ಚರಂಡೀ ಮೇಲೆ ಹನುಮಂತರಾಯ ಹಲ್ಕಿರ್‍ಕೊಂಡಿರೋ ಹಾಗೆ ಕಲ್ಚಪ್ಪಡಿ ಹಾಕ್ಸಿರೋದೇನು? ಏನಾರೂ ಪದಾರ್ಥ

ಚರಂಡಿ ಒಳಕ್ಕೇ ಬಿತ್ತು, ಆ ನಷ್ಟಾನ ಕಟ್ಕೊಡ್ತಾರೆಯೆ ಸ್ವಾಮಿ, ಮುನಿಸಿಪಾಲಿಟಿಯೋರು? ಹತ್ತು ವರ್ಷದ ಹಿಂದೆ . . . ನಮ್ಮ ಸರಸು . . . ಚಿನ್ನದ ಎರಡೆಳೆ ಸರ . . . ಕಾರ್ಪೊರೇಷನ್ ಆಕ್ಟ್ ಪ್ರಕಾರ . . . " ಎಂದು ತನ್ನ ಅನುಭವ, ಸರ್ವೀಸು ಹೇಳ್ಕೊಳ್ಳೋಕೆ ಪ್ರಾರಂಭಿಸಿದ.

ಆ ಗುಂಪಿನಲ್ಲೇ ಇದ್ದ ಸೆಂಟ್ರಲ್ ಕಾಲೇಜ್ ವಿದ್ಯಾರ್ಥಿ ಒಬ್ಬ, "ಎಲ್ಲಿಂದ್ಬಿತ್ತು ಸಾರ್? . . . ಓಹೋ ಜೇಬಿಂದಾನೇ?" ಎಂದು ಕ್ಷಣಕಾಲ ಬಿಟ್ಟು, "ಮ್ಯಾಕ್ಸಿಮಂ ಹೈಟು . . . earth's attractionಉ . . . . ಸೌಂಡು . . . energy . . . workಉ" ಅಂತ, ಎಂದೋ ತಾನು ಓದಿ ಮರೆತಿದ್ದ Physicsನ್ನ ನನ್ಮುಂದೆ ಜ್ಞಾಪಿಸ್ಕೊಂಡು, "ಇಷ್ಟರಲ್ಲೇ ಹುಡ್ಕಿ ಸಾರ್, ಸಿಕ್ಕುತ್ತೆ" ಎಂದು ಖರಾರುವಾಕ್ಕಾಗಿ ಹೇಳೇಬಿಟ್ಟ.

ಅಷ್ಟರಲ್ಲೇ ಆ ದಾರೀಲಿ ಬರುತ್ತಿದ್ದ ಅರ್ಥಶಾಸ್ತ್ರದ ಪಂಡಿತರೊಬ್ಬರು, "Banking and Currency ಅಂದ್ರೇನು? . . . Money and Exchangeಉ . . . ಹಣದ ಮೌಲ್ಯ . . . financial commissionಉ . . . inflation . . . ದೇಶದ ಆರ್ಥಿಕ ಪರಿಸ್ಥಿತಿ . . . ಆರ್ಥಿಕ ವಿಲಿನೀಕರಣ ಹೀಗಿರ್ಬೇಕಾಗಿತ್ತು . . . Reserve bankನಲ್ಲಿ ಹೀಗೆ . . . Foreign Exchangeನಲ್ಲಿ ಹಾಗೇ" ಅಂತ ಒಂದು ದೊಡ್ಡ ಭಾಷಣವನ್ನೇ ಮಾಡಿದ ಮೇಲೆ, "ಈಗಿನ ಕಾಲದಲ್ಲಿ ಮೂರು ಕಾಸೇ ರೂಪಾಯಿ ಆಗ್ಹೋಗ್ಬಿಟ್ಟಿದೆ" ಅಂತ ಒಣ ವೇದಾಂತಾನ ಅಲ್ಲಿದ್ದವರಿಗೆ ಹೇಳಿ ಮುಂದಕ್ಕೆ ಹೊರಟರು.

ದೂರದಿಂದಲೇ ಇದನ್ನೆಲ್ಲಾ ನೋಡ್ತಾ ನಿಂತಿದ್ದ ಕುಡಿಮೀಸೆಯ B.E. ಪದವೀಧರನೊಬ್ಬ ಹುಸಿನಗುತ್ತಾ ಮುಂದೆ ಬಂದು, ಆ ಸ್ಥಳಾನೆಲ್ಲ survey ಮಾಡಿ, "ಈ ಕಲ್ಲನ್ನೇ support ಆಗಿಟ್ಕೊಂಡು, ten feetಉ fulcrum ಹಾಕಿ ಚಪ್ಪಡೀನ ಮೀಟಿ, ಸಾರ್" ಅಂತ ಸೂಚನೆ ಮಾಡಿ ಹೊರಟೇಬಿಟ್ಟ.

ನಾನು ಹುಡ್ಕೋದು ಬಿಟ್ಟು ಈ ಮಾತನ್ನೆಲ್ಲಾ ಕೇಳಿದ ಮೇಲೆ "ಛೆ! ನಮ್ಮ ಪೂರ್ವಿಕರು 'ಕುರಿ ಹಳ್ಳಕ್ಕೆ ಬಿದ್ದರೆ ಆಳ್ಗೊಂದು ಕಲ್ಲು' ಅಂತ ಗಾದೆ ಮಾಡಿರೋದು ಶುದ್ಧ ತಪ್ಪು. ಈಗಿನ ಕಾಲಕ್ಕೆ ತಕ್ಕ ಹಾಗೆ 'ಮನುಷ್ಯ ಎಡವಿ ಬಿದ್ದರೆ ಆಳ್ಗೊಂದು ಮಾತು' ಅಂತ ಹೇಳೋದೆ ನ್ಯಾಯ" ಅಂತ ನನಗನ್ನಿಸ್ತು. "Quit India ಅಂತ ಕಿರಿಚಿದ ನಮ್ಮ ಜನರ decency

. . . common-senseಉ ಇಂಡಿಯಾನ ಬಿಟ್ಟುಬಿಟ್ಟು ಹೊರಟ್ಹೋಗ್ರಿದ್ರೂ, 'freedom' ಅನ್ನೋ ಪದಕ್ಕೆ ಅರ್ಥ ತಿಳಿದುಕೊಳ್ಳದ ಭಾರತೀಯರ wis-domಉ . . . ಇನ್ನೂ ruffians ಆಗಿರೋ ನಮ್ಮ young Indiansಉ . . . ನಮ್ಮ education systemಉ . . . ಕಂದಾಚಾರ, ಪದ್ಧತಿ . . . culture literature . . . ಅಂದ್ಹಾಗೆ ನಾನು ಓದಿದ್ದ ಜೋಸೆಫ್ ಅಡಿಸನ್ನಿನ Adventures of a shilling ಅನ್ನೋ essayಯ styleಉ . . ." ಅಂತೆಲ್ಲಾ ಯೋಚನೆ ಮಾಡ್ತಾ ನಿಂತಿರೋ ನನ್ನನ್ನ ಆ ಕಡೇನೆ ಹೋಗ್ತಾ ಇದ್ದ paper representative ಒಬ್ಬ ನಾಳಿನ paperಗೆ ಸುದ್ದಿ ಸಿಕ್ತೆಂದು ಉತ್ಸಾಹದಿಂದ "ಯಾರದ್ದು ಸಾರ್ lecture ಇಲ್ಲಿ?" ಅಂತ ಎಲ್ಲರನ್ನೂ ಬಿಟ್ಟು ನನ್ನ ಕೇಳಿದ ಮೇಲೇನೇ ನನಗೆ ಎಚ್ಚರ. ಆ ಕಡೆ ನೋಡ್ತೇನೆ! ನಾನು ಯೋಚಿಸಿದಂತೆಯೇ, ಈ ಜನದ ಗುಂಪು ನೋಡಿ diciplineಉ . . . order . . . ಶಾಂತಿ . . . ಶಿಸ್ತಿಗೆ ಭಂಗ ಬರದಂತೆ ನೋಡ್ಕೊಳ್ಳೋಕೆ ಪೋಲೀಸ್ ದಳ ಸಹಿತ ಬಂದ್ಬಿಟ್ಟದೆ!

ನಾನು ವಿಸ್ಮಯದಿಂದ ಆ ಜನಸಮೂಹವನ್ನೇ ನೋಡುತ್ತಾ ನಿಂತಿರೋವಾಗ ನನ್ನಪಕ್ಕದಲ್ಲೇ "ಠಣ್" ಅಂತ ಶಬ್ದವಾಯ್ತು. ತಿರುಗಿ ನೋಡ್ತೇನೆ: ನನ್ನ ಹತ್ತಿರದಲ್ಲೆ ನಿಂತಿದ್ದಾತನಾಕೆ ಎತ್ಕೊಂಡಿದ್ದ ಮಗು ತನ್ನ ಕೈಲಿದ್ದ ಮೂರು ಕಾಸನ್ನ ಕೆಳಕ್ಕೆ ಬೀಳಿಸಿ ನಗುತ್ತಾ ಕೇಕೆ ಹಾಕ್ತಿತ್ತು. ಆಗ ಗೊತ್ತಾಯ್ತು: ಕೆಳಗೆ ಬಿದ್ದ ದುಡ್ಡು ನನ್ನದು ಅಲ್ಲಾಂತ. ಇಷ್ಟು ರಂಪ, ಆ ಜನದ ಹುಡುಕಾಟ, ನಾನು ಬಿದ್ದ ಬೇಸ್ತು ಇದೆಲ್ಲ ಯೋಚಿಸ್ಕೊಂಡು ನಗು ಬಂತು. ಅಲ್ಲಿಂದ ಹೋಟೆಲ್ ಕಡೆಗೆ ಹೊರಟೆ. ಆದರೆ ಆ ಜನ ಮಾತ್ರ ಇನ್ನೂ ಹುಡುಕುತ್ತಲೇ ಇದ್ದರು.

ಇನ್ನೂ ಹುಡುಕುತ್ತಲೇ ಇದ್ದಾರೋ ಏನೋ!

—ಎನ್. ಎಸ್. ಕೃಷ್ಣಸ್ವಾಮಿ.

# ಅನಾಂತರ

"ಅಯ್ಯೋ ತಾಳಮ್ಮ, ಹೊತ್ತಾಗಿಹೋಯ್ತು. ಹನ್ನೊಂದೂವರೇಗೆ ಪರೀಕ್ಷೆ. ಇನ್ನೂ ಸ್ವಲ್ಪ ಓದಿಕೊಬೇಕು. 'ಸ್ನಾನ, ಸ್ನಾನ' ಅಂತ ಏನು ಸುಮ್ಮನೆ ಕೂಗ್ತಿ! ಸ್ನಾನ ಇಲ್ದೇ ಇದ್ದರೆ ಅಷ್ಟೇ ಹೋಯ್ತು . . .

"ಸರಿ, ಸ್ನಾನ ಆಯ್ತುಂದ್ರೆ ಸಂಧ್ಯಾವಂದನೆ ಅಂತ ನೀನೇನಜ್ಜಿ ಸುಮ್ಮನೆ ಗೋಳುಹುಯ್ಕೋತೀಯ . . .

"ಏನಜ್ಜಿ, ಜನಿವಾರ ಇಲ್ದೇ ಆಪೋಶ್ನ ತಕೊಳ್ತಿದ್ದೀನಾ ? ಚೆನ್ನಾಯ್ತು.

"ಥೂ, ಇದೊಂದು ದಾರ! ನೆಟ್ಟಸೀನ್ ತೆಗೆದ್ರೆ, ಅದರ ಜೊತೆಗೇ ಹೋಗ್ಬಿಡುತ್ತೆ! . . .

"ಲೋ ಶಾಮಿ, ಎಲ್ಲಿಟ್ಯೋ ನೆಟ್ಟಸೀನು ? ಏನು, ಹಾಸಿಗೆ ಮಧ್ಯೆ ಹಾಕಿದ್ದೀಯ ? ಸಿನ್ಯಾರು ಹಾಕು ಅಂದ್ರು ? . . ಹತ್ತು ಗಂಟೆ ಆಗೋಯ್ತು. ಇಟ್ಟಿದ್ದು ಇಟ್ಟ ಕಡೇ ಇರೋಲ್ಲ ಈ ಮನೇಲಿ . . .

"ಏನಮ್ಮ ಇದು ? ಸಾರಿಗೆ ಉಪ್ಪೇ ಹಾಕಿಲ್ಲ. ಏನು, ಉಪ್ಪು ತರಸೋದು ಮರತೇ ಬಿಟ್ಯಾ . . . ಹೋಗಲಿ, ಹತ್ತೂವರೆ ಆಗೋಯ್ತು. ಮಜ್ಜಿಗೇನೇ ಹಾಕ್ಬಿಡು . . . ಏನೆಂದೇ, ಮೊಸರಿನವಳು ಇನ್ನೂ ಬಂದೇ ಇಲ್ವಾ ? . . .

"ಬೇಗ ಹೋಗಿ ಪಕ್ಕದ್ಮನೇ ಇಂದ ಸ್ವಲ್ಪ ಮಜ್ಜಿಗೆ ತೊಗೊಂಡ್ಬಂದು ಹಾಕಮ್ಮ, ಸರಸು . . .

"ಲೋ ವೆಂಕಟ್ರಾಮು, ಇಂಕ್ಬಾಟ್ಲು ಎಲ್ಲಿಟ್ಯೋ ? . . . ಪಕ್ಕದ್ಮನೇಗೆ ಕೊಟ್ಟಿದ್ದೀಯ ? ಇಸ್ಕೊಂಡು ಬಾ ಹೋಗೋ ಕತ್ತೆ, ಹೊತ್ತಾಯ್ತು! . . .

"ಅದೆಲ್ಲಮ್ಮ, ನನ್ನ ಮೇಜಿನ ಮೇಲಿದ್ದ ಪೆನ್ನು ? . . . ಏನೂ . . . ನಾರಾಯಣ ತೊಗೊಂಡ್ಹೋಗಿದಾನ ? ಹತ್ತೂಮುಕ್ಕಾಲಾಗಿಹೋಯ್ತು. ಹೋಗೋ, ಅಣ್ಣ ಪರೀಕ್ಷೆಗೆ ತೆಗೆದುಕೊಂಡು ಹೋಗ್ಬೇಕಂತೆ ಅಂತ ಹೇಳಿ ಇಸ್ಕೊಂಡು ಬಾ . . .

"ಸದ್ಯ, ಕೊಟ್ನಲ್ಲ! ಇದೇನೋ ಇದು ? ನೀಲಿಸೀರೋ, ಇಂಕೋ ? ಅಯ್ಯೋ ದೇವರೆ . . . ಇದರಲ್ಲಿ ಬರೆದರೆ, ಕರೆಕ್ಟ್ ಮಾಡೋವರು ಎಷ್ಟು ಕನ್ನಡಕ ಹಾಕ್ಕೋಬೇಕೋ . . . ?

"ಸರಿ, ದೇವರ ಕುಂಕ್ಮ ನೀನೇ ಹಚ್ಕೊ. ಥೂ, ಹನ್ನೊಂದಾಯ್ತು. ನೀನೇನಜ್ಜಿ? ನಾನ್ಯಾನೆ ಬರೆಯೋದು! ಕುಂಕ್ಮ ಇಲ್ದೆ ಇದ್ರೇನು? ಕಲ್ಸಿದ್ದೇವ್ರು ಬರ್ಸೇ ಬರಿಸ್ತಾನೆ . . .

"ಅಯ್ಯೋ, ಚಾಪೇ ಮೇಲೆ ಹಾಲ್ ಟಿಕೆಟ್ಟು ಇಟ್ಟಿದ್ನಲ್ಲ, ಏನಾಯ್ತಮ್ಮ? . . . ಏನಂದೆ ಅಜ್ಜಿ? ಮೆಣಸಿನಕಾಯಿ ಕಟ್ಟಿಟ್ಟಿದ್ದೀಯ ? . . . ನಿಸ್ಸೂರಾಯ್ತು . . . ಇದೇನಿದು, ಉಪ್ಪಿನಕಾಯಿ ಸೀರ್ಬಿಟ್ಟಹಾಗೆ ಪೇಪರೆಲ್ಲಾ ನೀರು! ಥೂ.

"ಇದೇನಮ್ಮ ಇದು, ಷೂ ಲೇಸೇ ಇಲ್ಲ . . . ? ಏನಂದೇ, ಎರಡನ್ನೂ ಸೇರ್ಸಿ . . . ಮಗೂಗೆ ಉಡಿದಾರ ಕಟ್ಟಿದ್ಯಾ . . . ? ಸರಿಹೋಯ್ತು! ಚಪ್ಪಲೀಗೆ ಉಂಗುಷ್ಟಾನೇ ಇಲ್ಲ . . . ದೇವ್ರೇ . . . ಹನ್ನೊಂದೂಕಾಲಾಗೋಯ್ತು . . . ಲೋ, ಸೈಕಲ್ಲೆಲ್ಲೋ . . . ? ಗೋಡೇಗೆ ಒರಗ್ಸಿದ್ದೀಯಾ ? . . . ಅಯ್ಯಯ್ಯೋ ಸೈಕಲ್ಲ್ ಪಂ . . . ಕ್ಚ . . . ರ್!

* * * *

"ಶ್ರೀನಿವಾಸಾ, ಶ್ರೀನಿವಾಸಾ! ಐದ್ಗಂಟೇಗೆ ಅಲಾರಂ ಹೊಡಿತಾ ಇದೆ, ಎದ್ದೇಳಪ್ಪಾ. ಯಾಕೋ ಇಷ್ಟು ಬೆವರಿದ್ದೀಯೆ ?" ಎಂದರು ನಮ್ಮಜ್ಜಿ.

—ಶ್ರೀನಿವಾಸಮೂರ್ತಿ.

---

## ಅಂತರೀಕ್ಷಣೆ

ಚಿತ್ತದನುಭವ ಭಾವ ಸಂಭಾವನೆಗಳೆಲ್ಲ
ಭತ್ತವದನು ವಿಚಾರ ಯುಕ್ತಿಗಳು ಕುಟ್ಟೆ
ತತ್ತ್ವತಂಡುಲ ದೊರೆಗುಮದು ವಿವೇಚಿತತತ್ತ್ವ
ನಿತ್ಯಭೋಜನ ನಮಗೆ—ಮಂಕುತಿಮ್ಮ

ಪುಸ್ತಕದಿ ದೊರೆತರಿವು ಮಸ್ತಕದಿ ತಳೆದ ಮಣಿ
ಚಿತ್ತದೊಳು ಬೆಳೆದರಿವು ತರು ತಳೆದ ಪುಷ್ಪ
ವಸ್ತುಸಾಕ್ಷಾತ್ಕಾರವಂತರೀಕ್ಷಣೆಯಿಂದ
ಶಾಸ್ತ್ರಿತನದಿಂದಲ್ಲ—ಮಂಕುತಿಮ್ಮ

# ನಾನೂ ನನ್ನ ನೆರೆಯವರೂ

ನಾನು ಈ ಊರಿಗೆ ಬಂದು ಎಂಟು ದಿನಗಳಾದರೂ ನನಗೆ ಸರಿಯಾಗಿ ಎಂಟು ಜನರ ಪರಿಚಯವಾಗಿಲ್ಲ. ಆದರೆ ನನ್ನ ಹೆಂಡತಿ ಆಗಲೇ ಒಂಬತ್ತು ಮನೆಯವರನ್ನು ಗುರುತು ಮಾಡಿಕೊಂಡುಬಿಟ್ಟಿದ್ದಾಳೆ. ದಿನವೂ ನನಗೆ ಒಬ್ಬೊಬ್ಬರ ಮನೆಯ ವಿಷಯ ಹೇಳುತ್ತಾಳೆ. ಬಂದ ದಿನವೇ ಪ್ರಾರಂಭ ಮಾಡಿಬಿಟ್ಟಳು—'ನೋಡೀಂದ್ರೆ, ಆ ಪಕ್ಕದ ಮನೆಯವಳಿಗೆ ತಲೆ ನಿಲ್ಲದಷ್ಟು ಜಂಭ' ಅಂತ.

ಆಕೆಯ ಗಂಡ ಕಾಲೇಜು ಲೆಕ್ಚರರು. ಮೊನ್ನೆ ತಾನೇ ನನಗೆ ಯಾರೋ ಆತನ ಪರಿಚಯ ಮಾಡಿಕೊಟ್ಟರು. ಆತ ಬಹಳ ಸರಳಸ್ವಭಾವದವರೆಂದು ಅವರು ಹೇಳಿದರು. ನೋಡಿದರೇನೋ ಹಾಗೇ ಕಾಣುತ್ತಾರೆ ಆತ. ಆತನ ಉಡುಪು ತೀರ ಸರಳ. ಮನೆಯಲ್ಲಿದ್ದಾಗ ಒಂದು ಜುಬ್ಬಾ, ಪಾಯಿಜಾಮು. ಕಾಲೇಜಿಗೆ ಹೊರಟರೆ ಒಂದು ಸಾದಾ ಕೋಟು.

ಆಕೆಗೆ ಬಹಳ ಜಂಭವಂತೆ ಅಂದೆನಲ್ಲಾ, ಅದಕ್ಕೆ ಆತ ಕಾಲೇಜು ಲೆಕ್ಚರರ್ ಅನ್ನುವುದೇ ಕಾರಣವಂತೆ. ಆಕೆಗೆ 'ಹೈಹೀಲ್ಡ್ ಷೂಸ್' ಇಲ್ಲದೆ ಹೊರಗೆ ಹೊರಡುವುದು ತನ್ನ 'ಡಿಗ್ನಿಟಿ'ಗೆ ಕಡಿಮೆಯಂತೆ. ಆಕೆಯ ಬೂಟು ಗಳು, ಕುಪ್ಪಸ ಮತ್ತು ನಡೆಯುವ ಠೀವಿಗಳನ್ನು ನೋಡಿದವರು ಆಕೆಯನ್ನು ಓರ್ವ ಕಾಲೇಜು ವಿದ್ಯಾರ್ಥಿನಿ ಎಂದುಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಆಕೆ 'ಎಲ್.ಎಸ್' ಫೇಲಂತೆ.

ಆಕೆಗೆ ಸಾಯಂಕಾಲದ ಹೊತ್ತು ಗಂಡನೊಡನೆ 'ವಾಕಿಂಗ್' ಹೋಗ ಬೇಕೆಂದು ಬಹಳ ಆಸೆಯಂತೆ. ಆದರೆ ಆತನ ಸ್ನೇಹಿತರು ಆತನನ್ನು ಎಳೆದು ಕೊಂಡು ಹೋಗಿಬಿಡುತ್ತಾರಂತೆ. ಆಕೆಗೆ ಕಡೆಯಪಕ್ಷ ವಾರಕ್ಕೆ ಒಂದು ಸಿನಿಮಾಗಾದರೂ ಹೋಗಬೇಕೆಂದು ಆಸೆಯಂತೆ. ಆದರೆ ಆತ ಸಿನಿಮಾಕ್ಕೆ ಹೋಗದಿರುವುದು ಆಶ್ಚರ್ಯಕ್ಕೂ ದುಃಖಕ್ಕೂ ಕಾರಣವಾಗಿದೆಯಂತೆ. ಹಾಗೂ, ಆಕೆ ಪ್ರತಿ ಭಾನುವಾರ ಮಧ್ಯಾಹ್ನ ಆಚೆ ಬೀದಿಯಲ್ಲಿರುವ ಮಿಡಲ್‌ಸ್ಕೂಲ್ ಮೇಡಂ ಪಾರ್ವತಮ್ಮನವರ ಜೊತೆಯಲ್ಲಿ ಒಂದು 'ಪಿಕ್ಚರ್'ಗಾದರೂ ಹೋಗಿ ಬರುತ್ತಾರಂತೆ.

ನಾನು ನೆನ್ನೆ ಬೆಳಗ್ಗೆ ವರಾಂಡಾದಲ್ಲಿ ಓಡಾಡುತ್ತಿದ್ದೆ. ನಮ್ಮ ಲೆಕ್ಚರರು, (ಯಾರಿಗೋ ಕಾಯುತ್ತಿದ್ದರೂಂತ ಕಾಣುತ್ತೆ) ಅವರ ಮನೆ ವರಾಂಡದಲ್ಲಿ ನಿಂತಿದ್ದರು. ನನ್ನನ್ನು ನೋಡಿ, 'ಬನ್ನೀ ಸಾರ್' ಅಂದರು. ನನಗೆ ಆಚೆ ಪಕ್ಕದ ಮನೆಯವರ ವಿಷಯ ಕೇಳಬೇಕೆಂದು ಕುತೂಹಲ. ಅವರನ್ನು ನಿಧಾನವಾಗಿ ಪ್ರಶ್ನಿಸಿದೆ. ಅವರು ಹೇಳಿದರು:

"ಓ, ಅವರೇ! ಅವರು ತಾಲ್ಲೂಕು ಆಫೀಸಿನಲ್ಲಿ ಗುಮಾಸ್ತೆಯಂತೆ. ಆದರೆ ಆತನನ್ನು ಇಲ್ಲಿಯವರೆಲ್ಲಾ 'ಕವಿಗಳು' ಎಂದೇ ಕರೆಯುವುದು. ಆತನ ರೀತಿಯೇ ವಿಚಿತ್ರ. ಯಾರೊಡನೆಯೂ ಹೆಚ್ಚಿಗೆ ಮಾತಾಡುವುದಿಲ್ಲ. ವರಹಕ್ಕೊಂದು ಮಾತು ಆತನದು. ಬೆಳಗ್ಗೆ ಹೊತ್ತು ಅವರು ಈಚೆ ಬಂದದ್ದು ನಾನು ನೋಡಿಯೇ ಇಲ್ಲ. ಏಳು ಗಂಟೆಗೆ ಮೇಜಿನ ಮುಂದೆ ಕುಳಿತರೆ ಹತ್ತು ಗಂಟೆಯವರೆಗೂ ಕದಲುವುದೇ ಇಲ್ಲ. ಆಮೇಲೆ ಆಫೀಸು. ಸಂಜೆ ಮನೆಗೆ ಬಂದ ಕೂಡಲೇ ಎಲ್ಲರ ಕಣ್ಣೂ ತಪ್ಪಿಸಿ ಹೊರಗೆ ಹೊರಟುಬಿಡುತ್ತಾರೆ. ಆತ ಎಲ್ಲಿಗೆ ಹೋಗುತ್ತಾರೆಂದು ನನಗೂ ಗೊತ್ತಿರಲಿಲ್ಲ. ಮೊನ್ನೆ ನಾನೂ ನನ್ನ ಸ್ನೇಹಿತರೂ ಮಾತಾಡುತ್ತಾ ಊರಾಚೆ ಹೊರಟುಬಿಟ್ಟೆವು. ನಾವು ಎಲ್ಲಿ ಹೋಗುತ್ತಿದ್ದೇವೆಂಬ ಅರಿವೇ ನಮಗಿರಲಿಲ್ಲ. ಅಕಸ್ಮಾತ್ ನಮ್ಮ ಕಣ್ಣಿಗೆ ಈ ವ್ಯಕ್ತಿ ಬಿದ್ದ. ಆತ ಕುಳಿತಿದ್ದ ಜಾಗ ಮಾತ್ರ ಬಹಳ ಸೊಗಸಾಗಿತ್ತು. ಒಂದು ಸಣ್ಣ ಕೊಳ, ಸುತ್ತಲೂ ಮರಗಳು. ಮರಗಳ ಮಧ್ಯೆ ಒಂದು ಬಂಡೆ, ಸ್ವಲ್ಪ ದೂರದಲ್ಲಿ ಒಂದು ಹಳ್ಳಿ ಕಾಣುತ್ತಿತ್ತು. ಆತ ಆ ಬಂಡೆಯ ಮೇಲೆ ಕುಳಿತಿದ್ದ. ನಾನು 'ಭಲೇ, ಕವಿ' ಅಂದುಕೊಂಡೆ . . ."

ಅಷ್ಟು ಹೊತ್ತಿಗೆ ಅವರ ಮಿತ್ರರು ಬಂದರು. ನಾನು 'ನಮಸ್ಕಾರ, ಬರುತ್ತೇನೆ' ಎಂದೆ. ಅವರು ಪ್ರತಿಯಾಗಿ ನಮಸ್ಕಾರ ಮಾಡಿ ಎದ್ದು ನಿಂತರು.

ರಾತ್ರೆ ನನ್ನ ಹೆಂಡತಿಯನ್ನು "ಇದೇನೆ, ಏನೇನೋ ಹೇಳುತ್ತೀಯಾ. ಆದರೂ ಪಕ್ಕದ ಮನೆಯಲ್ಲಿ ಒಬ್ಬ ಕವಿಗಳಿದ್ದಾರೇಂತ ಹೇಳಲೇ ಇಲ್ವಲ್ಲೇ?" ಎಂದು ಆಕ್ಷೇಪಿಸಿದೆ. ಆಗ ಅವಳು ಪ್ರಾರಂಭಿಸಿದಳು: "ಅಯ್ಯೋ, ಮರೆತೇ ಬಿಟ್ಟಿದ್ದೇ ಅಂದ್ರೆ. ಆತನ ಹೆಂಡತೀ ಗೋಳು, ಬೇಡಿ. ಆಕೆ ಆಗೋ ಹೊತ್ತಿಗೆ ಅಷ್ಟೊಂದು ಮಕ್ಕಳನ್ನೂ ಕಟ್ಟಿಕೊಂಡು ಮಾಡುತ್ತಾಳೆ ನೋಡಿ,

ಇನ್ನೊಬ್ಬರಿಂದ ಬೇರೆ ಸಾಧ್ಯವಿಲ್ಲ. ಮಕ್ಕಳೂ ಚಿಕ್ಕವರು. ಅವಕ್ಕೆ ಸ್ನಾನ ಮಾಡಿಸುವುದು, ಸ್ಕೂಲಿಗೆ ಕಳುಹಿಸುವುದರಿಂದ ಮೊದಲುಮಾಡಿ ಎಲ್ಲಾ ಕೆಲಸ ಆಕೇನೆ ಮಾಡಬೇಕು. ಕೊನೆಗೆ ರೇಷನ್ ಡಿಪೋಗೆ ಕೂಡ ಆಕೇನೆ ಹೋಗಬೇಕು. ಇಷ್ಟಾದರೂ, ಏನಾದರೂ ಸ್ವಲ್ಪ ಕಾಫೀನೋ ಅಡಿಗೇನೋ ತಡವಾಗಿಬಿಟ್ಟರೆ ಅವೊತ್ತು ಆಕೆಗೆ ಸಹಸ್ರನಾಮಾವಳಿ ಕಾದಿರುತ್ತೆ. ನನಗೇನೋ ಆ ಪ್ರಾಣೀನ ಕಂಡರೆ ಅಯ್ಯೋ ಅನ್ನಿಸುತ್ತದೆ."

ಇನ್ನೂ ಏನೇನು ಹೇಳುತ್ತಿದ್ದಳೋ, ನನಗೆ ನಿದ್ದೆ ಬರುತ್ತಿತ್ತು. 'ಹನ್ನೊಂದಾಯಿತು, ಮಲಗಿಕೊಳ್ಳೇ' ಅಂದೆ.

ನಮ್ಮ ಮನೆ ಎದುರಿಗೇ ಶೆಟ್ಟರ ಅಂಗಡಿ. ಅಂಗಡಿ ಪಕ್ಕದಲ್ಲಿ ಒಂದು ಓಣೀಲಿ ಹೋದರೆ ಹಿಂದೆಯೇ ಶೆಟ್ಟರ ಮನೆ. ನಾನು ಈ ಊರಿಗೆ ಬಂದಾಗಿನಿಂದ ಶೆಟ್ಟರ ಅಂಗಡಿಯಲ್ಲೇ ಸಾಮಾನು ಕೊಳ್ಳುತ್ತಿದ್ದೇನೆ. ಏಕೆಂದರೆ ನಮ್ಮ ಬೀದಿಯವರೆಲ್ಲಾ ಅಲ್ಲೇ ಸಾಮಾನು ಕೊಳ್ಳುವುದು, ಬೀದಿಯವರಿಗೆಲ್ಲಾ ಶೆಟ್ಟರ ಅಂಗಡಿ ಮೂವತ್ತು ವರ್ಷಗಳಿಂದಲೂ ಸಾಲದ ಅಂಗಡಿ. ನಮ್ಮ ಬೀದಿಯಲ್ಲಿ ಯಾರಿಗೂ ದಿನಸಿಯ ಬೆಲೆ ಗೊತ್ತಿಲ್ಲ. ಶೆಟ್ಟರು ಹಾಕಿದ್ದೇ ಬೆಲೆ, ಬರೆದದ್ದೇ ಲೆಕ್ಕ. ಕಾರಣ ಇಷ್ಟೇ: ಶೆಟ್ಟರ ಅಂಗಡಿಯಲ್ಲಿ ದಿನಸಿಗಳ ಬೆಲೆ, ಉಳಿದ ಅಂಗಡಿಗಳಿಗಿಂತ ಮೂರು ಕಾಸು ಕಡಿಮೆಯೇ. ಏಕೆಂದರೆ ಶೆಟ್ಟರು ಮಾಡುತ್ತಿರುವ ವ್ಯಾಪಾರ ಲಾಭಕ್ಕಾಗಿ ಅಲ್ಲ. ಅವರು ಹಾಗೆ ಲಾಭ ಹೊಂದಬೇಕಾದ್ದೂ ಇಲ್ಲ. ಅವರಿಗೆ ಪಿತ್ರಾರ್ಜಿತ ಸ್ವತ್ತೇ ಸಾಕಷ್ಟು ಇದೆ. ಅವರು ಆಗಾಗ್ಗೆ ನನ್ನ ಮುಂದೆ ಹೇಳುವುದುಂಟು: ನೋಡ್ರಿ, ದುಡ್ಡು ಸಂಪಾದಿಸಿ ನಾನೇನು ಮಾಡಬೇಕಾಗಿದೆ? ಇರುವವರು ಒಬ್ಬ ಮಗಳು, ಒಬ್ಬ ಸಾಕು ಮಗ. ಅವನಿಗೂ ಹದಿನೈದು ವರ್ಷ ಆಯಿತು. ಅವನ ಹೆಸರಿಗೆ ಆಗಲೇ ಒಂದಿಷ್ಟು ಆಸ್ತಿ ಬರೆದುಬಿಟ್ಟಿದ್ದೇನೆ. ಇನ್ನು ಮಗಳೊಬ್ಬಳ ಮದುವೆಮಾಡಿ, ಅವಳು ಚೆನ್ನಾಗಿರುವುದನ್ನು ನೋಡಿಬಿಟ್ಟರೆ ಸಾಕು. ಆಮೇಲೆ ನನಗೇನು? ಎಲ್ಲೋ ರಾಮಾ ಕೃಷ್ಣಾ ಅಂತ ಕಾಲ ಕಳೆಯುವುದು.

ಈ ಶೆಟ್ಟರ 'ಸಾಕುಮಗ'ನ ವಿಷಯದಲ್ಲಿ ನನಗೆ ಸ್ವಲ್ಪ ಕುತೂಹಲವೇ ಆಯಿತು. ಒಂದು ಬಾರಿ ಅವರನ್ನು ಕೇಳಿಯೇಬಿಟ್ಟೆ: "ಶೆಟ್ಟರೇ, ನಿಮ್ಮ ಮನೇಲಿ ಒಬ್ಬ ಹುಡುಗ ಇದಾನಲ್ಲಾ, ಆತನನ್ನು ನೀವು ದತ್ತು ತೆಗೆದುಕೊಂಡಿ

ದ್ದೀರೋ, ಅಥವಾ ಸುಮ್ಮನೆ ನಿಮ್ಮ ಸಂಬಂಧದ ಹುಡುಗನೆಂದು ಸಾಕಿಕೊಂಡಿ ದ್ದೀರೋ?" ಶೆಟ್ಟರು ಕಣ್ಣೀರು ಹಾಕುತ್ತಾ ಹೇಳಿದರು:

"ಹೀಗೆಯೇ ಒಂದು ದಿನ ಮಧ್ಯಾಹ್ನ ಸುಮಾರು ಹನ್ನೊಂದು ಘಂಟೆ. ನಾನು ಊಟ ಮಾಡುತ್ತಲಿದ್ದೆ. ಹೊರಗಡೆ ಯಾರೋ ಬಿದ್ದಂತೆ ಶಬ್ದ ವಾಯಿತು. ಜೊತೆಯಲ್ಲೇ ಜನರ ಗುಜುಗುಜು ಕೇಳಿಬಂತು. ತಕ್ಷಣ ನನ್ನ ಹೆಂಡತಿ—ಅವಳಿನ್ನೂ ಆಗ ಇದ್ದಳು—ಬೀದಿಯ ಬಾಗಿಲಿಗೆ ಓಡಿದಳು. ನಾನೂ ಅವಳ ಹಿಂದೆ ಓಡಿದೆ. ಆ ದೃಶ್ಯ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಒಬ್ಬಾಕೆ ಭೂಮಿಯ ಮೇಲೆ ಬಿದ್ದುಬಿಟ್ಟಿದ್ದಾಳೆ. ಆಕೆಯ ವೇಷದಿಂದ ಆಕೆಯನ್ನು ಭಿಕ್ಷುಕಿ ಎಂದು ಯಾರಾದರೂ ಗುರ್ತಿಸಬಹುದು. ಪಕ್ಕದಲ್ಲಿ ಒಂದು ಮಗುವಿದೆ. ಆಕೆಗೆ ಜ್ಞಾನ ತಪ್ಪಿದೆ. ತಕ್ಷಣ ನನ್ನ ಹೆಂಡತಿ ನೀರು ತಂದು ಆಕೆಯ ತಲೆಗೆ ತಟ್ಟಿದಳು. ಸ್ವಲ್ಪ ಗಾಳಿ ಬೀಸಿದಳು. ಐದಾರು ನಿಮಿಷಗಳಲ್ಲಿ ಆಕೆ ಕಣ್ಣುಬಿಟ್ಟಳು. ಆದರೇನು? ವಿಧಿ ಆಕೆಗೆ ಮಾತಾಡು ವಷ್ಟು ವೇಳೆಯೂ ಕೊಡಲಿಲ್ಲ. 'ತಾಯೀ' ಅನ್ನುವಷ್ಟರಲ್ಲೇ ಆಕೆಯು ದೇವರ ಪಾದವನ್ನು ಸೇರಿದಳು. ನನ್ನ ಹೆಂಡತಿ ಕಣ್ಣುಗಳಲ್ಲಿ ನೀರು ಸುರಿಸುತ್ತಾ ಮಗು ವನ್ನು ಎತ್ತಿಕೊಂಡಳು. ನಾಲ್ಕಾರು ಜನರು ಧನಸಹಾಯ ಮಾಡಿದರು. ಕೆಲವು ಜನರ ಸಹಾಯದಿಂದ ನಾನು ಸಂಜೆಯ ಹೊತ್ತಿಗೆ ಮೃತಶರೀರದ ದಹನ ಕಾರ್ಯವನ್ನು ಮುಗಿಸಿದೆ. ಅಂದಿನಿಂದ ಆ ಮಗು ನಮ್ಮದಾಯಿತು. ನನ್ನ ಹೆಂಡತಿ ಆ ಮಗುವನ್ನು ತನ್ನ ಮಗುವೆಂದೇ ಭಾವಿಸಿ ದೊಡ್ಡದು ಮಾಡಿದಳು. ಆದರೆ ದೈವೇಚ್ಛೆ: ನಾಲ್ಕು ವರ್ಷದ ಕೆಳಗೆ, ಒಂದು ಶ್ರಾವಣ ಶುಕ್ರವಾರ ಸಂಜೆ ನನ್ನ ಹೆಂಡತಿ ದೇವಿಯ ಪಾದವನ್ನು ಹೊಂದಿದಳು. ಅವೊತ್ತಿ ನಿಂದ ಈ ಇಬ್ಬರ ಸಂರಕ್ಷಣೆ ನನ್ನ ಪಾಲಿಗೆ ಬಿದ್ದಿದೆ."

ಅವರ ಕಂಠ ಗದ್ಗದವಾಗಿತ್ತು. ಅವರ ಮನಸ್ಸು ಸ್ವಲ್ಪ ಸಮಾಧಾನಕ್ಕೆ ಬರುವವರೆಗೂ ಕುಳಿತಿದ್ದು ಮನೆಗೆ ಬಂದೆ.

ರಾತ್ರಿ ನನ್ನ ಹೆಂಡತಿಯ ಮುಂದೆ ಇದನ್ನೆಲ್ಲಾ ಹೇಳಿದೆ. ಅವಳ ಕಣ್ಣುಗಳಿಂದ ಎರಡು ಹನಿ ಜಾರಿ ನನ್ನ ಕೈಮೇಲೆ ಬಿತ್ತು.

**—ಬಿ. ಕೆ. ರಾಮಚಂದ್ರರಾವ್**

# 'ಇತ್ಯಾದಿ'ಯ ಆತ್ಮಕಥೆ

"ಶಬ್ದ ಸಮಾಜ"ದಲ್ಲಿ ನನ್ನ ಗೌರವವು ಕಡಿಮೆಯಾದುದೇನೂ ಅಲ್ಲ. ನಾನೊಬ್ಬ ಆದರಣೀಯ ವ್ಯಕ್ತಿ. ಭಾಷಣಕಾರರೂ, ಬರಹಗಾರರೂ ಬಲಾತ್ಕಾರವಾಗಿ ಎಳೆದುಕೊಂಡು ಹೋಗಿ ಸತ್ಕರಿಸುವುದು ನನ್ನನ್ನೇ. ದಿನದಿನವೂ ಲೆಕ್ಕವಿಲ್ಲದಷ್ಟು ಜನರು ಆಮಂತ್ರಿಸುವುದು ನನ್ನನ್ನೇ. ನನಗೆ ಕೆಲಸ ಎಷ್ಟಿದೆಯೆಂದರೆ ನಿದ್ರಿಸಲು ಕೂಡ ಹೊತ್ತಿಲ್ಲ. ನಾನು ಎಲ್ಲಿಗಾದರೂ ಹೋಗಬೇಕಾದರೆ ನನ್ನನ್ನು ಕರೆಯಲೇಬೇಕೆಂಬುದೂ ಇಲ್ಲ. ಕರೆಯದೆಯೆ ಹೋದರೂ ನಾನು ಎಲ್ಲೆಲ್ಲೂ ಸನ್ಮಾನಿತನೆ. ಒಟ್ಟಿನಲ್ಲಿ, '.ಇತ್ಯಾದಿ' ಎಂದು ಪ್ರಖ್ಯಾತನಾದ ನಾನು "ಶಬ್ದ ಸಮಾಜ"ದಲ್ಲಿ ಇಲ್ಲದೆ ಹೋಗಿದ್ದರೆ, ಈಗಿನ ಲೇಖಕರ ಮತ್ತು ಭಾಷಣಕಾರರ ದುಃಸ್ಥಿತಿಯು ವರ್ಣಿಸಲು ಅಸಾಧ್ಯವಾಗುತ್ತಿತ್ತು ಎಂದು ಹೇಳಿದರೆ ಅತ್ಯುಕ್ತಿಯೇನಿಲ್ಲ. ಹೇಳಿಕೊಳ್ಳಲು ಮನಸ್ಸು ಹಿಂಜರಿಯುತ್ತದೆ: ನನ್ನಂತಹ ಸನ್ಮಾನಿತ ವ್ಯಕ್ತಿಯ ಜೀವನಚರಿತ್ರೆಯನ್ನು ಇದುವರೆಗೂ ಯಾರೂ ಬರೆಯಲೇಬೇಡವೆ? ಯಾರೋ ಎಲ್ಲೋ ಒಂದಿಷ್ಟು ಸೇವೆ ಸಲ್ಲಿಸಿದರೆ ಸಾಕು, ಅವರನ್ನು ಬಾಯಿತುಂಬ ಹೊಗಳಿ, ಹೊರಲಾಗದಷ್ಟು ದಪ್ಪ ಪುಸ್ತಕಗಳನ್ನು ಬರೆಯಲು ಲೇಖಕರೆನಿಸಿಕೊಂಡವರೆಲ್ಲ ಸಿದ್ಧ. ಆದರೆ ಎಲೆ ಮರೆಯ ಮಾವಿನಕಾಯಿ ಹಾಗೆ ಸೇವೆ ಮಾಡುವ ನನ್ನನ್ನು ಹೊಗಳುವುದಕ್ಕೆ ಒಬ್ಬರೂ ಬೇಡವೆ? ಬರಹಗಾರರು ನನ್ನನ್ನು ಹೊಗಳುವುದಕ್ಕೆ ಇಷ್ಟಪಡದಿರುವುದಕ್ಕೆ ಕಾರಣ, ನಾನೀಗ ರಟ್ಟುಮಾಡಲಿರುವ ಒಂದು ಗುಟ್ಟು.

ನನ್ನನ್ನು ಹೊಗಳಬಲ್ಲವರ, ಆದರೆ ಹೊಗಳದಿರುವವರ ಪ್ರತಿಭೆಯ ರಕ್ಷಕ, ಖ್ಯಾತಿಯ ಪೋಷಕ ನಾನೆ. ಹೀಗಿರುವಾಗ ತಮ್ಮ ಗುಟ್ಟನ್ನು ರಟ್ಟು ಮಾಡಲು ಅವರು ಹೇಗೆ ಸಿದ್ಧರಾದಾರು? ಅದಿರಲಿ, ಈಗ, ಇಡೀ ಪ್ರಪಂಚದಲ್ಲಿ ಸಂಚರಿಸಿ ಹೊಗಳಿಕೆಯನ್ನು ಕೇಳದೆ ನಿರಾಶನಾಗಿ ಬಂದಿರುವ ನಾನು, ನನ್ನ ಗುಣಗಾನ ಮಾಡಿಕೊಂಡು ನನ್ನ ಕೀರ್ತಿಲತೆಯು ಹತ್ತಾರುದಿಕ್ಕಿಗೆ ಹಬ್ಬುವಂತೆ ಮಾಡಬೇಕೆಂದು ನಿರ್ಧರಿಸಿದ್ದೇನೆ. ನನ್ನ ಕಾಲಿಗೆ ನಾನೆ ನಮಸ್ಕಾರ ಮಾಡಿಕೊಳ್ಳಲು ನಿಶ್ಚಯಿಸಿದ್ದೇನೆ. ನಿಮಗಿಷ್ಟವಿದ್ದರೆ ನನ್ನನ್ನು ಕ್ಷಮಿಸಿ, ಇಲ್ಲದಿದ್ದರೆ ಬಿಡಿ.

ಗರ್ವದ ಮಾತು ಆಡಿದರೆ ಹೇಗೆ? ನಾನು ಹುಟ್ಟಿದ ದಿನವೇ ನನಗೆ ನೆನಪಿಲ್ಲ. ಇಷ್ಟು ಮಾತ್ರ ಜ್ಞಾಪಕವಿದೆ—“ಶಬ್ದ”ರಾಜ್ಯದಲ್ಲಿ ಬಹಳ ದೊಡ್ಡ ಕ್ಷಾಮ ಬಂದಾಗ ನಾನು ಹುಟ್ಟಿದೆ ಅಂತ. ನನ್ನ ತಾಯಿಯ ಹೆಸರು “ಇತಿ”; ತಂದೆಯ ಹೆಸರು “ಆದಿ”. ನನ್ನ ತಾಯಿಯ ತೌರೂರು ಅವಿಕೃತ ಅವ್ಯಯ. ಆಕೆಯದು ಪ್ರಸಿದ್ಧ ಮನೆತನ. ಫಣೀಂದ್ರನ ಕೃಪೆಯಿಂದ “ಅವ್ಯಯ” ವಂಶದವರು, ಏಕಚ್ಛತ್ರಾಧಿಪತಿಯಾಗಲು ಯತ್ನಿಸಿದ “ಪ್ರತ್ಯಯ” ಮಹಾರಾಜನ ಅಧೀನರಾಗದೆ ಬಾಳಿದರು ಮತ್ತು ಸ್ವತಂತ್ರರಾಗಿಯೆ ಉಳಿದರು.

ನನ್ನ ಬಾಲ್ಯದಲ್ಲಿ ತಂದೆತಾಯಿಗಳು ಜ್ಯೋತಿಷ್ಕನನ್ನು ಕರೆದು ನನ್ನ ಅದೃಷ್ಟದ ವಿಷಯವಾಗಿ ಕೇಳಿದರಂತೆ. ಅವನು ಹೇಳಿದನಂತೆ—“ಈ ಹುಡುಗನು ವಿಖ್ಯಾತನೂ ಪರೋಪಕಾರಿಯೂ ಆಗುವನು. ಇಡೀ ವಿಶ್ವಕ್ಕೆ ಪ್ರೀತಿಪಾತ್ರನಾಗುವನು. ಆದರೆ ಅವಿವಾಹಿತನಾಗಿಯೆ ಉಳಿಯುವನು.” ನನ್ನ ಮಾತಾಪಿತರು ಚಿಂತೆಗೊಳಗಾದರು, ಮಗನು ಒಬ್ಬೊಂಟಿಗನಾಗಿ ಮಕ್ಕಳಿಲ್ಲದೆ ಬಾಳಬೇಕಾಗುವುದಲ್ಲಾ ಎಂದು. ಚಿಂತಿಸಿ ಫಲವೇನು? ಮಗನ ಹಣೆಯ ಬರಹವೇ ಅಷ್ಟು ಎಂದು ತೃಪ್ತಿಪಟ್ಟುಕೊಂಡರು. ತಮ್ಮಿಬ್ಬರ ಹೆಸರುಗಳು ಚಿರಸ್ಮರಣೀಯವಾಗುವಂತೆ ನನಗೆ “ಇತ್ಯಾದಿ” ಎಂದು ನಾಮಕರಣ ಮಾಡಿದರು.

ಪೂರ್ವಕಾಲದಲ್ಲಿ ನನ್ನ ಖ್ಯಾತಿಯು ಈಗಿನಷ್ಟಿರಲಿಲ್ಲ. ನನಗೆ ಪರಿಚಿತರಾದವರು ಅನೇಕರಿರಲಿಲ್ಲ. ಜ್ಞಾನಿಗಳ ಬುದ್ಧಿಭಾಂಡಾರದಲ್ಲಿ ಈಗಿನಷ್ಟು ದರಿದ್ರತೆಯಿರಲಿಲ್ಲ. “ಶಬ್ದ” ದಾರಿದ್ರ್ಯವು ಹೆಚ್ಚಿದಂತೆಲ್ಲ ನನ್ನ ಖ್ಯಾತಿಯೂ ಹೆಚ್ಚಿತು. ಈಗಿನ ಕಾಲದ ಮಾತು ಬಿಡಿ. ನಾನೇ ಸರ್ವಸ್ವ. ನನ್ನ ಸರಿಸಮಾನರು ಯಾರೂ ಇಲ್ಲ. ಆದರ ಹೆಚ್ಚಿದಂತೆಲ್ಲ ನನ್ನ ಹೆಸರುಗಳ ಸಂಖ್ಯೆಯೂ ಹೆಚ್ಚಿದೆ. ಒಂದೊಂದು ಭಾಷೆಯವರು ಒಂದೊಂದು ಹೆಸರಿನಿಂದ ನನ್ನನ್ನು ಕೂಗುತ್ತಾರೆ. “ಇತ್ಯಾದಿ”ಯೂ ನಾನೆ, “ಎಟ್‌ಸೆಟರ”ನೂ ನಾನೆ. ಅಂದರೆ ನಾನೊಬ್ಬ ಬಹುನಾಮಧಾರಿ. ಹಾಗೆಯೇ ಬಹುವೇಷಧಾರಿಯೂ ಅಹುದು. ಅಲ್ಲದೆ ನಾನೊಬ್ಬ ಸರ್ವವ್ಯಾಪಕನು ಕೂಡ ಆಗಿದ್ದೇನೆ. ಒಂದೇ ಕ್ಷಣದಲ್ಲಿ ಇಂಗ್ಲೆಂಡಿನ “ಪಾರ್ಲಿಮೆಂಟ್”ನಲ್ಲೂ ಭಾರತದ ವಿದ್ವನ್ಮಂಡಲಿಯ ಸಭೆಯಲ್ಲೂ ವಿರಾಜಮಾನನಾಗಿರಬಲ್ಲೆ. ಎಲ್ಲೇ ಇರಲಿ, ಪರೋಪಕಾರವೆ ನನ್ನ ಕಾರ್ಯ.

ಇದೊಂದು ನನ್ನ ದೊಡ್ಡ ಗುಣ. ಬಡವನಾಗಲಿ, ಬಲ್ಲಿದನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ, ಯಾರಿಗೆ ಬೇಕಾದರೂ ಸಹಾಯ ಮಾಡಲು ಸಿದ್ಧನಾಗಿದ್ದೇನೆ. ಸಂಕೋಚವಾಗಲಿ, ಮಾನಹಾನಿಯಾಗುವುದೆಂಬ ಭಯವಾಗಲಿ ನನಗಿಲ್ಲ. ನನ್ನ ಇತರ ಬಂಧುಗಳಿದ್ದಾರಲ್ಲ "ಶಬ್ದ"ಗಳು, ಅವರು ನನ್ನ ಹಾಗೆ ಅಲ್ಲವೇ ಅಲ್ಲ. ಅವರ ಗರ್ವಕ್ಕೆ, ಹೆಚ್ಚುಹೆಚ್ಚಾಗಿ ಆದರವನ್ನು ಅಪೇಕ್ಷಿಸುವ ದುರಾಸೆಗೆ ಮಿತಿಯೇ ಇಲ್ಲ. ಅವರಿಗೆ ಆಗಬೇಕಾದ ಮರ್ಯಾದೆಗಳಲ್ಲಿ ಲವಲೇಶ ಕಡಿಮೆಯಾದರೆ ಸರಿ, ಅಪರಿಮಿತ ಕೋಪ. ನಾನು ಅವರಂತೆ ಅಲ್ಲ. "ಶಬ್ದ" ಸಾಮ್ರಾಜ್ಯದಲ್ಲಿ ಲೋಕಪ್ರಿಯರಾದವರಲ್ಲಿ ನಾನು ಅಗ್ರಗಣ್ಯ.

ಪರೋಪಕಾರವೇ ನನ್ನ ಜೀವನದ ಧ್ಯೇಯ. ಸೇವೆಗೈಯದೆ ನನಗೆ ಸುಖವಿಲ್ಲ. ನನ್ನ ಸೇವೆಯನ್ನು ಇಡೀ ವಿಶ್ವವೇ ಅಪೇಕ್ಷಿಸುತ್ತದೆ. ನಿರ್ಧನನು ಸಿರಿವಂತರ ಬಟ್ಟೆಗಳನ್ನು ಬಾಡಿಗೆಗೆ ತೆಗೆದುಕೊಂಡು ಧರಿಸಿದ ಮಾತ್ರದಿಂದಲೇ ಹೇಗೆ ಗೌರವಿಸಲ್ಪಡುವನೋ, ಹಾಗೆಯೆ ನನ್ನ ಸಹಾಯವೊಂದಿದ್ದರೆ ತೊದಲುವ ಉಪನ್ಯಾಸಕನ ಮತ್ತು ಲೇಖನಿ ಓಡದೆ ತಲೆ ಕೆರೆದುಕೊಳ್ಳುವ ಬರಹಗಾರನ "ಶಬ್ದ" ದಾರಿದ್ರ್ಯವು ದೂರವಾಗುತ್ತದೆ.

ಮಹಾಶಯರೊಬ್ಬರು ಭಾಷಣ ಮಾಡಲು ಎದ್ದು ನಿಂತಿದ್ದಾರೆ. ಸಕಲ ಶಾಸ್ತ್ರಗಳಲ್ಲೂ ಪಾಂಡಿತ್ಯವನ್ನು ಪ್ರದರ್ಶಿಸಬೇಕೆಂದು ಅವರಿಗೆ ಆಸೆ. ಆದರೆ ಶಾಸ್ತ್ರಗಳನ್ನು ಓದಿಲ್ಲ. ಆದಾದರೂ ಹೋಗಲಿ, ಶಾಸ್ತ್ರಗಳನ್ನು ತಿರುವಿಹಾಕುವ ಸೌಭಾಗ್ಯವು ಕೂಡ ಅವರಿಗೆ ದೊರೆತಿಲ್ಲ. ಪಾಪ! ಏನು ಮಾತನಾಡುವುದು? ಅಲ್ಲಿ ಇಲ್ಲಿ ಕೇಳಿ ಕಲಿತ ಶಾಸ್ತ್ರಗಳ, ಶಾಸ್ತ್ರಜ್ಞರ ಹೆಸರೇನೋ ಗೊತ್ತಿದೆ. ಆದರೆ ಗೊತ್ತಿರುವುದನ್ನು ಹೇಗೆ ಉಪಯೋಗಿಸುವುದು? ಚಿಂತಾಸಮುದ್ರದಲ್ಲಿ ಈಜಾಡಿದ್ದಾಯಿತು. ಕೆಮ್ಮುತ್ತ ಸೀನುತ್ತ ಭೂವ್ಯಾಕಾಶಗಳನ್ನು ನಿರೀಕ್ಷಿಸಿದ್ದಾಯಿತು. ನಯನಗಳಲ್ಲಿ ಅಶ್ರುಬಿಂದುಗಳು ಗೋಚರವಾದುವು. ಕೆಲವು ಕ್ಷಣಗಳ ಹಿಂದೆ ಉತ್ಸಾಹಸೂರ್ಯನ ಕಿರಣಗಳಿಂದ ಅರಳಿದ್ದ ಮುಖಾರವಿಂದವು ಚಿಂತೆಯ ಬಿರುಗಾಳಿಗೆ ಸಿಕ್ಕಿ ಬಾಡಿಹೋಯಿತು. ಅವರ ದುಃಸ್ಥಿತಿಯನ್ನು ನಾನು ನೋಡಲಾರದೆ ಹೋದೆ. ದಯೆಯು ನನ್ನ ಎದೆಯಲ್ಲಿ ಉಕ್ಕಿಬಂತು. ಹತ್ತಿರ ಹೋಗಿ ಅವರ ಕಿವಿಗಳಲ್ಲಿ ಪಿಸುಗುಟ್ಟಿದೆ—"ಮಹಾಶಯರೇ, ಹೆದರಬೇಡಿ. ನಿಮ್ಮ ಸೇವಕ ನಾನು ಸಿದ್ಧನಾಗಿದ್ದೇನೆ. ತೋರಿದ ಹಾಗೆ ಪ್ರಾರಂಭಿಸಿ,

ಮಿಕ್ಕದ್ದನ್ನು ನನಗೆ ಬಿಡಿ.” ಮಹಾಶಯರಿಗೆ ಹೋದ ಜೀವ ಪುನಃ ಬಂದಂತಾಯಿತು. ಭಾಷಣವನ್ನು ಹೀಗೆ ಪ್ರಾರಂಭಿಸಿದರು—“ಮಹಾಶಯರೇ, ಮನು ಇತ್ಯಾದಿ ಧರ್ಮಶಾಸ್ತ್ರಜ್ಞರು, ವ್ಯಾಸ ಇತ್ಯಾದಿ ಪೌರಾಣಿಕರು, ಕಪಿಲ ಇತ್ಯಾದಿ ದಾರ್ಶನಿಕರು, ಕರ್ಮವಾದ ಪುನರ್ಜನ್ಮವಾದ ಇತ್ಯಾದಿ ದಾರ್ಶನಿಕ ತತ್ತ್ವಗಳಿಂದ ಭಾರತದ ತತ್ವಭಂಡಾರವನ್ನು ತುಂಬಿರುವುದನ್ನು ಮ್ಯಾಕ್ಸ್‌ಮುಲ್ಲರ್ ಇತ್ಯಾದಿ ಪಾಶ್ಚಾತ್ಯ ಪಂಡಿತರು ನೋಡಿ ಆಶ್ಚರ್ಯಚಕಿತರಾಗಿದ್ದಾರೆ. ಇತ್ಯಾದಿ ಇತ್ಯಾದಿ.”

ಶಾಸ್ತ್ರಜ್ಞರ ಪೈಕಿ ಕೇವಲ ಮನುವಿನ, ಪೌರಾಣಿಕರ ಪೈಕಿ ಕೇವಲ ವ್ಯಾಸನ, ದಾರ್ಶನಿಕರ ಪೈಕಿ ಕೇವಲ ಕಪಿಲನ ಹೆಸರು ಮಾತ್ರವೇ ಮಾನ್ಯ ಭಾಷಣಕಾರರಿಗೆ ಗೊತ್ತಿದ್ದದ್ದು ಎಂದೂ, ಕರ್ಮವಾದ ಪುನರ್ಜನ್ಮವಾದ ಎಂಬ ಹೆಸರುಗಳನ್ನು ಮಾತ್ರವೇ ಅವರು ಕೇಳಿದ್ದದ್ದು ಎಂದೂ ಹೇಳಬೇಕಾದ ಅಗತ್ಯವೇನಿದೆ? ಆದರೆ ಗಮನಿಸಿ, ಭಾಷಣಕಾರನ ಹಳೆಯ ಚಿಂದಿಯನ್ನು ಹೊಸ ಕಿಂಕಾಪಿನಿಂದ ಹೇಗೆ ಮುಚ್ಚಿದೆ ಎಂಬುದನ್ನು.

ಮತ್ತೂ ಕೇಳಿ. ಸಮಾಲೋಚಕನೊಬ್ಬನಿಗೂ ಮತ್ತೊಬ್ಬ ಲೇಖಕನಿಗೂ ಮನಸ್ತಾಪವಿತ್ತು. ಒಂದು ಬಾರಿ ಆ ಗ್ರಂಥಕರ್ತನ ಒಂದು ಪುಸ್ತಕ ಸಮಾಲೋಚಕನ ಕೈಗೆ ಬಂತು. ಆತನ ಸಂತೋಷಕ್ಕೆ ಪಾರವೇ ಇಲ್ಲ. ಪುಸ್ತಕವನ್ನು ಸಾವಧಾನವಾಗಿ ಓದಿದುದಾಯಿತು. ವಿಶೇಷವಾದ ದೋಷವು ಎಲ್ಲೂ ಸಿಕ್ಕಲಿಲ್ಲ. ಮತ್ತೊಮ್ಮೆ ಶ್ರಮ ತೆಗೆದುಕೊಂಡು ಹುಡುಕಿದ ಮೇಲೆ ಮೂರು ನಾಲ್ಕು ಮುದ್ರಣದ ದೋಷಗಳು ಸಿಕ್ಕಿದುವು. ಆದರೆ ಅವು ಕಟುವಾದ ಟೀಕೆಗೆ ಯೋಗ್ಯವಾದುವಲ್ಲ. ಖತಿಗೊಂಡ ಸಮಾಲೋಚಕನು ನನ್ನ ಸಹಾಯವನ್ನು ಬೇಡಿದನು. ನಾನು ಸಹಾಯವನ್ನು ನೀಡಿದುದೆ ತಡ, ಟೀಕೆಯು ಸಿದ್ಧವಾಯಿತು— “ಪುಸ್ತಕದ ದೋಷಗಳನ್ನೆಲ್ಲ ಓದುಗರಿಗೆ ಪ್ರಕಟಿಸಿ, ಗ್ರಂಥಕಾರನ ಅಯೋಗ್ಯತೆಯ ಪರಿಚಯವನ್ನು ಮಾಡಿಕೊಟ್ಟು, ನಮ್ಮ ಕಾಗದವನ್ನು ವೃಥಾ ವೆಚ್ಚಮಾಡುವ ಮತ್ತು ಪಾಠಕರ ಕಾಲಹರಣ ಮಾಡುವ ಇಚ್ಛೆಯು ನಮಗಿಲ್ಲ. ಒಂದೆರಡು ದೋಷಗಳನ್ನು ಮಾತ್ರ ತೋರಿಸಿ ಸುಮ್ಮನಾಗುವೆವು. ಉದಾಹರಣೆಗೆ . . . ಇತ್ಯಾದಿ ಇತ್ಯಾದಿ.”

ನೋಡಿದಿರಾ ನನ್ನ ಸಹಾಯದ ಫಲವನ್ನು? ನನ್ನ ಸಹಾಯವಿಲ್ಲದೆ

ಹೋಗಿದ್ದರೆ ಟೀಕಿಸಲು ಸಿಕ್ಕಿದ ಅವಕಾಶವನ್ನು ಸಮಾಲೋಚಕನು ವೃಥಾ ಕಳೆದುಕೊಳ್ಳಬೇಕಾಗುತ್ತಿತ್ತು. ಇದೇನೋ ಕಟುವಾದ ಟೀಕೆಯ ಮಾತಾಯಿತು. ಉಪಯೋಗವಿಲ್ಲದ ಪುಸ್ತಕವನ್ನು ಹೊಗಳಬೇಕಾದರೂ ಸಮಾಲೋಚಕರ ಸಹಾಯಕ್ಕೆ ನಾನೆ.

ನನ್ನದು ಕೊನೆಯಿಲ್ಲದ ಕಥೆ. ನಾನು ಮೂರ್ಖನನ್ನು ಪಂಡಿತನನ್ನಾಗಿ ಮಾಡಿದ್ದೇನೆ. ಉಪಾಯ ಹೊಳೆಯದವರಿಗೆ ಉಪಾಯವನ್ನು ಸೂಚಿಸಿದ್ದೇನೆ. ಲೇಖಕನ ಲೇಖನಿಯು ಮುಂದುವರಿಯದೆ ನಿಂತಾಗ ಅದನ್ನು ಮುಂದುವರಿಸಿದ್ದೇನೆ. ಕವಿಗೆ ಉಪಮಾನವನ್ನು ಒದಗಿಸಿದ್ದೇನೆ. ಒಟ್ಟಿನಮೇಲೆ, ಅಪೂರ್ಣವಾಗಿ ನಿಲ್ಲುವ ಕೆಲಸಗಳನ್ನೆಲ್ಲ ಪೂರ್ಣಮಾಡಬಲ್ಲ ಶಕ್ತಿ ನನಗಿದೆ. ಇಷ್ಟು ಸಾಲದೆ, ನನ್ನ ಮಹಿಮೆಯನ್ನು ಇಡೀ ಪ್ರಪಂಚದಲ್ಲಿ ಸಾರುವುದಕ್ಕೆ?

—**ಕುಂಚಾಲ ಭುಜಂಗಸ್ವಾಮಿ.**

[ಆಧಾರ: ಯಶೋದಾನಂದನ ಅಖೌರಿಯವರ "ಇತ್ಯಾದಿ ಕೀ ಆತ್ಮಕಹಾನಿ]

---

## ಜಗದ ಗುಡಿಯೊಳಿಗ

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನದುರ್ಬಲರಿಂಗೆ
ಎಲ್ಲರೊಳಗೊಂದಾಗು—ಮಂಕುತಿಮ್ಮ

ಏನನಾನುಂ ಮಾಡು ಕೈಗೆ ದೊರೆತುಜ್ಜುಗವ
ನಾನೇನು ಹುಲುಕಡ್ಡಿಯೆಂಬ ನುಡಿ ಬೇಡ
ಹೀನವಾವುದುಮಿಲ್ಲ ಜಗದ ಗುಡಿಯೊಳಿಗದಿ
ತಾಣ ನಿನಗಿಹುದಲ್ಲಿ—ಮಂಕುತಿಮ್ಮ

# ಮಗು ಅತ್ತರೆ ಸ್ವರ್ಗ!

'ಮಗು ನಕ್ಕರೆ ಸ್ವರ್ಗ'—ಎಂದರೆ ನಂಬಬಹುದು. ಅದು ಬಿಟ್ಟು, ಮಗು ಅತ್ತರೆ ಸ್ವರ್ಗವೇ? ಮಗು ಅಂದರೇನು? ಮಗುವಿನ ಅಳು ಅಂದರೆ ಹೇಗಿರುತ್ತದೆ? ಮಗುವಿನ ಅಳುವಿಗೂ ಸ್ವರ್ಗಕ್ಕೂ ಎಲ್ಲಿಯ ಸಂಬಂಧ? ಹೀಗೆ ನೀವು ನನ್ನನ್ನು ಪ್ರಶ್ನೆಮಾಡಬಹುದು. ಮಗುವಿನಂತೆ ಮೋಹಕವಾದ ವಸ್ತು ಜಗತ್ತಿನಲ್ಲೆಲ್ಲೂ ಇಲ್ಲ ಎನ್ನುವುದು ನನಗೆ ಗೊತ್ತಿದೆ, ಮಗುವಿನ ಅಳುಗೋಗರೆತ ಕೇಳಿದರೆ ಎಷ್ಟು ಕರೆಕರೆಯಾಗುತ್ತದೆ ಎನ್ನುವುದೂ ಗೊತ್ತು. ಆದರೆ, ಮಗು ಅತ್ತರೆ ಅದು ಎಂತಹ ಸುಖ ಎನ್ನುವುದು ನಿಮಗೆ ಗೊತ್ತಿಲ್ಲ!

ನನಗೇನೋ ಮಗು ಸದಾ ಅಳುತ್ತಿರಬೇಕೆಂದೇ ಆಸೆ. ನನಗೆ ಆಫೀಸ್ ಸಮಯ ಹತ್ತಿರವಾಗುತ್ತಿದ್ದರೂ ಮರೆತು ಅಲ್ಲೇ ನಿಂತುಬಿಡುತ್ತೇನೆ. "ಅಲ್ರೀ, ಪಕ್ಕದಲ್ಲೇ ನಿಂತಿದೀರಿ, ಸ್ವಲ್ಪ ಸಮಾಧಾನ ಮಾಡಿದರೆ ಆಗೋದಿಲ್ವೇ?" ಎಂದು ನನ್ನಾಕೆ ಕೇಳುತ್ತಾಳೆ. ಅವಳಿಗೇನು ಗೊತ್ತು, ನನ್ನ ಬಯಕೆ ಏನು ಎಂದು. ನನ್ನ ಮಗುವಿಗೆ ಅದು ಚೆನ್ನಾಗಿ ಗೊತ್ತಿರಬೇಕು. ಅದಕ್ಕೋಸ್ಕರವೇ ಎಂದು ಕಾಣುತ್ತದೆ, ಎಷ್ಟು ಸಮಾಧಾನ ಮಾಡಿದರೂ ಅದು ಕೇಳೋಲ್ಲ. ನಾನು ಹೇಳುವುದೂ ಅದೇ, ಮಕ್ಕಳು ಎಷ್ಟು ಸಮಾಧಾನ ಮಾಡಿದರೂ ಅಳು ನಿಲ್ಲಿಸಬಾರದು ಅಂತ!

ಮಗು ಅಳಲಿಕ್ಕೆ ಪ್ರಾರಂಭವಾಯಿತು ಎಂದರೆ ನನಗೆ ನಾಟಕದ ಗಂಟೆ ಹೊಡೆದ ಹಾಗೆ. ಕಿವಿಗೆ ಸ್ವಲ್ಪ ಬೇಜಾರಾಗಬಹುದು; ಆದರೆ ಕಣ್ಣಿಗೆ ಹಬ್ಬ. ಏನು ಓದುತ್ತಿದ್ದರೂ ಕೂಡಲೆ ಅದನ್ನು ಬಿಟ್ಟು, ಮಗು ಇರುವ ಕೋಣೆಗೆ ಬಂದುಬಿಡುತ್ತೇನೆ. ಹಾಗೆಯೇ ಎರಡು ನಿಮಿಷ ಸುಮ್ಮನಿದ್ದರೆ, ನಾಟಕದ ಪರದೆ ತೆಗೆದ ಹಾಗೆ ನನಗೆ ಭಾಸವಾಗುತ್ತದೆ. ನನ್ನಾಕೆ ಒಳಗೆ ಅಡಿಗೆಮನೆ ಯಲ್ಲಿದ್ದವಳು ಓಡಿ ಬಂದುಬಿಡುತ್ತಾಳೆ. "ಥೂ, ಒಂದು ಕೆಲಸ ಮಾಡಲಿಕ್ಕೂ ಬಿಡೋದಿಲ್ಲಪ್ಪ ಇದು!" ಎಂದು ಕೂಗುತ್ತಲೇ ಬರುತ್ತಾಳೆ. ಮತ್ತೆ ಮಗು ಅಳುವುದನ್ನು ನೋಡಿ ಕನಿಕರ ಹುಟ್ಟುತ್ತದೆ. ಎತ್ತಿಕೊಳ್ಳುತ್ತಾಳೆ. ಆದರೂ ಅದು ಕೇಳುವುದಿಲ್ಲ. "ಬೇಡಪ್ಪ, ರಾಜ. ಬೇಡ ಕಣೋ. ಅಳಬೇಡೋ. ಇಲ್ನೋಡಿಲ್ಲಿ. ಇವನು ಕೂಡ ಅಳೋದಿಲ್ಲವಲ್ಲೋ"—ಎಂದು ಪಕ್ಕದಲ್ಲಿದ್ದ

ಗೊಂಬೆಯನ್ನು ಮಗುವಿನ ಕೈಯಲ್ಲಿ ಕೊಡುತ್ತಾಳೆ. ಅಲ್ಲಿಗೂ ಉಹೂ. ನನ್ನ ಸಿಗರೇಟ್ ಟಿನ್ನಿನ ಮುಚ್ಚಳ ತೆಗೆದು ಗಿರಿಗಿರಿ ತಿರುಗಿಸುತ್ತಾಳೆ: "ಅಲ್ನೋಡೊ—ಅಲ್ನೋಡೊ—ಗಿರಿ ಗಿರಿ ಗಿರಿ . . . " ಊಹೂ. ಆ ಮಗುವನ್ನ ಸಮಾಧಾನ ಮಾಡಲು ಹೋಗಿ ಅವಳ ತಲೆ 'ಗಿರಿ ಗಿರಿ' ತಿರುಗಿದರೂ ಅದು ಬೇರೆ ಅಳು ನಿಲ್ಲಿಸುವುದಿಲ್ಲ. ಅವನನ್ನು ಹಾಗೇ ದೇವರ ಕೋಣೆಗೆ ಕರೆದೊಯ್ಯುತ್ತಾಳೆ. ನಾನೂ ಏನೋ ಹುಡುಕುವವನ ಹಾಗೆ ಅವಳ ಹಿಂದೆಯೆ ಹೋಗುತ್ತೇನೆ. "ನೋಡೋ, ರಾಮದೇವರು ನೋಡೋ. ಅತ್ತರೆ ದೇವರಿಗೆ ಸಿಟ್ಟು ಬರುತ್ತೆ ಗೊತ್ತೆ?" ಅದೂ ಆಗಲಿಲ್ಲ. ಎಲೆಕ್ಟ್ರಿಕ್ ದೀಪ ಹಾಕುತ್ತಾಳೆ, ತೆಗೆಯುತ್ತಾಳೆ. "ಅಲ್ನೋಡೊ ದೀಪ—ಎತ್ಲಾಗೆ ಹೋಯ್ತು?—ನೋಡು ಮತ್ತೆ ಬಂತು, ಈಗ ನೋಡು ಮತ್ತೆ ಹೋಯ್ತು." ಏನೂ ಉಪಯೋಗವಿಲ್ಲ ಈ ಜಾದು ಅದರ ಮುಂದೆ. "ನೋಡು, ಈಗ ಅಳು ನಿಲ್ಲಿಸದೇಹೋದ್ರೆ—ಕರೀತೀನಿ—ಮಿಯ್ಯಾಂವ್! ಬಿಲ್ಲಿ ಬರುತ್ತೆ . . . ಇಲ್ದಿದ್ರೆ 'ಅಮ್ಮಾ ತಾಯಿ' ಬರ್ತಾಳೆ. ನಿನ್ನ ಕಂಕ್ಳಲ್ಲಿ ಹಾಕ್ಕೊಂಡ್ಹೋಗ್ತಾಳೆ." ಈ ಗೊಡ್ಡು ಬೆದರಿಕೆಯನ್ನೆಲ್ಲ ನನ್ನ ಮಗು ಕೇಳುತ್ತದೆಯೇ! "ಹೊರಗೆ ಒಯ್‌ಬೇಕು ಅಂತೀಯೇನೋ – ಹಾಗೇ ಆಗಲಿ ಬಾ—" ಹೊರಗೆ ಹೋಗ್ತಾಳೆ; "ಬುರ್‌ರ್‌ರ್—ನೋಡೋ ಹೇಗೆ ಹೋಗುತ್ತೆ ಬಸ್ಸು! ಇವತ್ತು ಹೋಗೋಣ ಸಾಯಂಕಾಲ?—ಬಸ್ ಬೇಡದೆ ಹೋದರೆ ಬೇಡ. ಆಕಾಶ ನೋಡೋ—ಸೂರ್ಯ ನೋಡೋ"—ಆ ಮಗುವಿನ ಮುಖ ಬಿಸಿಲಿಗೆ ಹಿಡಿಯುತ್ತಾಳೆ. ಮಗೂ ಇನ್ನೂ ಜೋರಾಗಿ ಅಳುತ್ತದೆ. ದಾರಿಯಲ್ಲಿ ಹೋಗುವವರೆಲ್ಲ ಈ ಕಡೆಯೆ ನೋಡುತಾರೆ. "ಇದೇ ನಿದು, ಥೂ!" ಎಂದುಕೊಂಡು ಒಳಗೆ ಬರ್ತಾಳೆ. ಕನ್ನಡಿ ತೋರಸ್ತಾಳೆ: "ನೋಡೋ, ಅತ್ತರೆ ಹೇಗಿರುತ್ತೆ ಅಂತ—ಇಸೀ—ಸೀ—ಸೀ—ಸೀ! ಥೂ ಸಿಂಬಳ ಬೇರೆ." ಸಿಂಬಳ ತೆಗೆಯುತ್ತಾಳೆ. "ನಿದ್ದೆ ಬಂದಿದೆಯೇನೋ? ಹೋಗಲಿ ಬಾ. ತೊಟ್ಟಿಲಲ್ಲಿ ಮಲಗಿಕೊ." ತೊಟ್ಟಿಲಲ್ಲಿ ಮಲಗಿಸುತ್ತಾಳೆ. ತೂಗುತ್ತಾಳೆ. "ಜೋ ಕಂದ . . . " ಎಂದು ಹಾಡುತ್ತಾಳೆ.

ಮದುವೆಯಾದಾಗಿನಿಂದ ಹಿಡಿದು ಒಂದು ದಿನವೂ ಹಾಡಿದವಳಲ್ಲ ಈಕೆ. "ಹಾಡೇ, ಕೇಳೋಣ. ಈಗ ಯಾರೇನು ಕೇಳುವುದಿಲ್ಲ. ನಾವಿಬ್ಬರೇ ಇದ್ದೇವೆ" ಎಂದು ಎಷ್ಟೋ ಸಾರಿ ಅವಳನ್ನು ಕೇಳಿಕೊಂಡಿದ್ದೇನೆ. "ಹೋಗ್ರಿ,

ಹಾಡು ಕೇಳಬೇಕು ಅಂತಿದ್ರೆ ರೇಡಿಯೋ ಹಾಕಿಕೊಳ್ಳಿ—ಅದು ಯಾರೋ ಲತಾ ಮಂಗೇಶಕರ್ ಇದ್ದಾಳಲ್ಲ—ಆಕೆ ಹಾಡು ಕೇಳಿ" ಎಂದು ಹೇಳುತ್ತಾಳೆ. "ಲತಾ ಮಂಗೇಶಕರ್ ಹಾಡಿರುವುದು ಕೇಳಿದೇನೆ. ನೀನು ಹಾಡೋದು ಕೇಳಬೇಕು ಕಣೇ. ನಿನ್ನ ತಮ್ಮ ಹೇಳ್ತಿದ್ದ, ನಿನಗೆ ಚೆನ್ನಾಗಿ ಸಂಗೀತ ಬರುತ್ತದೆ ಅಂತ." ಹೀಗೆ ಅವಳಿಗೆ ಸುಳ್ಳು ಹೇಳಿ ಪುಸಲಾಯಿಸಿ ನೋಡಿ ಸೋತೆ. "ಒಂದು ಹಾಡು ಹೇಳಲಿಕ್ಕೆ ಬರದಿದ್ದವರೆಲ್ಲ ಹೆಂಗಸರಂತೆ!" ಎಂದು ಟೀಕೆ ಮಾಡಿ ನೋಡಿದೆ. ಆ ದಿನ ಮಾತೇ ಇಲ್ಲ! ಮರುದಿನ "ನೀನು ಹಾಡು ವುದೂ ಬೇಡ, ನಿನ್ನ ಮೌನವೂ ಬೇಡ. ಮಾತನಾಡಿದರೆ ಧ್ವನಿಯಾದರೂ ಕೇಳಬಹುದು" ಎಂದು ನಾನೇ ಸೋತದ್ದೂ ಉಂಟು. ಈಗ ನೋಡಿ, ಹೇಗಿದೆ?—ಆ ಹಾಡು ಮುಗಿದು ಇನ್ನೊಂದು ಪ್ರಾರಂಭ ಮಾಡಿದ್ದಾಳೆ. ಹಾಗೇ ಅತ್ತು ಅತ್ತು ಮಗುವಿಗೆ ಜೊಂಪು ಹಿಡಿಯಿತು. ಕೋಣೆಯ ಬಾಗಿಲು ಹಾಕಿಕೊಂಡು ಹೊರಗೆ ಬಂದಳು. ಅವಳ ಮುಖ ನೋಡಿ—ಏನೋ ಸಾಧ್ಯ ವಾಗದ ಕೆಲಸ ಪೂರೈಸಿ ಬಂದಷ್ಟು ಮುಖದ ಮೇಲೆ ಸಂತೋಷ. ಮುಖ ಬೆವತಿದೆ, ಕೈಗಳು ತೂಗಿ ತೂಗಿ ಕೆಂಪಾಗಿವೆ. ತಲೆಯ ಕೂದಲು ಹಣೆಯ ಮೇಲೆ ನಾಟ್ಯವಾಡಿ ಕುಂಕುಮವನ್ನು ಸ್ವಲ್ಪ ಕೆದರಿದೆ. "ಅಯ್ಯೋ, ಒಲೆಯ ಮೇಲಿಟ್ಟಿದ್ದು ಏನಾಯ್ತೋ ಏನೋ!" ಎಂದು ಓಡುತ್ತಾಳೆ. "ಬಿಡೀ ಅಂದ್ರೆ, ನೈ ತುಂಬ ಕೆಲಸ ಇರಬೇಕಾದರೆ ಇವರಿಗೊಂದು!" ಎಂದು ನನ್ನ ಕೈ ಬಿಡಿಸಿ ಕೊಂಡು ಹೋಗುತ್ತಾಳೆ.

ಆಃ! ಮಗು ಅಳದಿದ್ದರೆ ಇಷ್ಟೊಂದು ಸೊಗಸು ಇರುತ್ತಿತ್ತೆ? ದುಂಬಿ ಮುಖಕ್ಕೆ ಎರಗಿದಾಗ ಶಕುಂತಲೆ ದುಷ್ಯಂತನಿಗೆ ಹೇಗೆ ಸೊಗಸಾಗಿ ಕಾಣು ತ್ತಿದ್ದಳೋ, ಮಗು ಅತ್ತಾಗ ನನ್ನ ಸುನಂದಾನ ನೋಡುವುದೆಂದರೆ, ನನಗೆ ಆಯ್ತು! ಅದಕ್ಕೇ ಹೇಳಿದ್ದು ನಾನು : "ಮಗು ಅತ್ತರೆ ಸ್ವರ್ಗ!" ಅಂತ.

—ಹಾಲಾಡಿ ಮಾರುತಿರಾವ್.

# ಪ್ರಯಾಣದ ಅಸೌಕರ್ಯಗಳು

ನನ್ನ (—ಎಂದರೆ ನನ್ನ ಲೇಖನದ) ಹಣೆಯ ಬರಹವನ್ನು ನೋಡಿ ನಗಬೇಡಿ, ಇಲ್ಲವೆ ದೂರಬೇಡಿ. ಪ್ರಯಾಣಕ್ಕೆ ಸೌಕರ್ಯಗಳು ಬೇಕಾದಷ್ಟಿವೆ ಯೆಂದು ಹೇಳುತ್ತೀರೇನೋ? ನಿಜ, ಒಪ್ಪಿಕೊಳ್ಳುತ್ತೇನೆ. ನಮ್ಮ ಊರಿಗೆ ಬೆಂಗಳೂರಿನಿಂದ ಬರಬೇಕಾದರೆ ಒಂದೆಡೆಗೆ ರೈಲಿನಲ್ಲಿ ಪ್ರಯಾಣಮಾಡಿ, ಬಳಿಕ ಬಸ್ಸಿನಲ್ಲಿ ಮುಂದುವರಿಯಬೇಕು. ಕಥೆ ಕೇಳಿ. ನಿಜ, ನಂಬಿ.

ಊರಿಗೆ ಹೋಗುವ ಕಾತರದಲ್ಲಿ ಬೆಂಗಳೂರು ರೈಲ್ವೆ ಸ್ಟೇಷನ್ನಿಗೆ ಬಹಳ ಕಷ್ಟದಿಂದ ಆತುರಾತುರವಾಗಿ ಬಂದು ಸೇರಿದ್ದಾಯಿತು. ರೈಲು ಹತ್ತಲು ಟಿಕೇಟು ಬೇರೆ ಕೊಳ್ಳಬೇಕಲ್ಲ ಎಂದು ಮನಸ್ಸಿನಲ್ಲೇ ತವಕಗೊಂಡು, ಹೊರಗೆ ತೋರ್ಪಡಿಸದೆ, ಬುಕಿಂಗ್ ಆಫೀಸಿನಿಂದ ಹತ್ತು ಹನ್ನೆರಡು ಅಡಿ ದೂರದಲ್ಲಿ ಕ್ಯೂನಲ್ಲಿ ನಿಂತೆ. ಎಲ್ಲೋ ನೋಡುತ್ತಾ ಬಾಯಿ ತೆರೆದು ಮುಚ್ಚುವುದರೊಳಗೆ ಒಳಗೆ ಹೋಗಿ ಹೊರಗೆ ಬಂದ ನೊಣ ಮುಂತಾದವುಗಳ ಸಂಖ್ಯೆ ಮರೆತು ಹೋಗಿದೆ. ಅಷ್ಟರಲ್ಲಿ ಹಿಂದಿನಿಂದ ತಳ್ಳಿದಂತಾಯಿತು. ಮುಂದಕ್ಕೆ ಬಿದ್ದೆ; ಆದರೆ ನೆಲಕ್ಕೆ ಬೀಳಲಿಲ್ಲ. ಯಾರೋ ಮಹಾರಾಯ ನನ್ನ ಮುಂದೆ ಮೂರು ಅಂಗುಲ ದೂರ ಮುಂದಾಗಿಬಿಟ್ಟಿದ್ದ. ಅದಕ್ಕೇ ಹಿಂದಿನಿಂದ ಈ ಕಡೆಗೆ ನಡೆದದ್ದು. ಆತ ನನ್ನ ಮುಖ ನೋಡಿದ. "ನಾನೇನು ಮಾಡಲೀರೀ?" ಎಂದು ಹಲ್ಕಿರಿದೆ. ಪಾಪ, ಅವನಿಗೆ ನಮ್ಮ ಭಾಷೆ ತಿಳಿಯದು. "ಎನ್ನ ಅಯ್ಯಾ?" ಎಂದ. ಭಾಷೆ ಕೇಳಿದ ಮೇಲೆ 'ಮತ್ತೇನಾದರೂ ಬಯ್ದುಬಿಡ ಬೇಕಾಗಿತ್ತು' ಎಂದುಕೊಂಡೆ. ಅರ್ಧ ಗಂಟೆಯೊಳಗಾಗಿ ಟಿಕೇಟು ಸಿಕ್ಕಿತು. ರೈಲು ಬಂದು ನಿಂತಿತ್ತು. ಒಳಕ್ಕೆ ಎಲ್ಲರೂ ನುಗ್ಗುತ್ತಿದ್ದರು. ನಾನೂ ಒಂದು ಗಾಡಿಯ ಬಳಿ ಕಾದೆ. ಬೇರೆ ಗಾಡಿಗಳಿಲ್ಲವೋ ಏನೋ ಎಂಬಂತೆ ಎಲ್ಲರೂ ಅಲ್ಲಿಯೇ ನುಗ್ಗಿದರು. ಕಡೆಗೆ ಉಸಿರಾಡುವುದು ಸಹ ಕಷ್ಟವಾಯಿತು. ಕಿಟಕಿ ಯಲ್ಲಿ ನೋಡಿದೆ. ಮಿಕ್ಕ ಗಾಡಿಗಳೆಲ್ಲಾ ಖಾಲಿಯಿದ್ದಂತೆ ತೋರುತ್ತಿತ್ತು. ಅಷ್ಟರಲ್ಲೇ ಒಬ್ಬ "ಈ ಮಗೂಗೆ ಸ್ವಲ್ಪ ಸ್ಥಳ ಕೊಡಬೇಕು, ಸಾರ್" ಎಂದು ಮರುಗಿದ. ಮತ್ತೊಬ್ಬ ಮಹನೀಯ "ಮನೆಯ ಹಾಗೆ ಕುಳಿತುಕೊಳ್ಳಬೇಡರೀ. ಸರಿಯಾಗಿ ಕುಳಿತುಕೊಳ್ಳಿ" ಎಂದ. ಮತ್ತೊಬ್ಬ "ಸಾರ್, ಚಪ್ಪಲ್ಸ್ ತೆಗೆದು

ಬಿಡಿ, ಪ್ಲೀಸ್" ಎಂದ. ಇದನ್ನೆಲ್ಲಾ ನೋಡಿ, ಇಳಿಯಲಾದೀತೇ ಎಂದು ಯೋಗಾಭ್ಯಾಸ ಮಾಡುತ್ತಿದ್ದೆ. ಆ ವೇಳೆಗೆ ನನ್ನ ಗೆಳೆಯರೊಬ್ಬರು ಬಂದು, "ಏನ್ರೀ, ನಿಮ್ಮ ಅವಸ್ಥೆ? ಬನ್ರಿ, ಮುಂದೆ ಹೋಗೋಣ" ಎಂದು ಕರೆದರು. ಇಳಿಯಲು ಸಾಧ್ಯವಿಲ್ಲವೆಂದು ತೀರ್ಮಾನಿಸಿಕೊಂಡು "ನಿಮ್ಮ ಮಗೂಗೆ ಸೀಟು ಕೊಡ್ತೇನೆ, ಸ್ವಲ್ಪ ಎತ್ತಿಕೊಳ್ಳುತೀರಾ" ಎಂದೆ. ಅವರು ಬಹಳ ನಮ್ರತೆಯಿಂದ, ಮೇಲಾಗಿ ಶ್ರದ್ಧೆಯಿಂದ, ಕಿಟಕಿಯ ಹತ್ತಿರ ಸ್ಥಳ ಮಾಡಿಕೊಟ್ಟರು. ನನ್ನ ಚೀಲವನ್ನು ಕಿಟಕಿಯಿಂದ ಹೊರಕ್ಕೆ ಹಾಕಿದೆ, ಹಿಂತಿರುಗಿಕೊಂಡು ತಲೆಯನ್ನು ಹೊರಕ್ಕೆ ಚಾಚಿದೆ. ಅವರು, ಸೀಟು ಕೊಟ್ಟದ್ದಕ್ಕೆ ಕೃತಜ್ಞತೆಯನ್ನು ತೋರಿಸುತ್ತಾ, ಕಾಲುಗಳನ್ನು ಹಿಡಿದು ಮೇಲಕ್ಕೆತ್ತಿದರು. ನನ್ನ ಗೆಳೆಯ ಕೈಗಳನ್ನು ಹಿಡಿದೆಳೆದ. ಈಚೆಗೆ ಬಂದೆ. ಅಷ್ಟರಲ್ಲಿ ಒಂದು ಜೋಡು ಕಳಚಿ, ಒಳಗೆ ಬಿದ್ದುಹೋಗಿತ್ತು. ನನ್ನ ಗೆಳೆಯ ಅಪಹಾಸ್ಯಕ್ಕಾರಂಭಿಸಿದ. ದೂರದಲ್ಲಿ ಹೋಗುತ್ತಿದ್ದ ಒಬ್ಬ ತರುಣಿಯ ಕಡೆ ಅವನ ಗಮನವನ್ನು ಎಳೆದು ಜೋಡನ್ನು ಕಳೆದು ನನ್ನ ಚೀಲಕ್ಕೆ ಸೇರಿಸಿಬಿಟ್ಟೆ. ಬೇರೆ ಗಾಡಿ ಹತ್ತಬೇಕೆಂದು ಆರಾಮವೂ ಸ್ಥಳಾವಕಾಶವೂ ಇರುವ ಗಾಡಿಯನ್ನರಸುತ್ತಿದ್ದೆ. ಗಾರ್ಡು, ಸೀಟಿಯನ್ನು ಹಾಕಿದ. ಎಲ್ಲಿ ಹತ್ತುವುದಕ್ಕೂ ತೋಚಲಿಲ್ಲ. ಕಡೆಗೆ ಕಾಲುಹಲಗೆ (Foot board) ಮೇಲೆ ನಿಂತೆ. ಪೊಲೀಸಿನವನು "ಒಳಗೆ ಹೋಗ್ರಿ. ಆಚೆ ನಿಲ್ಲಬೇಡಿ" ಎಂದು ಕೂಗಿದ. ಒಳಕ್ಕೆ ನನ್ನ ಚೀಲವನ್ನು ಹಾಕಿ ತಲೆಯನ್ನು ಸೇರಿಸಿದೆ. ಅವನ ಕಾಟ ತಪ್ಪಿತು. ಮೂರು ಸ್ಟೇಷನ್ನು ಮುಗಿದ ಮೇಲೆ ನನಗೆ ಕೂಡುವಷ್ಟು ಸ್ಥಳ ದೊರೆಯಿತು. ಎಂಜಿನಿನ ಶಬ್ದದಷ್ಟೇ ಸದ್ದಿನಿಂದ ನನ್ನ ಸಹಪ್ರಯಾಣಿಕ ಒಬ್ಬ ನಿದ್ದೆಮಾಡುತ್ತಿದ್ದ; ಮುಂದುಗಡೆ ಇನ್ನೊಬ್ಬ ಅಷ್ಟೇ ರಭಸದಿಂದ ಹೊಗೆಯನ್ನು ಹೊರಸೂಸುತ್ತಿದ್ದ. ನನಗೆ "ಈ ಒಂದು ಜೋಡನ್ನು ಏನು ಮಾಡಲಿ? ಇನ್ನೊಂದು ಕೊಳ್ಳೋಣವೇ? ಇದು ಹಳೆಯದು, ಅದು ಹೊಸದು. ಇದನ್ನೂ ಎಸೆದು ಬಿಡೋಣವೇ? ಇನ್ನೂ ಒಂದು ತಿಂಗಳು ಕೂಡಾ ಆಗಿಲ್ಲವಲ್ಲ, ಕೊಂಡುಕೊಂಡು. ರೈಲಿಳಿದು ಹುಡುಕೋಣವೇ? ಈ ವೇಳೆಗೆ ಯಾರು ಹಾರಿಸಿದ್ದಾರೊ?" ಎಂದು ಯೋಚನಾಮಗ್ನನಾಗಿದ್ದೆ.

ಅಷ್ಟರಲ್ಲಿ ಕಣ್ಣಿಗೆ ಏನೋ ಬಿದ್ದಂತಾಯಿತು. ಬಿದ್ದದ್ದು ಕಲ್ಲಿದ್ದಲಿನ ಸಣ್ಣ ಚೂರಾದರೂ ಬಹಳ ಅವಸ್ಥೆಪಟ್ಟೆ. ನನ್ನ ಗೆಳೆಯರು "ಏನ್ರೀ?"

ಎಂದರು. "ಏನೂ ಇಲ್ಲ, ಒಂದು ಕಲ್ಲುಬಂಡೆ ಕಣ್ಣಿಗೆ ಬಿದ್ದಿದೆ, ಅಷ್ಟೆ." ಎಂದು ಉತ್ತರಿಸಿದೆ. ಅವರು ನಗಲು ಪ್ರಾರಂಭಿಸಿದರು, ನಾನು ಅಳಲು ಪ್ರಾರಂಭಿಸಿದೆ. ಇಬ್ಬರ ಕಣ್ಣಲ್ಲೂ ನೀರು ಬರುತ್ತಿತ್ತು, ಕಾರಣ ಮಾತ್ರ ಬೇರೆ.

ನನ್ನ ಒಂದು ಕೈಗೆ ಒಳಗೆ ಸ್ಥಳವಿರಲಿಲ್ಲ. ಅದು ಕಿಟಕಿಯಿಂದ ಆಚೆಗೆ ಜೋಲಾಡುತ್ತಿತ್ತು. ಹಾಕಿದ್ದದ್ದು ಅಷ್ಟೇನೂ ಒಳ್ಳೆಯ ಕೋಟಲ್ಲ; ಬಿನ್ನಿ ಕೋಟಿಂಗ್. ಆದರೆ ಇಳಿದಾಗ ಆ ತೋಳನ್ನು ನೋಡಿದ ಕ್ಷಣವೇ ಬಿನ್ನಿಯ ಟ್ರೇಡ್ ಮಾರ್ಕ್ ಆಗಿಬಿಟ್ಟೆ. ಕಾರಣ ಹೇಳುತ್ತೇನೆ ಕೇಳಿ: ಬಿಸ್ಕತ್ ಬಣ್ಣದ ಕೋಟಿಂಗ್ ಅಚ್ಚಗೆಂಪು ಬಣ್ಣವನ್ನು ತಳೆದಿತ್ತು. ಏನು ಕಾರಣವೆಂದು ಊಹಿಸಲಾರಿರೇನು? ಅಯ್ಯೊ ಇರ್ರೀ! ಯಾರೊ ಮಹನೀಯ ಎಲೆ ಅಡಿಕೆ ಜಗಿದು ಗಾಳಿಗೆ ತೂರಿಬಿಟ್ಟಿದ್ದ. ಅದಕ್ಕೆ ನನ್ನ ಕೋಟಿನ ಮೇಲೆ ಆಸೆಯೋ ಅಥವಾ ಅಸೂಯೆಯೋ ತಿಳಿಯದು.

"ಬಸ್ಸು ಯಾವುದಾದರೂ ಇದೆಯೇನ್ರಿ,—ಕಡೆಗೆ?" ಎಂದು ಪೊಲೀಸ್ ಕಾನ್ಸ್ಟೇಬಲನ್ನು ಕೇಳಿದೆ. "ಒಂದೇ ಒಂದು ಬಸ್ಸಿದೆ, ಸಾರ್. ಫೋರ್ ಥರ್ಟಿಗೆ ಬರುತ್ತೆ" ಎಂದ. ಆಗಲೇ ಫೋರ್ ಆಗಿತ್ತು. ಸರಿ, ಕಾದೆ. ಫೋರ್ ಥರ್ಟಿನೂ ಆಗಿಹೋಯಿತು. ಐದೂವರೆಗೆ ಬಸ್ಸು ಬಂದು ನಿಂತಿತು. ಹತ್ತಿದೆ. "ಸೀಟು ಇದ್ದರೆ ಕೊಡ್ತೇನೆ, ಸಾರ್. ದಯವಿಟ್ಟು ಇಳೀರಿ" ಎಂದು ಕಂಡಕ್ಟರ್ ಹೇಳಿದ. "ಭಯವಿಲ್ಲಾರೀ, ಸ್ಟ್ಯಾಂಡಿಂಗ್ ಕೊಟ್ಟರೂ ಸಾಕು. ನಮಗೇನು?" ಎಂದು ಸ್ನೇಹಭಾವದಿಂದ ಅಭಯಪ್ರದಾನ ಬೇಡಿದೆ. ನನ್ನ ದೈನ್ಯವನ್ನು ಕಂಡು ಮರುಗಿದನೋ ಏನೋ ಆತ, ತಿಳಿಯದು. ಸೆಕೆಂಡ್ ಸೀಟಿನಲ್ಲಿ ಒಂದು ಸೀಟಿನ ಮೇಲೆ ಕುಳ್ಳಿರಿಸಿದ. ಕಂಡಕ್ಟರ್ ಒಳ್ಳೆಯವನು ಎಂದುಕೊಂಡೆ. ಮುನಿಸಿಪಲ್‌ಗೇಟು ಕಳೆಯುವವರೆಗೂ ಇಪ್ಪತ್ತೇಳು ಜನವೇ ಬಸ್ಸಿನಲ್ಲಿದ್ದದ್ದು. ಅಲ್ಲಿ ಸಮಪ್ರಮಾಣದಲ್ಲೇ ಜನರು ಕಾದಿದ್ದರು. ಬಸ್ಸು ನಿಂತಿತು. ಎಲ್ಲರೂ ಹತ್ತಬಯಸಿದರು. ಕಂಡಕ್ಟರು ಮುಗುಳುನಗೆಯಿಂದ ಎಲ್ಲರನ್ನೂ ಸ್ವಾಗತಿಸಿದ. ಅವರ ಸಂಭಾಷಣೆಯಲ್ಲಿ ಕಂಡಕ್ಟರು ಅವರ ಚಿಕ್ಕಪ್ಪನ ಮಗನೋ ಇಲ್ಲವೆ ಸ್ವಂತ ಮಗನೋ (ಬಾಡಿಗೆಯಲ್ಲ) ಇರಬೇಕು ಎಂದು ನನಗೆ ಸಂಶಯ ಉಂಟಾಯಿತು. ಸೆಕೆಂಡ್ ಸೀಟಿನಲ್ಲಿ ಆರು ಸ್ಟ್ಯಾಂಡಿಂಗ್‌ಗಳು ಒಳನುಗ್ಗಿದರು. ಸೀಟಿನಲ್ಲಿ ಕುಳಿತಿದ್ದವರ ಕಾಲುಗಳ ಮೇಲೆ ಕುಳಿತರು. ಸೆಖೆ ಎಂದು ಬಟ್ಟೆ

ಗಳನ್ನು ಬಿಚ್ಚಿ ಗಂಟು ಕಟ್ಟಿದರು. ಇಬ್ಬರು ಕೂಡುವ ಮುಂದಿನ ಸೀಟಿನಲ್ಲಿ ನಾಲ್ಕು ಜನ ಕುಳಿತರು. "ಮಡ್‌ಗಾರ್ಡ್ಸ್ ಮೇಲೆ ಆ ಕಡೆ ಒಬ್ಬರು ಈ ಕಡೆ ಒಬ್ಬರು ದ್ವಾರಪಾಲಕರಂತೆ ಮಂಡಿಸಿದರು. ಹಿಂದುಗಡೆ ತೊಟ್ಟಿಯಲ್ಲಿ—ಅದಂತೂ ತೊಟ್ಟಿಯೇ!—ಅಲ್ಲಿ ಹನ್ನೆರಡು ಜನರನ್ನು ಕುಳ್ಳಿರಿಸಿದ. ನಾಲ್ಕು ಜನ ಧೈರ್ಯಸ್ಥರು ಕಂಡಕ್ಟರ ಪಕ್ಕದಲ್ಲಿಯೇ ನಿಂತುಕೊಳ್ಳುವ ಆಸೆಯಿಂದ, ಕುಳಿತರೆ ಬಹಳ ಸೆಖೆಯಾಗುತ್ತೆ ಎಂಬ ಭಯದಿಂದ, ನಿಂತೇ ಇದ್ದರು. ಅಲ್ಲಿಗೆ ಇನ್ನು ಐದು ಜನಕ್ಕೆ ಸ್ಥಳ ಬೇಕಾಗಿತ್ತು. ಅವರು ಬಹಳ ಧೈರ್ಯವಂತರಂತೆ. ಅದಕ್ಕೋಸ್ಕರ ಕಂಡಕ್ಟರು ಅವರನ್ನು ಮೇಲಕ್ಕೆ ಹತ್ತಿಸಿದ. ಅವರು ಗಿಡದ ಕೊಂಬೆ ತಾಕೀತು ಎಂದು ಲಗ್ಗೇಜಿನ ಮಧ್ಯೆ ಮಲಗಿಬಿಟ್ಟರು. ಒಬ್ಬರು ಮೇಲೆ ಹತ್ತಲು ಭಯಪಟ್ಟರು. ಅವರು ಡ್ರೈವರಿಗೆ ಆಪ್ತರಂತೆ. ಆತನಿಗೆ ಕಂಡಕ್ಟರು ನಿಂತಿದ್ದ ಸ್ಥಳ ಕೊಡಲ್ಪಟ್ಟಿತು. ಕಂಡಕ್ಟರ್ ಎಲ್ಲಿ ಹೋದನೆಂದು ನಿಮಗೆ ಯೋಚನೆಯಾಗಬಹುದು; ನನಗೂ ಅದೇ ಯೋಚನೆಯಾಗಿತ್ತು. ಆದರೆ ಅದು ಬಹು ಬೇಗ ಪರಿಹಾರವಾಯಿತು. ಕಂಡಕ್ಟರ್ ಹಿಂದುಗಡೆಯ ಏಣಿಯ ಮೇಲೆ ನಿಂತುಬಿಟ್ಟ! ರಥ ಹೊರಟಿತು. ಕೆಲವರು ಗರುಡೋತ್ಸವಕ್ಕೆ ಸಿದ್ಧರಿದ್ದಂತೆ ಕಾಣುತಿತ್ತು. ಕೆಲವರು ಶಯನೋತ್ಸವಕ್ಕೆ ತಯಾರಾಗಿದ್ದರು. ನಾನು ಹಾಗೆ ಹೀಗೆ ನೋಡುತ್ತಿದ್ದಾಗ "ಸಿಗರೆಟ್ ಸೇದಬಾರದು" ಎಂಬ ಬೋರ್ಡ್ ನೋಡಿದೆ. ಅದು ಬಹುಶಃ ಡ್ರೈವರಿಗೆ ತಿಳಿದಿತ್ತೋ ಇಲ್ಲವೊ. ಅವನು ಎಡಗೈಯಲ್ಲಿ ಸ್ಟೀರಿಂಗ್ ಹಿಡಿದು, ಬಲಗೈಯಲ್ಲಿ ಕಿಸೆಯಿಂದ ಬೀಡಿಯನ್ನು ಹೊರಕ್ಕೆಳೆದ. ಯಥಾಶಕ್ತಿ ದಾನವೂ ಆಯಿತು. ಎಲ್ಲರೂ ಸೇದಲು ಪ್ರಾರಂಭಿಸಿದರು. 'ನಾನೇನು ಮಾಡಲಿ?' ಎಂದು ಚೀಲದಿಂದ ಒಂದು ಪಚ್ಚಬಾಳೇ ಹಣ್ಣನ್ನು ಎಳೆದು ಸುಲಿಯುವುದರಲ್ಲಿದ್ದೆ. ಅದು ಹೇಗೆ ತಿಳಿಯಿತೋ ಏನೋ, ನನ್ನ ಪಕ್ಕದಲ್ಲಿದ್ದ ಮುದುಕರೊಬ್ಬರು ನಿದ್ದೆಯಿಂದ ಎಚ್ಚೆತ್ತರು. ಹಿಂದಿನ ಸೀಟಿನಲ್ಲಿ, ಅದನ್ನು ನೋಡಿಯೋ ಏನೋ, ಒಂದು ಮಗು ಅಳಲಾರಂಭಿಸಿತು. ಇಬ್ಬರಿಗೂ ಇಷ್ಟಿಷ್ಟು ಕೊಟ್ಟೆ. ಮುಂದೆ ಪರಿಚಯಸ್ಥರೊಬ್ಬರು ಕುಳಿತಿದ್ದರು. "ನೀವು ಬೀಡಿ ಸೇದುತ್ತಿದ್ದೀರಾ?" ಎಂದು ನೆಪಹೇಳಿ ಮುಗಿಸಿಬಿಟ್ಟೆ. ಬಸ್ಸು ಮತ್ತೂ ನಾಲ್ಕು ಮೈಲಿ ಮುನ್ನಡೆಯಿತು. ಓಡಲಿಲ್ಲ, ನಡೆಯಿತು. ಅಷ್ಟರಲ್ಲಿ ನನ್ನ ಬೆನ್ನು ತಣ್ಣಗಾಯಿತು. ಏನೆಂದು ನೋಡಿದೆ. ಮಳೆಯೂ ಇಲ್ಲ,

ಆಶ್ಚರ್ಯವೇ ಆಯಿತು. ಈ ಮಧ್ಯೆ ಒಂದು ಶಬ್ದ ನನ್ನ ಕಣ್ಣನ್ನು ಪಕ್ಕಕ್ಕೆ ಎಳೆಯಿತು. ನೋಡಿದರೆ, ಬಾಳೇ ಹಣ್ಣು ತಿಂದ ಮುದುಕರು ಆರಾಮವಾಗಿ ನಿದ್ರಿಸುತ್ತಿದ್ದಾರೆ. ಆಗ ತಿಳಿಯಿತು ನಿಜಾಂಶ. ಅವರನ್ನು ಎಬ್ಬಿಸಿದ್ದಾಯಿತು. ಸ್ವಲ್ಪ ಕಷ್ಟಪಟ್ಟಿದ್ದಾಯಿತು ಅನ್ನಿ. ಅಂತೂ ಎದ್ದರು. ಬಾಯನ್ನೂ ಮುಸುಡಿಯನ್ನೂ ಒರೆಸಿಕೊಂಡರು. ನನ್ನ ಕರ್ಚೀಫಿನಿಂದ ನನ್ನ ಬೆನ್ನು ಒರೆಸಲು ಅಸಾಧ್ಯವಾಯಿತು. ಇಳಿದ ಮೇಲೆ ಅಗಸನಿಗೆ ಸಲ್ಲಿಸುವುದೇ ಯುಕ್ತವೆಂದುಕೊಂಡು ತಿಳಿದೆ. ಅಷ್ಟರಲ್ಲೆ ಜೋಡಿಲ್ಲದ ಕಾಲಿಗೆ ಏನೋ "ಚುರ್" ಎಂದಿತು. ಏನೆಂದು ನೋಡಿದರೆ, ನನ್ನ ಕಾಲ ಮೇಲೆ ಕುಳಿತಿದ್ದ ಮಹನೀಯ ಬೀಡಿಯನ್ನು ಸೇದಿ, ಬಸ್ಸಿನ ಹಲಗೆ ಎಂದು ತಿಳಿದು ಅದನ್ನು ನನ್ನ ಕಾಲಿಗೆ ಉಜ್ಜಿ ಆರಿಸುತ್ತಿದ್ದ. "ಜ್ಞಾನವಿದೆಯೇನಯ್ಯಾ?" ಎಂದು ಕೇಳಿದೆ. "ಇಲ್ಲ ಸ್ವಾಮಿ" ಎಂದ. ಏನು ಮಾಡುವುದು? ಮುಂದೆ ಮಾತನಾಡಲಿಲ್ಲ. ಅಷ್ಟರಲ್ಲೆ "ಊರು ಸಿಕ್ಕಿತು" ಎಂಬ ಕೂಗು ಕೇಳಿ ಚೀಲದೊಡನೆ ಇಳಿದೆ.

—**ಬಿ. ಟಿ. ಅಶ್ವತ್ಥನಾರಾಯಣರಾವ್**

---

## ತಿಳಿದವರ ಚರಿತ

ಅಳಬೇಕು, ನಗಬೇಕು, ಸಮತೆ ಶಮವಿರಬೇಕು
ಹೊಳೆಯ ನೆರೆವೊಲು ಹೃದಯರಸ ಹರಿಯಬೇಕು
ಅಲೆಯಿನಲುಗದ ಬಂಡೆಯವೊಲಾತ್ಮವಿರಬೇಕು
ತಿಳಿದವರ ಚರಿತವದು—ಮಂಕುತಿಮ್ಮ

ಬಿಟ್ಟೆನೆಲ್ಲವನೆಂಬ ಹೃದಯಶೋಷಣೆ ಬೇಡ
ಕಟ್ಟಿಕೊಳ್ಳುವ ಶಿರಃಪೀಡೆಯುಂ ಬೇಡ
ತೊಟ್ಟು ನಿರಹಂಕೃತಿಯ ಕವಚವನು ನೀಂ ಪೋರು
ಮುಟ್ಟದಿಳೆಯಸಿ ನಿನ್ನ—ಮಂಕುತಿಮ್ಮ

# ತಾಳ್ಮೆಯ ಮೂರ್ತಿ

ಎಲ್ಲಿಗೆ ಹೋದರೂ ಕಾಣಿಸಿಕೊಳ್ಳುತ್ತದೆ. ಹೆಚ್ಚಿಗೆ ಕೋಲಾರದಲ್ಲಿ. ಭೂದೇವಿಗೆ ಎರಡನೆಯದು ತಾಳ್ಮೆಯಲ್ಲಿ. ಮೊದಲನೆಯದೇ ಆಗಬಹುದು; ಆದರೆ, ಭೂದೇವಿಯ ಮೇಲೆ ಇತರರಂತೆ ತನ್ನ ಭಾರವನ್ನೂ ಹೊರಿಸಿರುವಾಗ, ಎರಡನೆಯದು ಎಂದು ಕರೆಸಿಕೊಳ್ಳುವುದರಲ್ಲಿಯೇ ತೃಪ್ತಿಪಡಬೇಕು. ಒಳ್ಳೆಯ ಸತ್ಯಾಗ್ರಹಿಯೂ ಹೌದು.

ಇಂಥ ತಾಳ್ಮೆಯ ಮೂರ್ತಿ ಯಾರು? ಬೇರೆ ಯಾರು, ನೀವು ಕಂಡ ತತ್ಕ್ಷಣವೇ 'ಕತ್ತೆ' ಎಂದು ಜರೆಯುವ ಪ್ರಾಣಿ. ಈಸೋಪ ಕೂಡ ಅದರ ವಿಚಾರದಲ್ಲಿ ಅನೇಕ ಹಾಸ್ಯದ ಕಥೆಗಳನ್ನು ಬರೆದು ಅಮರನಾದ. ಇದಕ್ಕೆ ಕಾರಣ, ನೀವು ಅದರಲ್ಲಿ ಕಂಡಿರುವ ಕೆಲವು 'ಅವಗುಣ'ಗಳು. ಅವು ಗುಣಗಳೇ ಆದರೂ ಅವು ಸದ್ಗುಣಗಳೆಂದು ಒಪ್ಪಿಕೊಳ್ಳುವ 'ಪ್ರಗತಿಶೀಲತೆ' ನಿಮಗೆ ಬಂದಿಲ್ಲ, ಅಥವಾ ನೀವು ಅದರ ಸ್ವಭಾವವನ್ನು ಕೂಲಂಕಷವಾಗಿ ಇನ್ನೂ ಪರಿಶೀಲಿಸಿಲ್ಲ.

ಪೊಲೀಸಿನವರ (ಅಥವಾ ಅವರ ದಕ್ಷತೆಯ) ಅಭಾವವನ್ನು ಗಮನಿಸಿ ಅದು ಪ್ರತಿ ಚೌಕದಲ್ಲಿಯೂ ನಿಂತಿರುತ್ತದೆ. ಕಾರುಗಳು ಬರುತ್ತಿದ್ದಾಗ ಅವುಗಳನ್ನು ಹತೋಟಿಯಲ್ಲಿಡುವುದು ಸಾಮಾನ್ಯದ ಮಾತೆ? ಅದೂ ಡ್ರೈವರಿಗೆ ಒಳ್ಳೆಯ ಪ್ರಾಯ ಉಕ್ಕುತ್ತಿದ್ದಾಗ, ಅಥವಾ ಕಾರು ಹೊಸದಾಗಿದ್ದಾಗ, ಅದನ್ನು Traffic Rulesಇಗೆ ತಕ್ಕಂತೆ ನಡಸುವುದು ಯಾವ ಕನಿಷ್ಠ ಬಿಲ್ಲೆಗೂ ಸಾಧ್ಯವಿಲ್ಲ. ಅಂಥದನ್ನು ಈ ಕತ್ತೆ ಮಾಡುತ್ತದೆ ಎಂದರೆ ಸಾಮಾನ್ಯದ ಮಾತೇ?

ಹೇಗಪ್ಪಾ ಕಾಯುತ್ತದೆ ಚೌಕವನ್ನು ಎಂದರೆ, ಒಂದು ಉದಾಹರಣೆ ಕೊಟ್ಟುಬಿಡುವುದೇ ಮೇಲು. ಒಂದು ಚೌಕ. ರಾಜಬೀದಿ. ನಾಲ್ಕು ಮೂಲೆಗೂ ನಾಲ್ಕು ದೊಡ್ಡ ಮನೆಗಳು. ಎಲ್ಲಿಯೂ Halt and Proceed ಬೋರ್ಡು ಇಲ್ಲ. ಉತ್ತರದಿಂದ ದಕ್ಷಿಣಕ್ಕೆ ಅತಿ ಭಾರವನ್ನು ಹೊತ್ತಿರುವ ಒಂದು ಫುಡ್ ಲಾರಿ, ಮತ್ತು ಪೂರ್ವದಿಂದ ಪಶ್ಚಿಮಕ್ಕೆ ಒಂದು ಸಣ್ಣ ಕಾರು ಧಾವಿಸುತ್ತಿರುತ್ತವೆ. ಇನ್ನೇನು, ಸ್ವಾಗತಪೂರ್ವಕವಾಗಿ ಚೌಕದಲ್ಲಿ ಒಂದನ್ನೊಂದು ಆಲಿಂಗಿಸಿ

ಕೊಳ್ಳಬೇಕು . . . ಶ್ರೀಮಾನ್ ಕತ್ತೆಯವರು (ಅಥವಾ ಶ್ರೀಮತಿಯವರು) ಎಲ್ಲಿಂದಲೋ ಅಲ್ಲಿಗೆ ಓಡಿ ಬಂದು "ಹುಷಾರ್! ಬೇಡ, ಬೇಡ, ಸಾವಧಾನ!" ಮುಂತಾಗಿ ಹಾರ್ನಗಿಂತಲೂ ಜೋರಾಗಿ ಕಿರಿಚುತ್ತಾ, ಹಿರಣ್ಯಕಶಿಪುವಿನ ಮುಂದೆ ನರಸಿಂಹ ಪ್ರತ್ಯಕ್ಷನಾದ ಹಾಗೆ ಮೂರು ಸೆಕೆಂಡು ಮುಂಚೆ ನಿಲ್ಲು ತ್ತಾರೆ. ನಿಲ್ಲುವ ಆ ರೀತಿಯೋ ಮೈಮೇಲೆ ಕಾರು ಹರಿದು ಹೋಗುವ ಪರಿವೆಯೇ ಇಲ್ಲದೆ, ಗಮಾರ್ ಗುಂಡಪ್ಪನ ಹಾಗೆ ನಿಲ್ಲುತ್ತಾರೆ. ಇಬ್ಬರು ಡ್ರೈವರುಗಳೂ ಬ್ರೇಕ್ ಹಾಕುತ್ತಾರೆ. ಕತ್ತೆಯವರ ಮುಂದೊಂದು, ಪಕ್ಕದಲ್ಲೊಂದು, ನಿಲ್ಲು ತ್ತವೆ. ಕತ್ತೆಯವರು ಸಾವಧಾನವಾಗಿ ತಮ್ಮದೇ ಆದ ಕಾಲಪರಿಮಿತಿಯಲ್ಲಿ ಪಕ್ಕಕ್ಕೆ ತೆವಳುತ್ತಾರೆ. ಕಾರರಿಗೆ ಸನ್ನಿವೇಶ ಅರ್ಥವಾಗಿ ಸಹಕರಿಸಿಕೊಂಡು ಹೋಗುತ್ತಾರೆ. ಇಂತಹ ಅನಾಹುತಗಳು ದಿನಕ್ಕೆ ನೂರಾರು ನಡೆಯುವು ದನ್ನು ತಪ್ಪಿಸುವ ಈ ಮಹಾಶಯರಿಗೆ ನಿಮ್ಮಲ್ಲಿ ಯಾರಾದರೂ ಒಮ್ಮೆ 'Thanks!' ಎಂದು ಹೇಳಿದ್ದೀರಾ?

ಚೌಕದಲ್ಲಲ್ಲದೆ, ನಡುಬೀದಿಯಲ್ಲಿಯೂ ಅವರು ವಾಹನಗಳನ್ನು ಅಡ್ಡ ಗಟ್ಟುತ್ತಾರೆ. ಅವರಿಗೆ, ಈ ಡ್ರೈವರನಿಗೆ ಕಾರು ನಡೆಸಲು ಬರುತ್ತದೆಯೇ, Driving Licenseಗೆ ಇವನು ಅರ್ಹನೇ ಎಂಬ ಕುತೂಹಲ ಉಕ್ಕಿ ಬರು ತ್ತದೆ ಎಂದು ನನ್ನ ಅನುಭವಗಳಿಂದ ಖಚಿತವಾಗಿ ಬಲ್ಲೆ.

ಪೊಲೀಸರಲ್ಲಿ ಕೆಳದರ್ಜೆಯ ನೌಕರ ಕಾನ್‌ಸ್ಟೆಬಲ್, ಉದ್ದವಾಗಿ ಮೊದ್ದಾಗಿ ಇದ್ದು, ರುಜು ಮಾಡಲಿಕ್ಕೆ ಬಂದರೆ ಸಾಕು, ಚೌಕ ಕಾಯಬಹುದು. 'ಕುದುರೆಗೆ ನೀರು ತೋರಿಸಿಕೊಂಡು' ಬರಬಲ್ಲ. ಆದರೆ ಶ್ರೀಮಾನ್ ಕತ್ತೆಯವ ರಾಗಲಿ, ಶ್ರೀಮತಿ ಕತ್ತೆಯವರಾಗಲಿ Honoraryಯಾಗಿ ದುಡಿದರೂ ತಮ್ಮ ಜೊತೆಯಲ್ಲಿ Undertraining Jamadar police ಒಬ್ಬನನ್ನು ಇಟ್ಟು ಕೊಂಡೆ ಕೆಲಸ ಕಲಿಸುತ್ತಾರೆ. 'ಇಂದಿನ ಮಕ್ಕಳೇ ನಾಳೆಯ ಪ್ರಜೆಗಳು.' ಬೆಳೆಯುವ ಪೈರಿಗೆ ಸರಿಯಾದ ಆರೈಕೆ ಬೇಕು. ಇದು ಕತ್ತೆಗೂ ಗೊತ್ತು.

ಇದರ ಸೃಷ್ಟಿಯ ವಿಚಾರವಲ್ಲಿ ಒಂದು ಸ್ವಾರಸ್ಯವಾದ ಕತೆಯಿದೆ. ಬ್ರಹ್ಮ ಕುದುರೆಯನ್ನು ಮಾಡಿದನಂತೆ. ಅದರ ಚುರುಕು, ವೇಗ ಇವನ್ನು ನೋಡಿ ತನ್ನ ಬೆನ್ನು ತಾನೇ ತಟ್ಟಿಕೊಂಡನಂತೆ. ವಿಶ್ವಾಮಿತ್ರನಿಗೆ ಕೋಪ ಬಂತು. ವಿಶಾಲ ಹೃದಯದ, ಕುದುರೆಯ ಅವಗುಣಗಳಿಲ್ಲದ, ಒಂದು ಪ್ರಾಣಿಯನ್ನು

ಮಾಡುತ್ತೇನೆಂದು ಹಟತೊಟ್ಟ. ಮೊದಲು ಮಣ್ಣಿನ ಬೊಂಬೆಯನ್ನು ಮಾಡಿ ಆಮೇಲೆ ಅದಕ್ಕೆ ಜೀವ ಕೊಡಬೇಕಲ್ಲ! ಆದರೆ ಅವಸರಪಟ್ಟು ಬೊಂಬೆ ಸ್ವಲ್ಪ ಕುರೂಪಿಯಾಯಿತು. ಕೌಶಿಕನಾದರೆ ಮಾತ್ರ, ಅವನಿಗೆ ಪಾಲುಮಾರಿಕೆಯಿಲ್ಲವೆ? ಹಾಗೆಯೇ ಜೀವ ತುಂಬಿದ. ಅದನ್ನೇ ನಾವು ಈಗ ಕತ್ತೆ ಎಂದು ಜರೆಯುವುದು. ಜಡಭರತ ಚುರುಕಾಗಿರಲಿಲ್ಲ; ಆದರೆ ಅಷ್ಟಕ್ಕೇ ಅವನನ್ನು ಮಡ್ಡಿಸಾಂಬ್ರಾಣಿ ಎನ್ನಲಾಗುವುದೇ?

ಹಿಂದಿನವರು ಕತ್ತೆಯ ವಿಷಯವಾಗಿ 'ಮೂಢೋ ಮೂರ್ಖೋ ಗಾರ್ದಭಃ ಏಕರಾಶಿಃ' ಎಂದು ಗಾದೆ ಮಾಡಿದರು. ಗಾಯಕರ ಗಾನವನ್ನು ಗಾರ್ದಭಗಾನ ಎನ್ನುವುದು ಹಳೆಯ ಉಪಮಾನಗಳಲ್ಲಿ ಒಂದು. ಇದನ್ನು ನೋಡಿ ಭಾರತೀಯನಾದ ನಾನು ತಲೆ ತಗ್ಗಿಸಬೇಕಾಗಿದೆ. ಕಾಲೇಜಿನಲ್ಲಿ ಕೂಡ ಮುಂಗೋಪಿ ಮಾಸ್ತರುಗಳು 'Are you a man or an ass? a monkey or a donkey?' ಎಂದು ಬೈಯುವುದು ಕೇಳಿ, ಎಚ್ಚೆತ್ತ ಭಾರತದ ನವಯುವಕನಾದ ನಾನು ತಲೆ ತಗ್ಗಿಸಬೇಕಾಗಿದೆ. ಕಾರು ಬರಲಿ, ಲಾರಿ ಬರಲಿ, ಅದರ ಸ್ಥಾನ ಬದಲಾಯಿಸುವುದೇ ಇಲ್ಲ. ಆದಮಾತ್ರಕ್ಕೆ 'ದಡ್ಡ—ಂಡೇದು!' ಎಂದು ಜುಗುಪ್ಸೆ ತೋರಿಸುವುದೇ? ಹಿಂದೀ ಕವಿಯೊಬ್ಬರು ಹೇಳಿದಂತೆ "ನ ಹಾಥ್ ಏಕ್ ಶಸ್ತ್ರ ಹೋ, ನ ಸಾಥ್ ಏಕ್ ಅಸ್ತ್ರ ಹೋ . . . ಹಟೋ ನಹೀಂ ಡಟೋ ನಹೀಂ . . ." ಎಂಬ ತತ್ತ್ವವನ್ನು ಅಕ್ಷರಶಃ ಪಾಲಿಸುತ್ತದೆ. ಚಳಿಗೆ ಹೆದರುವುದಿಲ್ಲ, ಮಳೆಗೆ ಬೆದರುವುದಿಲ್ಲ, ಗಾಳಿಗೆ ಅದಿರುವುದಿಲ್ಲ. ಪ್ರಾಣಭಯ ಮೊದಲೇ ಇಲ್ಲ. ಇದಕ್ಕಿಂತ ಹೆಚ್ಚೇನನ್ನು ವೀರನಾದವನಲ್ಲಿ ಬಯಸುತ್ತೀರಿ?

ವೀರ ಎಂದರೆ ಜ್ಞಾಪಕ ಬರುತ್ತದೆ, ಒಂದು ಸಂಗತಿ. ಮೊನ್ನೆ ನಮ್ಮೂರಿನಲ್ಲಿ ಎರಡು ರೈಲುಕಂಬಿಗಳ ಮಧ್ಯೆ ಶ್ರೀ ಕತ್ತೆಯವರು ತೂಕಡಿಸುತ್ತಾ ನಿಂತಿದ್ದರು. ಹಿಂದಿನಿಂದ ಒಂದು ರೈಲು ಕರ್ಕಶವಾಗಿ ಕೂಗುತ್ತಾ ಬಂತು. 'ನಿದ್ದೆಗೆ ಭಂಗ ತಂದವರು ಹಾಳಾಗಲಿ' ಎಂದು ಶಪಿಸುತ್ತಾ ಎಂಜಿನ್ ಪುಡಿಪುಡಿಯಾಗುವ ಹಾಗೆ ಒಂದು ಒದೆತವನ್ನಿತ್ತರು. ಗಜೇಂದ್ರಮೋಕ್ಷದ ಸಂಗತಿಯನ್ನು ಕೇಳಿದ ಜನ ಆ ದಿವಸ ಗಾರ್ದಭೇಂದ್ರ ಮೋಕ್ಷವನ್ನು ಕಣ್ಣಾರೆ ಕಂಡರು.

ತಾಳ್ಮೆಯ ಅವತಾರ, ಈ ಮಹಾಶಯರು. ನೀವೆಷ್ಟೇ ಹೊಡೆಯಿರಿ, ಸುಮ್ಮನಿರುತ್ತಾರೆ. ಏಕೆಂದರೆ, ಅವರ ಸತ್ತ್ವ ಅವರಿಗೇ ಗೊತ್ತು. 'ಅಹಿಂಸೆಯ ದೂತ' ಅವರು. ಅಹಿಂಸೆಯ ದೀಕ್ಷೆಯನ್ನು ಹೇಡಿ ಹೊರಲಾರ. ಹೇಡಿ ಅಹಿಂಸೆಯನ್ನು ಆಚರಿಸುತ್ತೇನೆಂದರೆ ಅವನ ಅಹಿಂಸೆ ಹೇಡಿತನಕ್ಕೆ ಮತ್ತೊಂದು ಹೆಸರು. ಆದರೆ ವೀರ ಹಾಗಲ್ಲ. ನಾನು ಹಿಂಸಿಸಿದರೆ ಬಡಪಾಯಿ ನಾಶವಾಗುತ್ತಾನಲ್ಲ ಎಂಬ ಕರುಣೆಯಿಂದ ಸುಮ್ಮನಿರುತ್ತಾನೆ. ಆದರೆ ತೀರ ಪರೀಕ್ಷಿಸುವ ಸಮಯ ಬಂದಾಗ ಒಂದು ಸಲ ರೌದ್ರಾವತಾರವನ್ನು ತಾಳಿದನೆಂದರೆ ಶತ್ರು ನಡುಗುತ್ತಾನೆ, ಅವನು ಹೇಳಹೆಸರಿಲ್ಲದಂತಾಗುತ್ತಾನೆ. ದೂರ ನಿಂತು ಒಂದಲ್ಲ ಸಾವಿರ ಕಲ್ಲು ಹೊಡೆಯಿರಿ, ಕತ್ತೆಯವರು ಸುಮ್ಮನಿರುತ್ತಾರೆ. ಆದರೆ ಹತ್ತಿರ ಬಂದು ಕೆಣಕಿ ? ತಾಳ್ಮೆಯ ಗಡಿಯನ್ನು ದಾಟಿದ ಕೂಡಲೆ, ಹಿಂದೆ ತಿರುಗಿ, ಮುಂಗಾಲುಗಳ ಮೇಲೆ ಸಮಸ್ತ ಭಾರವನ್ನೂರಿ, ಹಿಂಗಾಲುಗಳಿಂದ ಝಾಡಿಸಿದರೆ—ಶತ್ರುವಿಗೆ ಜ್ಞಾನ ಬರುವುದು ಆಸ್ಪತ್ರೆಯಲ್ಲೇ.

ಮಾನವವೀರರಂತೆ ಗಾರ್ದಭವೀರರೂ ದೈವಭಕ್ತರು. ನನ್ನ ಸ್ನೇಹಿತರೊಬ್ಬರು ಹೇಳುತ್ತಾರೆ : ಗೂಬೆ ಬಹಳ ಪವಿತ್ರ ಪಕ್ಷಿಯಂತೆ. ಅದರ ರೆಕ್ಕೆಯ ಮೇಲೆ ಅರಬ್ಬೀ ಭಾಷೆಯಲ್ಲಿ ದೇವರ ಹೆಸರನ್ನು ಬರೆದಿದ್ದಾರಂತೆ, ಅವರ ಸೃಷ್ಟಿಕರ್ತರು. ನಾಳೆ ನಾವು ಮೈಗೆಲ್ಲಾ ವಿಭೂತಿ ಬಳಿದುಕೊಂಡು ಜಗದ್ಗುರುಗಳಾಗಬಹುದಲ್ಲ! ಪವಿತ್ರತೆ ಇರುವುದು ಆಚರಣೆಯಲ್ಲಿ. ಆಡುವ ಮಾತು, ನಡೆಯುವ ರೀತಿಯಲ್ಲಿ, ಪವಿತ್ರತೆ ಇರಬೇಕು. ಶ್ರೀವರ್ಮಾ ಕತ್ತೆಯವರ ನಡೆವಳಿಕೆ ಪವಿತ್ರವಾದದ್ದೇ. ಆಡುವ ಮಾತೋ! "ಜೋರಾಗಿ ಕಿರಿಚುತ್ತೆ ಶನಿ !" ಎಂದು ನೀವು ಬೇಸರಗೊಂಡಾಗ ಅವರು ದೇವರ ಧ್ಯಾನಮಾಡುತ್ತಾರೆ. ಉದ್ದನಾಗಿ ರಾಗ ಎಳೆಯುವುದು ಏನು ಎಂದುಕೊಂಡಿದೀರ ? "ಅಲ್ಲಾ . . . ಹೈ ಕಿ? ನಹಿ ಕಿ? ಹೈ ಕಿ? ನಹಿ ಕಿ?" . . . ಎಂದು ಜಿಜ್ಞಾಸೆಯಲ್ಲಿ ಬಿದ್ದು, "ಹೈ ಹೈ ಹೈ" ಎಂದು ತಮಗೆ ತಾವೇ ಸಮಾಧಾನ ಮಾಡಿಕೊಳ್ಳುತ್ತಾರೆ—ಎಂಬುದಾಗಿ ತಿಳಿದವರು ಹಿಂದಿನಿಂದಲೂ ಭಾಷ್ಯ ಹೇಳಿದ್ದಾರೆ.

ಇದರಲ್ಲಿ ಯಾವುದಾದರೂ ಒಂದು ಗುಣ ಕುದುರೆಯಲ್ಲಿದೆಯೆ ? ಅದು ಕತ್ತೆಯ ಸೋದರ ಮಾವನೆಂದರೂ, ಈ ಮಾವ ಅಳಿಯಂದಿರಿಗಿರುವ ವ್ಯತ್ಯಾಸ ಕಂಸ ಕೃಷ್ಣರಿಗೆ ಇರುವಷ್ಟು!

ಇದರ ಉಪಕಾರಗುಣವನ್ನು ವರ್ಣಿಸಲಸಾಧ್ಯ. ನಮ್ಮೂರಿನಲ್ಲಿ ಒಬ್ಬರು ಸಾಹುಕಾರರಿದ್ದರು. ಅವರ ಎದುರಂಗಡಿಯ ಸಾಹುಕಾರರು ಮುನಿಸಿಪಲ್ ಚುನಾವಣೆಯಲ್ಲಿ ಗೆದ್ದು 'ಸೆಂಬರಾ'ದ್ದನ್ನು ನೋಡಿ ಇವರ ಹೊಟ್ಟೆ ಉರಿದು ಹೋಯಿತು. ಅವರು ಅಟ್ಟಕ್ಕೆ ಹಾರಿದರೆ ನಾನು ಬೆಟ್ಟಕ್ಕೆ ಹಾರಲಾರೆನೇ ಎಂದುಕೊಂಡು, ಮರುಚುನಾವಣೆಯಲ್ಲಿ 'ಕತ್ತೆಯ ಮಾರ್ಕಿಗೆ ಓಟು ಕೊಡಿ' ಎಂದು ಕೂಗಿಸಿ, ಉಪಾಧ್ಯಕ್ಷಸ್ಥಾನ ಹೊಡೆದೇಬಿಟ್ಟರು, ಮೀಸೆ ತಿರುಗಿಸಿಯೇ ಬಿಟ್ಟರು. ಒಂದು ಸಾರಿ ಯಾವುದೋ ಸಮಾರಂಭಕ್ಕೆ ಇವರನ್ನು ಅಧ್ಯಕ್ಷ ರನ್ನಾಗಿ ಮಾಡಿದರು. 'ಅಧ್ಯಕ್ಷರೇ' ಎಂದು ಭಾಷಣಕಾರರು ಸಾಂಪ್ರದಾಯಿಕ ವಾಗಿ ಭಾಷಣವನ್ನು ಪ್ರಾರಂಭಿಸಿದರೆ, 'ಏಮಿಟೆಕಿ ಸ್ವಾಮೀ?' ಎಂದು ಅಲ್ಲಿಂದಲೇ ಕೇಳುವ ಗಿರಾಕಿ. ಅವರಿಗೆ, 'ಬೇರೆಯವರನ್ನಾರಿಸಿ ಕೊಳ್ಳಿ' ಎಂದು ಹೇಳಲಿಕ್ಕೆ ಆಗಲಿಲ್ಲ. ಎದುರಂಗಡಿಯವನೆದುರು ವೇದಿಕೆಯ ಮೇಲೆ ಹಾರ ಹಾಕಿಸಿಕೊಳ್ಳುವ ಭವ್ಯದೃಶ್ಯವನ್ನು ಕಲ್ಪಿಸಿಕೊಂಡು ಒಪ್ಪಿಬಿಟ್ಟರು. ಆದರೆ ಸಮಾರಂಭದ ದಿನ ಹತ್ತಿರವಾದ ಹಾಗೆಲ್ಲ ಭಯವಾಗುತ್ತಿತ್ತು. ಅಷ್ಟು ಜನ ತನ್ನನ್ನೇ ನುಂಗುವ ಹಾಗೆ ನೋಡುತ್ತಿದ್ದರೆ ಹೇಗೆ ಮಾತನಾಡುವುದು? ಆದರೆ ದೇವರು ದೊಡ್ಡವನು, ಕತ್ತೆಯವರು ನಿಜವಾಗಿಯೂ ಆಪತ್ಕಾಲದಲ್ಲಿ ಸಹಾಯ ಮಾಡುವವರು: ಸಮಾರಂಭದ ಹಿಂದಿನ ದಿನ ಸೈಕಲ್ಲಿನ ಮೇಲೆ ಹೋಗುತ್ತಿದ್ದಾಗ, ಕತ್ತೆಯವರು ತಮ್ಮ ಪಾದಾರವಿಂದಗಳನ್ನು ಸ್ಪರ್ಶಮಾಡಿ ಸಿದರು. ಅವರು ಕೇವಲ ಒಂದು ವಾರ ಆಸ್ಪತ್ರೆಯಲ್ಲಿರಬೇಕಾಯಿತು. ಮಾನ ವುಳಿಯಿತು, ಪ್ರಾಣವುಳಿಯಿತು, ಕೇವಲ ಅರುವತ್ತು ರೂಪಾಯಿಗಳಷ್ಟು ನಷ್ಟ ವಾಯಿತು. ಛೆ! ಈ ಬರಗಾಲದಲ್ಲಿ ಅಂಗಡಿಯವರಿಗೆ ನಷ್ಟವೆಲ್ಲಿ ಬಂತು?

ಈಗಿನ ಜನನಾಯಕರ ಭಾಷಣ ನೋಡಿ: ಸತ್ಯ, ಅಹಿಂಸೆ, ಸ್ವಾರ್ಥ ತ್ಯಾಗ, ಸ್ವದೇಶಪ್ರೇಮ, ಪೌರಪರಿಜ್ಞಾನ, ಮಾನವ ಸೇವೆಯೇ ಮಾಧವನ ಸೇವೆ, ಇನ್ನೂ ಒಂದು ಸಾವಿರ ತತ್ತ್ವಗಳನ್ನು ಹೇಳಿದ್ದೂ ಹೇಳಿದ್ದೇ. ಆಚರಿ ಸುವವರಿಗೂ ವೇದಿಕೆಗಳಿಗೂ ಬಲು ದೂರ. ಆಚರಿಸಿದವರನ್ನು ಪ್ರೋತ್ಸಾಹ ಗೊಳಿಸಲು ಒಂದೇ ಒಂದು ಮಾತಿನಿಂದಾದರೂ ಹೊಗಳಿಲ್ಲ. ಇದಕ್ಕೆ ಕತ್ತೆ ಯವರು ಮತ್ತು ಅವರ ಜನಾಂಗದವರೇ ಸಾಕ್ಷಿ. ಮೆಚ್ಚಬೇಕಾದವನು ಮೇಲಿರುವ ಭಗವಂತ ಮಾತ್ರ, ನಾವಲ್ಲ. ಈ ವಿಷಯ ಅವರ ಜನಾಂಗದವ

ರೆಲ್ಲರಿಗೂ ಗೊತ್ತು. ಅವರು ಸುಮ್ಮನೆ ಯಾವ ತಂಟೆಗೂ ಬರದಿರುವುದಕ್ಕೆ ಅದೇ ಪ್ರಧಾನಕಾರಣ.

ಇಷ್ಟೆಲ್ಲಾ ತಿಳಿದುಕೊಂಡಮೇಲೆ, ನಿಮ್ಮ ತಂದೆ ತಾಯಿಗಳಾಗಲಿ, ಗುರು ಹಿರಿಯರಾಗಲಿ ನಿಮ್ಮನ್ನು 'ಕತ್ತೆ!' ಎಂದು ಬೈದರೆ, ಕೋಪಿಸಿಕೊಳ್ಳುವುದಕ್ಕೆ ಕಾರಣವೇ ಇಲ್ಲ. ನಿಮ್ಮನ್ನು ಯಾರಾದರೂ ಸಚ್ಚರಿತ್ರ, ತಾಳ್ಮೆಯ ಮೂರ್ತಿ ಎಂದು ಹೇಳಿದರೆ ನೀವು ರೇಗುವುದಿಲ್ಲವಲ್ಲ! ಯಾರಾದರೂ 'You fool of an ass!' ಎಂದು ಬೈದರೆ? ನೀವು ತಣ್ಣಗೆ 'Thank you for the compliment, Sir' ಎಂದು ತಾಳ್ಮೆಯಿಂದ ನಗುತ್ತ ಉತ್ತರ ಕೊಡಿ. ಬಹಳ ಮೇಲು, ಮುಂದಿನ ಮಾತಿಗೆ ಅವಕಾಶವೇ ಇರುವುದಿಲ್ಲ.

ಇಂತಹ ತಾಳ್ಮೆಯ ಮೂರ್ತಿಯನ್ನು ನಾವು ಮಾನವರು ಬಹಳ ಹಿಂಸಿಸಿದ್ದೇವೆ. ಅದರ ಬಾಲಕ್ಕೆ ಪಟಾಕಿ ಕಟ್ಟಿ ಅಂಟಿಸುವುದು, ಸದ್ದು ಮಾಡುವಂತೆ ಬಾಲಕ್ಕೆ ಡಬ್ಬ ಕಟ್ಟುವುದು, ಕಾಮನ ಹಬ್ಬದ ದಿನ ಸವಾರಿ ಮಾಡುವುದು, ಹೀಗೆಲ್ಲಾ ಮಾಡಿ, ಅದರ ತಾಳ್ಮೆಯನ್ನು ದುರಪಯೋಗಪಡಿಸಿ ಕೊಂಡಿದ್ದೇವೆ. ಅಮಲ್ದಾರರು ವಿಜಯ ದಶಮಿ ದಿನ ಬಾಳೆಯ ಕಂಬವನ್ನು ಕತ್ತರಿಸಿ, ಶತ್ರುಸೈನ್ಯವನ್ನು ನಾಶಮಾಡಿದಷ್ಟು ಜಂಬಪಟ್ಟುಕೊಳ್ಳುವಂತೆ, ಬೀಡಿ ಕಟ್ಟುವ ಹುಡುಗರು ಕತ್ತೆಯವರ ಬೆನ್ನಿನ ಮೇಲೆ ಸವಾರಿಮಾಡಿ 'ಜೆಹಾದ್'ಗೆ ಹೊರಟ ಧರ್ಮಯೋಧರೆಂದು ತೃಪ್ತಿಪಟ್ಟುಕೊಳ್ಳುತ್ತಾರೆ.

ನಾವೆಂದಿಗೆ ತಿದ್ದಿಕೊಳ್ಳುತ್ತೇವೆಯೋ? ನಾರಾಯಣನೇ ಬಲ್ಲ.

—ಜಿ. ಜೆ. ಸತ್ಯನಾರಾಯಣರಾವ್.

---

## ಸರ್ವಾಂತರ್ಯಾಮಿ

ಕಲ್ಲಾಗಿ ನಿಲ್ಲುವನು, ಬಳ್ಳಿವೊಲು ಬಳುಕುವನು
ಮುಳ್ಳಾಗಿ ಚುಚ್ಚುವನು, ಫುಲ್ಲ ಸುಮವಹನು
ಕಲ್ಲೋಲ ವಾರಿಧಿವೊಲುರವಣಿಸಿ ಮೊರೆಯುವನು
ಕ್ಷುಲ್ಲಮಾನಿಸನಿವನು—ಮಂಕುತಿಮ್ಮ

# ಮರಗೋಪಿ

ಒಂದಾನೊಂದು ಕಾಲದಲ್ಲಿ ಮಯೂರವರ್ಮಪುರ ಮತ್ತು ದೈತ್ಯಕೀರ್ತಿ ಪುರ ಎಂಬ ಎರಡು ಪಟ್ಟಣಗಳಿದ್ದುವು. ಮಯೂರವರ್ಮಪುರದಲ್ಲಿ ಚಂದ್ರಕೀರ್ತಿ ಮಹಾರಾಜನು ರಾಜ್ಯಭಾರ ಮಾಡುತ್ತಿದ್ದನು. ಆತನು ಬಹು ಸತ್ಯವಂತ, ಜನಗಳಿಗೆ ಯಾವ ತೊಂದರೆಯನ್ನೂ ಕೊಡದೆ ನೀತಿವಂತನಾಗಿ ಆಳುತ್ತಿದ್ದ.

ದೈತ್ಯಕೀರ್ತಿಪುರದಲ್ಲಿ ರುದ್ರಾಸುರನೆಂಬ ರಾಕ್ಷಸನು ಆಳುತ್ತಿದ್ದನು. ಅವನು ಕೆಟ್ಟ ಕೆಲಸಗಳನ್ನು ಮಾಡುವುದರಲ್ಲಿ ಎತ್ತಿದ ಕೈ. ಅವನ ಗುಣಗಳು ಮಯೂರವರ್ಮನ ಗುಣಗಳಿಗೆ ವಿರುದ್ಧವಾಗಿದ್ದುವು.

ಹೀಗೆಯೇ ಇರುವಾಗ ರುದ್ರಾಸುರನ ಆಸ್ಥಾನದಲ್ಲಿ ಒಂದು ದಿನ ಗಲಭೆ ಯಾಯಿತು. "ನಮ್ಮ ರಾಜ್ಯದಲ್ಲಿ ಯಾರಾದರೂ ಹೋಗಿ ಮಯೂರವರ್ಮನ ಪಟ್ಟಣವನ್ನು ಹಾಳುಮಾಡಿ ಬಂದರೆ ಅವರಿಗೆ ತಕ್ಕ ಬಹುಮಾನ ಕೊಡುತ್ತೇವೆ" ಎಂದು ರಾಜ ನುಡಿದ. ಇಬ್ಬರು ರಾಕ್ಷಸ ದಂಪತಿಗಳು ಮುಂದೆ ಬಂದು, "ನಾವು ನಾಶಮಾಡಿಬರುತ್ತೇವೆ, ವೀಳ್ಯವನ್ನು ಕೊಡಿ" ಎಂದು ಕೇಳಿದರು. ಹಾಗೆಯೇ ವೀಳ್ಯವನ್ನು ತೆಗೆದುಕೊಂಡು ಹೋದರು.

ಮಯೂರವರ್ಮನಿಗೆ ಸೂಕ್ಷ್ಮಮತಿ ಎಂಬ ಮಗನೂ ನವಿಲು ಚಿತ್ರಾಂಗಿ ಎಂಬ ಮಗಳೂ ಇದ್ದರು. ಇವರಿಬ್ಬರೂ ದಿನವೂ ಕುದುರೆ ಸವಾರಿ ಮಾಡಲು ಊರ ಹೊರಗೆ ಹೋಗುತ್ತಿದ್ದರು. ಒಂದು ದಿನ ಆ ವೀಳ್ಯವನ್ನು ತೆಗೆದು ಕೊಂಡು ಬಂದ ರಾಕ್ಷಸರು ರಾಜಕುಮಾರರು ಬೇಟೆಯಿಂದ ಹಿಂದಿರುಗುವ ದಾರಿಯಲ್ಲಿ ಸೊಗಸಾದ ಎರಡು ಬೊಂಬೆಗಳಾಗಿ ಕುಳಿತುಕೊಂಡರು. ನವಿಲು ಚಿತ್ರಾಂಗಿಗೆ ಅವನ್ನು ನೋಡಿದ ಕ್ಷಣವೇ ಮನೆಗೆ ತೆಗೆದುಕೊಂಡು ಹೋಗ ಬೇಕೆಂಬ ಮನಸ್ಸಾಯಿತು. ಅಣ್ಣನು ಎಷ್ಟು ಬೇಡವೆಂದರೂ ಕೇಳದೆ ಅವು ಗಳನ್ನು ತೆಗೆದುಕೊಂಡು ಬಂದು ಮನೆಯಲ್ಲಿಟ್ಟಳು.

ರಾಕ್ಷಸರು ಮಾಯಾವಿಗಳಾದ್ದರಿಂದ ರಾತ್ರಿಯೆಲ್ಲಾ ರಾಕ್ಷಸರಾಗಿಯೂ ಹಗಲೆಲ್ಲಾ ಬೊಂಬೆಗಳಾಗಿಯೂ ಇರುತ್ತಿದ್ದರು. ರಾತ್ರಿ ಎಲ್ಲರೂ ಮಲಗಿದ ಮೇಲೆ ತಮ್ಮ ನಿಜಸ್ವರೂಪವನ್ನು ತಾಳಿ, ಒಂದೊಂದು ಬೀದಿಯ ಜನರನ್ನು ಒಂದೊಂದು ದಿನ ತಿಂದುಹಾಕುವುದಕ್ಕೆ ಪ್ರಾರಂಭಿಸಿದರು. ಬೆಳಕು ಹರಿದ

ಮೇಲೆ ಯಥಾಪ್ರಕಾರವಾಗಿ ತಮ್ಮ ಜಾಗದಲ್ಲಿ ಬೊಂಬೆಗಳಾಗುತ್ತಿದ್ದರು. ಚಂದ್ರಕೀರ್ತಿ ಮಹಾರಾಜನಿಗೆ ಬಹಳ ದಿಗಿಲಾಯಿತು. ಏನೇನು ಮಾಡಿದರೂ ಅದರ ಗುಟ್ಟು ಪತ್ತೆಯಾಗಲೆ ಇಲ್ಲ. ಎಷ್ಟು ಕಾವಲಿಟ್ಟರೂ ತಿಳಿಯಲು ಸಾಧ್ಯವಾಗಲೆ ಇಲ್ಲ. ಕೊನೆಗೆ ರಾಜನ ದಂಡು, ಪರಿವಾರ, ಮಂತ್ರಿ, ಪ್ರಧಾನಿ ಎಲ್ಲರೂ ಮುಗಿದುಹೋದರು.

ಕೊನೆಯದಾಗಿ ಉಳಿದಿದ್ದವರು ನಾಲ್ಕು ಮಂದಿ: ರಾಜದಂಪತಿಗಳು, ಅವರ ಮಕ್ಕಳು. ಒಂದು ರಾತ್ರೆ ಆ ರಾಕ್ಷಸರು ರಾಜದಂಪತಿಗಳನ್ನು ತಿನ್ನುತ್ತಿದ್ದಾಗ ಪಕ್ಕದಲ್ಲೇ ಮಲಗಿದ್ದ ಸೂಕ್ಷ್ಮಮತಿಗೆ ಎಚ್ಚರವಾಯಿತು. ಭಯ ಪಡದೆ, ಕೂಗದೆ ಎಲ್ಲವನ್ನೂ ನೋಡಿದನು. ಅವರು ಮತ್ತೆ ಬೊಂಬೆಗಳಾಗಿ ತಮ್ಮ ಸ್ಥಾನಕ್ಕೆ ಹೋದುದನ್ನು ಕಂಡನು. "ನಾಳೆ ಈ ಹುಡುಗರನ್ನು ಮುಗಿಸಿದರಾಯಿತು" ಎಂದು ಮಾತಾಡಿಕೊಂಡದ್ದನ್ನು ಕೇಳಿದನು. ಮರುದಿನ ಅಣ್ಣತಂಗಿಯರಿಬ್ಬರೂ ಬಹಳವಾಗಿ ಗೋಳಾಡಿದರು. "ಈ ದಿನ ಇಲ್ಲಿದ್ದರೆ ನಮ್ಮನ್ನೂ ತಿಂದುಹಾಕಿಬಿಡುತ್ತವೆ. ಈ ಊರನ್ನು ಮೊದಲು ಬಿಡೋಣ" ಎಂದು ಅಣ್ಣನು ತಂಗಿಗೆ ಹೇಳಿದನು. ಅದೇ ಪ್ರಕಾರ ತಮಗೆ ಬೇಕಾದ ಬಟ್ಟೆ ಬರೆಗಳನ್ನು ಕಟ್ಟಿಕೊಂಡು ಬಹುದೂರ ಪ್ರಯಾಣ ಮಾಡಿದರು. ಸಾಯಂ ಕಾಲದ ವೇಳೆಗೆ ಒಂದು ಪಟ್ಟಣಕ್ಕೆ ಬಂದು ಸೇರಿದರು.

ಆ ಊರಿನ ಬಾಗಿಲ ಹತ್ತಿರ ಒಬ್ಬ ಸುಣ್ಣ ಮಾರುವವನು ಕುಳಿತಿದ್ದ. ಇವರು ಅವನ ಹತ್ತಿರ ಹೋಗಿ ನಡೆದ ಎಲ್ಲಾ ವಿಚಾರವನ್ನೂ ವಿವರಿಸಿ ತಮ್ಮನ್ನು ಕಾಪಾಡಬೇಕೆಂದು ಬೇಡಿಕೊಂಡರು. ಆ ಸತ್ಯವಂತನು ಅವರನ್ನು ಒಂದು ನೆಲಮಾಳಿಗೆಯಲ್ಲಿ ಹಾಕಿ ಭದ್ರಪಡಿಸಿದನು. ಅಷ್ಟು ಹೊತ್ತಿಗೆ ಆ ರಾಕ್ಷಸರು ಮನುಷ್ಯರ ವೇಷವನ್ನು ತಾಳಿ "ನಮ್ಮ ಮಕ್ಕಳನ್ನು ನೋಡಿದೆ ಯೇನಪ್ಪಾ, ರಾಜಕುಮಾರರ ಹಾಗೆ ಇದ್ದಾರೆ" ಎಂದು ಆ ಸುಣ್ಣಮಾರುವವನ ಹತ್ತಿರಕ್ಕೆ ಬಂದು ಗೋಳಾಡಿದರು. ಊರಿನ ಮುಂದೆ ಒಂದು ಇಳಿಯುವ ಭಾವಿ ಯಿತ್ತು, ಸುಣ್ಣಮಾರುವವನು ಆ ಮಾಯಾವಿಗಳ ಗುಟ್ಟನ್ನು ಅರಿತುಕೊಂಡು, ಭಾವಿಯ ಕಡೆ ಕೈತೋರಿಸುತ್ತಾ "ಈಗ ಇಬ್ಬರು ಹುಡುಗರು ಆ ಭಾವಿಗೆ ನೀರು ಕುಡಿಯಲು ಹೋದರು" ಎಂದು ಹೇಳಿದ. ಕೂಡಲೆ ಆ ರಾಕ್ಷಸಿಗಳು ಅಲ್ಲಿಗೆ ಹೋಗಿ ಆ ಭಾವಿಯನ್ನೆಲ್ಲಾ ಹುಡುಕಿದರು. ಸುಣ್ಣಮಾರುವವನು ಜಾಗ್ರತೆ

ತನ್ನ ಸುಣ್ಣವನ್ನೆಲ್ಲಾ ಕತ್ತೆಗಳ ಮೇಲೆ ಹೇರಿಕೊಂಡು ಭಾವಿಯ ಹತ್ತಿರಕ್ಕೆ ಹೋಗಿ ಅದನ್ನೆಲ್ಲಾ ಭಾವಿಯಲ್ಲಿ ಸುರಿದನು. ರಾಕ್ಷಸಿಗಳು ಅಲ್ಲಿಯೇ ಬೆಂದು ಹೋದರು.

ಸುಣ್ಣಮಾರುವವನು ಸಂತೋಷದಿಂದ ಈ ಎಲ್ಲ ಸುದ್ದಿಯನ್ನು ರಾಜ ಕುಮಾರನಿಗೂ ಕುಮಾರಿಗೂ ತಿಳಿಸಿದನು. ಅವರು ಸಂತೋಷಪಟ್ಟು ತಮ್ಮ ಮೈ ಮೇಲಿದ್ದ ಒಡವೆಗಳನ್ನೆಲ್ಲಾ ಅವನಿಗೆ ಕೊಟ್ಟುಬಿಟ್ಟರು. ಆ ರಾತ್ರಿ ಅಲ್ಲಿ ತಂಗಿದ್ದು, ಬೆಳಗ್ಗೆ ಸ್ವಲ್ಪ ತಿಂಡಿಯನ್ನು ತಿಂದು ಮುಂದೆ ನಡೆದರು.

ಮುಂದೆ ಹೋಗುತ್ತಿರುವಾಗ ದಾರಿಯಲ್ಲಿ ಒಂದು ಕೈಮರ ಬಂದಿತು. ಅದರಲ್ಲಿ 'ಇಬ್ಬರೂ ಒಂದೇ ಕಡೆಗೆ ಹೋದರೆ ಅಪಾಯ' ಎಂದು ಬರೆದಿತ್ತು. ಅದನ್ನು ಓದಿ ಅವರಿಬ್ಬರೂ ಬಹಳವಾಗಿ ದುಃಖಿಸಿದರು. ಕೊನೆಗೆ ಸಮಾಧಾನ ಹೊಂದಿ, ಅಣ್ಣ ಒಂದು ಕಡೆ, ತಂಗಿ ಒಂದು ಕಡೆ ಹೋಗಬೇಕೆಂದು ನಿರ್ಧರಿಸಿ ಕೊಂಡರು. 'ಒಂದಾನೊಂದು ಕಾಲಕ್ಕಾದರೂ ನಾವು ಬದುಕಿದ್ದರೆ ಮತ್ತೆ ಕಲೆಯಬಹುದು' ಎಂದು ಗುರುತಿಗೋಸ್ಕರ ಹುಣಿಸೆಯ ಬೀಜವನ್ನು ತಂಗಿಯೂ ಜಾಲಿಯ ಬೀಜವನ್ನು ಅಣ್ಣನೂ ತಮ್ಮ ತಮ್ಮ ದಾರಿಯಲ್ಲಿ ನೆಟ್ಟುಕೊಂಡು ಹೊರಟರು. ಅವರು ಹೊರಡುವುದಕ್ಕೆ ಮುಂಚೆ ತಮ್ಮ ತಮ್ಮ ಹೆಸರುಗಳ ಮುದ್ರೆಯುಂಗುರಗಳನ್ನು ಬದಲಾಯಿಸಿಕೊಂಡರು.

ಸೂಕ್ಷ್ಮಮತಿಯು ತಂದಿದ್ದ ಜಾಲಿಯ ಬೀಜಗಳು ಮುಗಿಯುವ ಹೊತ್ತಿಗೆ ಒಂದು ಪಟ್ಟಣದ ಹೆಬ್ಬಾಗಿಲಿಗೆ ಬಂದು ಸೇರಿದ. ಊರು ನೋಡುವುದಕ್ಕೆ ಬಹಳ ಚೆನ್ನಾಗಿತ್ತು. ಎಲ್ಲಿ ನೋಡಿದರೂ ಜನಗಳು ಉತ್ಸಾಹದಿಂದ ಓಡಾಡು ತ್ತಿದ್ದರು.

ಆ ಊರಿನ ರಾಜ ಸತ್ತುಹೋಗಿದ್ದರಿಂದ ಪಟ್ಟದ ಆನೆಯ ಕೈಗೆ ಹೂ ಮಾಲೆಯನ್ನು ಕೊಟ್ಟು, ಅದು ಯಾರ ಕೊರಳಿಗೆ ಹಾಕುತ್ತದೆಯೋ ಅವರೇ ರಾಜ ಎಂದು ಏರ್ಪಾಟು ಮಾಡಿದ್ದರು. ಅದೇ ಪ್ರಕಾರ ಆನೆಯ ಕೈಗೆ ಮಾಲೆ ಯನ್ನು ಕೊಟ್ಟು, ಅದು ಯಾರ ಕೊರಳಿಗೆ ಹಾಕುತ್ತದೆಯೋ ಎಂದು ಜನ ಅದನ್ನು ಹಿಂಬಾಲಿಸಿ ಬರುತ್ತಿದ್ದರು. ಆನೆಯು ನೇರವಾಗಿ ಊರು ಬಾಗಿಲಿಗೆ ಬಂದು ಸೂಕ್ಷ್ಮಮತಿಯ ಕೊರಳಿಗೆ ಮಾಲೆಯನ್ನು ಹಾಕಿ, ತನ್ನ ಹೆಗಲಮೇಲೆ ಕೂಡಿಸಿಕೊಂಡು ಅರಮನೆಯ ಕಡೆ ಹೊರಟಿತು. ಅದನ್ನು ನೋಡಿ ಎಲ್ಲರೂ

ಆಶ್ಚರ್ಯಪಟ್ಟರು. ಕೊನೆಗೆ ಸೂಕ್ಷ್ಮಮತಿಯ ವೃತ್ತಾಂತವೆಲ್ಲಾ ತಿಳಿದ ಮೇಲೆ ಸಂತೋಷಪಟ್ಟರು. ಅವನಿಗೆ ಪಟ್ಟವನ್ನು ಕಟ್ಟಿ ಅಲ್ಲಿನ ರಾಜಕುಮಾರಿಯನ್ನು ಕೊಟ್ಟು ಲಗ್ನಮಾಡಿದರು.

ಇತ್ತ ಕಡೆ ನವಿಲುಚಿತ್ರಾಂಗಿ ಬರುತ್ತಿರುವಾಗ ಆಕೆಯ ಹುಣಿಸೆಯ ಬೀಜಗಳು ಒಂದು ವನದ ಹತ್ತಿರಕ್ಕೆ ಬರುವ ವೇಳೆಗೆ ಮುಗಿದುಹೋದುವು. ಅಲ್ಲಿಯೇ ಆಕೆ ಯೋಚನೆ ಮಾಡುತ್ತ ಕುಳಿತಿರಲು ಅಲ್ಲಿಗೆ ಒಬ್ಬ ರಾಜ ಕುಮಾರನು ತನ್ನ ಸ್ನೇಹಿತರೊಡನೆ ಬೇಟೆಯಾಡುವುದಕ್ಕೆ ಬಂದು, ವನದಲ್ಲಿದ್ದ ನವಿಲುಚಿತ್ರಾಂಗಿಯನ್ನು ನೋಡಿ ಆಕ್ಷಣವೇ ಆಕೆಯಲ್ಲಿ ಅನುರಕ್ತನಾದ. ತನ್ನ ಪರಿವಾರದವರನ್ನು ಆಕೆಯ ಹತ್ತಿರಕ್ಕೆ ಕಳುಹಿಸಿ, ಆಕೆಯ ಎಲ್ಲ ವಿಚಾರಗಳನ್ನೂ ತಿಳಿದುಕೊಂಡು, ತನ್ನ ತಂದೆಯ ಅಪ್ಪಣೆಯಂತೆ ಕೆಲವೇ ದಿನಗಳಲ್ಲಿ ಆಕೆಯನ್ನು ಲಗ್ನವಾದ. ಹೀಗೆ ಅಣ್ಣತಂಗಿಯರು ಒಬ್ಬೊಬ್ಬರು ಒಂದೊಂದು ಕಡೆ ಸುಖ ವಾಗಿ ಸೇರಿಕೊಂಡರು.

ನವಿಲುಚಿತ್ರಾಂಗಿಯ ಹೊಟ್ಟೆಯಲ್ಲಿ ರತ್ನಕೀರ್ತಿಯೆಂಬ ಮಗನೂ, ಸೂಕ್ಷ್ಮಮತಿಗೆ ಪದ್ಮಾವತಿಯೆಂಬ ಮಗಳೂ ಜನಿಸಿದರು. ಅವರವರು ಅವರವರ ಯೋಗ್ಯತೆಗೆ ಅನುಸಾರವಾಗಿ ತಮ್ಮ ಮಕ್ಕಳಿಗೆ ವಿದ್ಯಾಬುದ್ಧಿಯನ್ನು ಕಲಿಸಿದರು. ಇಬ್ಬರೂ ಪ್ರಾಪ್ತವಯಸ್ಕರಾಗಿ ಲಗ್ನಯೋಗ್ಯರಾಗಿದ್ದರು. ಇಷ್ಟು ದಿನಗಳು ಕಳೆದಾಗ್ಯೂ ಅಣ್ಣನ ಸಮಾಚಾರ ತಂಗಿಗೂ, ತಂಗಿಯ ಸಮಾಚಾರ ಅಣ್ಣನಿಗೂ ಗೊತ್ತಾಗಿರಲಿಲ್ಲ.

ಹೀಗಿರಲು, ಯಾವುದೋ ಕಾಯಿಲೆಯಿಂದ ರತ್ನಕೀರ್ತಿಯ ತಂದೆ ತೀರಿ ಕೊಂಡನು. ಇದರಿಂದ ಊರಿನ ಜನಗಳಿಗೂ, ರಾಣಿಗೂ, ಮಗಳಿಗೂ ವಿಶೇಷ ವಾಗಿ ದುಃಖವಾಯಿತು. ಕೊನೆಗೆ ಏನುಮಾಡಲೂ ತೋಚದೆ ಸಂಪ್ರದಾಯದ ಪ್ರಕಾರ ರತ್ನಕೀರ್ತಿಯೇ ಪಟ್ಟವನ್ನು ಕಟ್ಟಿಕೊಂಡನು. ಸಿಂಹಾಸನದ ಮೇಲೆ ಕೂಡುವವನು ತನ್ನ ಪತ್ನೀಸಮೇತ ಕೂಡಬೇಕೆಂದು ಆಗಿನ ಕಾಲದಲ್ಲಿ ಒಂದು ಪದ್ಧತಿ ಜಾರಿಯಲ್ಲಿತ್ತು. ಆ ಕಾರಣದಿಂದ ರತ್ನಕೀರ್ತಿ ಲಗ್ನಮಾಡಿಕೊಳ್ಳಲೇ ಬೇಕಾಯಿತು. ಇಷ್ಟು ಹೊತ್ತಿಗೆ ನವಿಲುಚಿತ್ರಾಂಗಿ ತನ್ನ ಅಣ್ಣನ ನೆನಪನ್ನು ಮಾಡಿಕೊಂಡು, ತಮ್ಮ ಹಿಂದಿನ ವೃತ್ತಾಂತವನ್ನೆಲ್ಲಾ ಮಗನಿಗೆ ತಿಳಿಸಿದಳು. "ಹುಣಿಸೆ ಮರಗಳ ಸಾಲನ್ನು ಹಿಡಿದು ಹೋದರೆ ಮುಂದೆ ಜಾಲಿ ಮರಗಳ

ಸಾಲು ಬರುತ್ತದೆ; ಅದರಂತೆಯೇ, ಅದೇ ಮಾರ್ಗವಾಗಿ ಹೋದರೆ ನಿಮ್ಮ ಮಾವನು ಹೋದ ಜಾಗಕ್ಕೆ ಹೋಗುತ್ತೀಯೆ" ಎಂದು ದಾರಿಯನ್ನು ಹೇಳಿ ಕೊಟ್ಟಳು. ಅದೆಲ್ಲವನ್ನೂ ತಿಳಿದುಕೊಂಡು ರತ್ನಕೀರ್ತಿ ತನ್ನ ಮಾವನನ್ನು ನೋಡಿಬರಲು ಹೊರಟ. ಅವನು ಹೊರಡುವಾಗ್ಯೆ, ಹಿಂದೆ ತಾವು ಬದಲಾಯಿಸಿ ಕೊಂಡಿದ್ದ ಮುದ್ರೆಯುಂಗುರವನ್ನು ನೆನಪಿಗಾಗಿ ಕೊಟ್ಟು, ನನ್ನ ಸೊಸೆ ಹುಟ್ಟಿದ್ದರೆ ಅವಳನ್ನು ಜೊತೆಯಲ್ಲಿಯೇ ಕರೆದುಕೊಂಡು ಬಾ ಎಂದು ಹರಸಿದಳು.

ರತ್ನಕೀರ್ತಿ ತನ್ನ ತಾಯಿ ಹೇಳಿದ ಮಾರ್ಗವಾಗಿಯೇ ಹೋಗಿ ತನ್ನ ಮಾವನ ಊರನ್ನು ಸೇರಿದ. ಅದೇ ಊರಿಗೆ ಜಾಲಿಯ ಮರಗಳು ಕೊನೆಯಾಗಿದ್ದುವು. ಅದೇ ತನ್ನ ಮಾವನ ಊರು ಎಂಬುದು ಅವನಿಗೇನು ಗೊತ್ತು? ಹಿಂದೆ ತನ್ನ ಮಾವನು ಕುಳಿತ ಜಾಗದಲ್ಲಿಯೇ ಕುಳಿತುಕೊಂಡನು. ಅವನು ಕುಳಿತಿದ್ದ ಜಾಗದಲ್ಲಿ ಅಂದರೆ ಊರು ಮುಂದೆ ಒಂದು ಇಳಿಯುವ ಭಾವಿಯಿದ್ದಿತು. ಊರಿಗೆಲ್ಲಾ ಅದೊಂದೇ ಭಾವಿ. ರಾಜನ ಮನೆಯ ದಾಸಿಯರು ಅಲ್ಲಿಗೆ ನೀರಿಗೆ ಬಂದಿದ್ದರು. "ಸಾಕಮ್ಮಾ ಸಾಕು, ಈ ಪದ್ಮಾವತಿಯ ಸ್ನಾನಕ್ಕೆ ನೀರು ಹೊರಲು ಸಾಧ್ಯವೇ ಇಲ್ಲ. ಎಷ್ಟು ಹಂಡೆಗಟ್ಟಲೆ ಕಾಯಿಸಿದರೂ ಸಾಲದು" ಎಂದು ಅವರವರಲ್ಲೇ ಗೊಣಗುತ್ತಿದ್ದರು. ಈ ಪದ್ಮಾವತಿ ಯಾರು? ನಮ್ಮ ಮಾವನು ಇಲ್ಲಿಯೇ ಇರಬಹುದೆ? ಇವರನ್ನು ವಿಚಾರ ಮಾಡೋಣವೇ?—ಎಂದು ರತ್ನಕೀರ್ತಿ ಯೋಚನೆ ಮಾಡುತ್ತಿದ್ದ. ಅಷ್ಟರಲ್ಲಿ ಅವರಲ್ಲೊಬ್ಬಾಕೆ ಅವನನ್ನು ಕೈಸನ್ನೆಮಾಡಿ ಕರೆದಳು. ಏನಿರಬಹುದೆಂದು ರತ್ನಕೀರ್ತಿ ಹತ್ತಿರಕ್ಕೆ ಹೋದ. ಆಕೆ "ಈ ಕೊಡವನ್ನು ಸ್ವಲ್ಪ ಎತ್ತಿಕೊಡಪ್ಪ" ಎಂದಳು. ರತ್ನಕೀರ್ತಿ ಇದೇ ಸಮಯ ಅಂದುಕೊಂಡು "ಯಾರಿಗೆ ಈ ನೀರು?" ಎಂದು ಕೇಳಿದ. "ಈ ಊರಿನ ಮಹಾರಾಜ ಸೂಕ್ಷ್ಮಮತಿ ಇದ್ದಾನಲ್ಲಾ, ಆತನ ಮಗಳು ಪದ್ಮಾವತಿಗೆ. ನಮಗಂತೂ ನೀರು ಹೊತ್ತು ಹೊತ್ತು ಸಾಕಾಗಿಹೋಗಿದೆ" ಎಂದು ಹೇಳಿದರು.

ರತ್ನಕೀರ್ತಿಗೆ ಅದನ್ನು ಕೇಳಿ ಬಹಳ ಸಂತೋಷವಾಯಿತು. ಕಾರಣ: ತನ್ನ ಮಾವನನ್ನು ಅವನು ನೋಡಿರಲಿಲ್ಲವಾದರೂ ಆತನ ಹೆಸರನ್ನು ತನ್ನ ತಾಯಿಯಿಂದ ತಿಳಿದುಕೊಂಡಿದ್ದ. ಕೂಡಲೆ ಕೊಡವನ್ನು ಹೊರಿಸಿ, ತನ್ನ ಕೈಲಿದ್ದ ಮುದ್ರೆಯುಂಗುರವನ್ನು ಅದರಲ್ಲಿ ಹಾಕಿದ. ಅದು ಶಬ್ದಮಾಡಲು, ಆ ದಾಸಿ

"ಏನಪ್ಪಾ, ಕೊಡದಲ್ಲಿ ನೀನು ಕಲ್ಲುಮಣ್ಣು ಹಾಕಿದ ಹಾಗಾಯಿತಲ್ಲ? ನಮ್ಮ ರಾಜಕುಮಾರಿ ಸುಮ್ಮನೆ ಬಿಡುವುದಿಲ್ಲ. ಏನು ಮಾಡಿದೆ, ಹೇಳು" ಎಂದಳು. "ಏನೂ ಇಲ್ಲ, ನನ್ನ ಕೈಲಿದ್ದ ಉಂಗುರ ಅದಕ್ಕೆ ತಾಕಿತು" ಎಂದು ತನ್ನ ಬೆರಳಿನಲ್ಲಿದ್ದ ಮತ್ತೊಂದು ಉಂಗುರವನ್ನು ತೋರಿಸಿದ.

ದಾಸಿ ಅರಮನೆಗೆ ಹೋಗಿ ನೀರನ್ನು ಹಂಡೆಗೆ ಸುರಿದ ತತ್‌ಕ್ಷಣವೇ ಅದು ಶಬ್ದ ಮಾಡಿತು. "ಏನೆ ಅದು, ಕಲ್ಲುಮಣ್ಣನ್ನೆಲ್ಲಾ ತಂದು ಹಾಕುತ್ತೀರಾ?" ಎಂದು ಸ್ನಾನಮಾಡಲು ಬಂದಿದ್ದ ರಾಜಕುಮಾರಿ ದಾಸಿಯನ್ನು ಹೊಡೆದಳು. ಹಾಗೆಯೇ ಹಂಡೆಗೆ ಕೈಹಾಕಿನೋಡಿದಳು; ಕೈಗೆ ಉಂಗುರ ಸಿಕ್ಕಿತು. ನೋಡುವುದಕ್ಕೆ ಬಹಳ ಚೆನ್ನಾಗಿತ್ತು, ಅದರಲ್ಲಿ ತನ್ನ ತಂದೆಯ ಹೆಸರನ್ನು ನೋಡಿ ಆಶ್ಚರ್ಯಪಟ್ಟಳು. ರಾಜಕುಮಾರಿ ನಡೆದ ಎಲ್ಲಾ ವಿಚಾರವನ್ನೂ ದಾಸಿಯಿಂದ ತಿಳಿದುಕೊಂಡು ತನ್ನ ತಂದೆಗೆ ತಿಳಿಸಿದಳು. "ಯಾರೋ ಊರಿನ ಹೊರಗೆ ಇದ್ದಾನಂತೆ, ನೋಡಲು ರಾಜಕುಮಾರನ ಹಾಗೆ ಕಾಣುತ್ತಾನಂತೆ" ಎಂದು ಎಲ್ಲವನ್ನೂ ತಂದೆಯ ಸಂಗಡ ತಿಳಿಸಿದಳು. ರಾಜನು ಭಟರನ್ನು ಕಳುಹಿಸಿ ಕೂಡಲೆ ಕರೆಸಿದ. ರತ್ನಕೀರ್ತಿಯಿಂದ ಎಲ್ಲ ಸಮಾಚಾರ ತಿಳಿದ ಮೇಲೆ ಸಂತೋಷದಿಂದ ತನ್ನ ಅಳಿಯನನ್ನು ಬಾಚಿ ತಬ್ಬಿಕೊಂಡ. ತನ್ನ ತಂಗಿಯ ಯೋಗಕ್ಷೇಮವನ್ನು ಪುನಃ ಪುನಃ ಕೇಳಿದ. ಹಾಗೆಯೇ ತನ್ನ ಭಾವಮೈದುನನ ಮೃತ್ಯುವಾರ್ತೆಯನ್ನು ಕೇಳಿ ದುಃಖಪಟ್ಟ. ಮರೆಯಲ್ಲಿಯೇ ನಿಂತುಕೊಂಡು ಪದ್ಮಾವತಿ ಎಲ್ಲವನ್ನೂ ಕೇಳಿದಳು. ಒಂದೆರಡು ಬಾರಿ ಕದ್ದು ರತ್ನಕೀರ್ತಿಯನ್ನು ನೋಡಿದಳು. ಅವನ ಸೌಂದರ್ಯ ಅವಳಲ್ಲಿ ಮೋಹವನ್ನುಂಟುಮಾಡಿತು. ಅವನನ್ನೇ ಲಗ್ನವಾಗಬೇಕೆಂದು ನಿಷ್ಕರ್ಷಿಸಿದಳು.

ಅಳಿಯ ಬಂದಿದ್ದನೆಂದು ವಿಶೇಷ ಭೋಜನಗಳಾದುವು. ಊಟ ಮುಗಿದ ಮೇಲೆ ಸೂಕ್ಷ್ಮಮತಿಯು ಅಳಿಯನನ್ನು ಕುರಿತು "ನಿನ್ನನ್ನು ನೋಡಿ ಬಹಳ ಸಂತೋಷವಾಯಿತು, ಪದ್ಮಾವತಿ ಕೂಡ ನಿನ್ನ ಹಾಗೆ ಬೆಳೆದು ದೊಡ್ಡವಳಾಗಿದ್ದಾಳೆ. ಅವಳನ್ನೂ ಜೊತೆಯಲ್ಲಿಯೇ ಕರೆದುಕೊಂಡು ಹೋಗು, ಲಗ್ನ ಮಾಡಿಕೊಡುತ್ತೇನೆ" ಎಂದು ನುಡಿದ. ಇದರಿಂದ ಸಂತೋಷವೂ, ಪದ್ಮಾವತಿಯನ್ನು ನೋಡುವ ಕುತೂಹಲವೂ ರತ್ನಕೀರ್ತಿಗೆ ಲಭಿಸಿದುವು. ಈ ವಿಷಯ ಪದ್ಮಾವತಿಗೂ ತಿಳಿದು ಆನಂದವಾಯಿತು.

ನಾಚಿಕೆಯಿಂದ ಪದ್ಮಾವತಿ ಮೊದಲಿನ ಹಾಗೆ ಹೊರಗಡೆ ಓಡಾಡುತ್ತಿರಲಿಲ್ಲ. ರತ್ನಕೀರ್ತಿ ಕೂಡ ನಾಚಿಕೆಯಿಂದ ಅಂತಃಪುರಕ್ಕೆ ಹೋಗುವ ಧೈರ್ಯಮಾಡಿರಲಿಲ್ಲ. ಹೀಗೇ ಎಂಟು ದಿನಗಳು ಕಳೆದುಹೋದುವು. ಕೊನೆಗೆ ಒಂದು ದಿನ ಪದ್ಮಾವತಿಯನ್ನು ನೋಡಬೇಕೆಂದು ಎಲ್ಲರೂ ಮಲಗಿದ ಮೇಲೆ ರತ್ನಕೀರ್ತಿ ಅಂತಃಪುರದ ಕಡೆಗೆ ಹೊರಟ. ಬಾಗಿಲನ್ನು ಸಮೀಪಿಸುತ್ತಿದ್ದ ಹಾಗೆಯೇ ಒಂದು ನಾಗರ ಹಾವು ಬಂದು ಅವನನ್ನು ಕಚ್ಚಿತು. "ಅಮ್ಮಾ!" ಎಂದು ಕೂಗಿ ಅಲ್ಲಿಯೇ ಬಿದ್ದು ಪ್ರಾಣಬಿಟ್ಟ. ಅವನ ಕೂಗಿನಿಂದ ಎಲ್ಲರೂ ಎಚ್ಚರವಾಗಿ ಅಲ್ಲಿಗೆ ಓಡಿಬಂದರು. ರಾಜನಂತೂ ಬಹಳವಾಗಿ ದುಃಖಪಟ್ಟ. "ನನ್ನನ್ನು ನೋಡಲು ಬಂದಿದ್ದನೆಂದು ಕಾಣುತ್ತದೆ, ಎಂತಹ ಆಪತ್ತು ಬಂದು ಒದಗಿತು? ನಾನು ಒಂದು ಸಲವಾದರೂ ಮುಖವನ್ನು ತೋರಿಸಲಿಲ್ಲ. ಎಂತಹ ಪಾಪಿಷ್ಠೆ" ಎಂದು ಪದ್ಮಾವತಿ ಮರುಗಿದಳು. "ಹೀಗೆ ಯೋಚನೆ ಮಾಡಿದರೆ ಸರಿಯಲ್ಲ, ನಾನು ಈ ಶವವನ್ನು ಅತ್ತೆಯವರ ಹತ್ತಿರಕ್ಕೆ ತೆಗೆದುಕೊಂಡು ಹೋಗುತ್ತೇನೆ. ನನಗೆ ಆಕಾಶದಲ್ಲಿ ಹಾರಬಲ್ಲ ಒಂದು ಮೇನವನ್ನೂ, ನನ್ನ ಶರೀರವೆಲ್ಲಾ ಮುಚ್ಚಿ, ಕಣ್ಣು ಮಾತ್ರ ಕಾಣುವ ಒಂದು ಮರದ ಗೌನನ್ನೂ ಮಾಡಿಸಿಕೊಡಿ" ಎಂದು ಪದ್ಮಾವತಿ ತಂದೆಯನ್ನು ಕೇಳಿದಳು.

ರಾಜನಿಗೇನು ಕಡಮೆ? ಎಲ್ಲವನ್ನೂ ಕ್ಷಣಾರ್ಧದಲ್ಲಿ ಮಾಡಿಸಿಕೊಟ್ಟ. ಪದ್ಮಾವತಿ ತನ್ನ ತಂದೆ ಹೇಳಿದ ಗುರುತಿನಂತೆ, ಶವವನ್ನು ಮೇನದಲ್ಲಿಟ್ಟುಕೊಂಡು ಹೊರಟಳು. ದಾರಿಯಲ್ಲಿ ಪಾರ್ವತೀ ಪರಮೇಶ್ವರರ ಕೃಪೆಯಿಂದ ಗಂಡನನ್ನು ಬದುಕಿಸಿಕೊಂಡಳು. ರತ್ನಕೀರ್ತಿ ಎಲ್ಲ ವಿಷಯವನ್ನೂ ಅವಳಿಂದ ತಿಳಿದುಕೊಂಡ. ಹಾಗೆಯೇ ಕಟ್ಟಿಗೆಯಂತಹ ಮೈಯುಳ್ಳ ತನ್ನ ಸೊಸೆಯನ್ನು ನೋಡಿ ಅಸಹ್ಯಪಟ್ಟ. 'ನೀನು ಖಂಡಿತ ನಮ್ಮ ಮನೆಗೆ ಬರಬೇಡ, ಇದೇ ಮೇನದಲ್ಲಿಯೇ ಹಿಂದಿರುಗು' ಎಂದು ಪದ್ಮಾವತಿಗೆ ಹೇಳಿದ. ಎಷ್ಟು ಹೇಳಿದರೂ ಕೇಳದೆ ಊರ ಮುಂದೆ ಮೇನವನ್ನು ಇಳಿಸಿ, ಅವಳು ರತ್ನಕೀರ್ತಿಯನ್ನು ಹಿಂಬಾಲಿಸಿ ಮನೆಗೆ ಹೋದಳು. ರತ್ನಕೀರ್ತಿ ನಡೆದ ಎಲ್ಲ ವಿಚಾರವನ್ನೂ ತಾಯಿಗೆ ತಿಳಿಸಿದ. ಅತ್ತೆಗೆ ಎಷ್ಟಾದರೂ ಕನಿಕರ. ಏನಾಗಿದ್ದಾಳಪ್ಪ, ಚೆನ್ನಾಗಿಯೇ ಇದ್ದಾಳೆ, ಎಂದು ಸೊಸೆಯನ್ನು ಆದರಿಸಿದಳು. ರತ್ನಕೀರ್ತಿಗಂತೂ ಅವಳನ್ನು ಕಂಡರೆ ಸೇರುತ್ತಿರಲಿಲ್ಲ.

ಹೀಗೆಯೇ ಎಷ್ಟು ದಿನ ಇರಲು ಸಾಧ್ಯ? ರತ್ನಕೀರ್ತಿ ನೆರೆಯ ಪಟ್ಟಣದ ರಾಜಕುಮಾರಿಯನ್ನು ಲಗ್ನವಾಗಲು ನಿಶ್ಚಯಿಸಿದ. ಈ ವಿಷಯ ಹೇಗೋ ಮರಗೋಪಿಗೆ (ಪದ್ಮಾವತಿಯನ್ನು ರತ್ನಕೀರ್ತಿ ಈ ಹೆಸರಿನಿಂದ ಕರೆಯುತ್ತಿದ್ದ) ತಿಳಿಯಿತು. "ಈ ಮೂಢ ಮಾವನಿಗೆ ನನ್ನ ಗುಟ್ಟು ತಿಳಿಯದೆ ಇಂತಹ ಕೆಲಸ ಮಾಡುತ್ತಿದ್ದಾನಲ್ಲ" ಎಂದು ಮರುಗಿದಳು. ಮರುದಿನ ಊರ ಹೊರಗೆ ಯಾರಿಗೂ ಕಾಣದಂತೆ ಮರದ ಗೌನನ್ನು ಬಿಚ್ಚಿಟ್ಟು ತುಪ್ಪ ಮಾರುವ ನೆಪದಿಂದ ನೆರೆಯ ಪಟ್ಟಣದ ರಾಜನ ಮನೆಯನ್ನು ಸೇರಿದಳು. ಅವರು ಈಕೆಯ ಕೂದಲನ್ನು ನೋಡಿ, ತುಪ್ಪಕೊಳ್ಳುವ ಸುದ್ದಿಯನ್ನು ಮರೆತರು. "ಅಮ್ಮ, ನಮ್ಮ ಕುಮಾರಿಯನ್ನು ರತ್ನಕೀರ್ತಿಗೆ ಕೊಡಬೇಕೆಂದಿದ್ದೇವೆ. ನಮ್ಮ ಹುಡುಗಿಗೆ ಕೂದಲೇ ಬೆಳೆದಿಲ್ಲ; ಏನು ಮಾಡೋಣ? ನಿನ್ನ ಕೂದಲನ್ನು ಹೇಗೆ ಬೆಳೆಸಿಕೊಂಡೆ ತಿಳಿಸು" ಎಂದರು. ಪದ್ಮಾವತಿ ಇದೇ ಸಮಯ ಎಂದು "ಏನೂ ಇಲ್ಲ; ಮೊದಲು ತಲೆಯನ್ನೆಲ್ಲಾ ಬೋಳಿಸಿಬಿಡಿ, ಆಮೇಲೆ ಕಳ್ಳಿಹಾಲು ಬುಡದ ಮಣ್ಣು ತಲೆಗೆ ಕಟ್ಟಿ ಬಿಸಿ ಬಿಸಿ ನೀರು ಹಾಕಿ ಮಲಗಿಸಿ" ಎಂದು ಹೇಳಿ ಹಿಂತಿರುಗಿ ಮರದ ಗೌನನ್ನು ಹಾಕಿಕೊಂಡು ಮನೆ ಸೇರಿದಳು. ಮರುದಿನವೇ ಆ ಹುಡುಗಿ ಸತ್ತುಹೋದಳೆಂದು ರತ್ನಕೀರ್ತಿಗೆ ವರ್ತಮಾನ ಬಂತು. ಮೊದಲನೆ ಬಾರಿಯೇ ಹೀಗೆ ಅಪಶಕುನವಾಯಿತಲ್ಲಾ ಎಂದು ರತ್ನಕೀರ್ತಿ ದುಃಖಿಸಿದ. ಆದರೆ ಇದರಿಂದ ಸಂತೋಷಪಟ್ಟವಳು ಮರಗೋಪಿ ಮಾತ್ರ.

ಮತ್ತೊಂದು ತಿಂಗಳನಂತರ ರತ್ನಕೀರ್ತಿ ತಿರುಗಿ ಲಗ್ನದ ಏರ್ಪಾಟು ಮಾಡಿ, ಹನ್ನೆರಡು ಗಾವುದ ದೂರದ ರಾಜನ ಮಗಳನ್ನು ನಿಶ್ಚಯಮಾಡಿಕೊಂಡು ಬಂದ. ಹಿಂದಿನ ಸಾರಿ ಮಾಡಿದಂತೆ ಈ ಸಾರಿ ಮಾಡಲು ಮರಗೋಪಿಗೆ ಅನುಕೂಲವಾಗಲಿಲ್ಲ. ಅಂತೂ ಇಂತೂ ಲಗ್ನವಾಗಿ ಹೊಸ ಹೆಂಡತಿ ಮನೆಗೆ ಬಂದಳು. ಒಂದು ತಿಂಗಳು ಸುಖವಾಗಿ ಕಾಲ ಕಳೆಯಿತು. ಪದ್ಮಾವತಿಯು ತನ್ನ ಮರದ ಕೈಗೆ ಬರೆಯನ್ನು ಹಾಕಿಕೊಳ್ಳುವುದು, ಮರದ ಗೌನಿನ ಮೇಲೆ ಅನ್ನದ ಗಂಜಿಯನ್ನು ಸುರಿದುಕೊಳ್ಳುವುದು ಹೀಗೆ ಮಾಡುತ್ತಿದ್ದಳು. ಹೊಸದಾಗಿ ಬಂದ ರಾಜಕುಮಾರಿಯನ್ನು ಕುರಿತು, "ನೋಡು, ನಾನು ಹೀಗೆಲ್ಲಾ ಮಾಡಿಕೊಳ್ಳುತ್ತೇನೆ! ನನಗೇನೂ ಆಗುವುದಿಲ್ಲ. ನೀನೂ ಹೀಗೇ ಮಾಡು" ಎಂದು ಬಲವಂತಮಾಡಿ ಕುದಿಯುವ ಅನ್ನದ ಗಂಜಿಯನ್ನು

ಪದ್ಮಾವತಿ ಅವಳ ಮೇಲೆ ಸುರಿದಳು. ಕೂಡಲೆ ಮೈಯೆಲ್ಲಾ ಬೊಬ್ಬೆ ಬಂದು ಅವಳು ಸತ್ತುಹೋದಳು. ಹೀಗೆ ಮಾಡಿದವಳು ಮರಗೋಪಿಯೆಂದು ಯಾರಿಗೂ ಗೊತ್ತಾಗಲಿಲ್ಲ.

ರತ್ನಕೀರ್ತಿಗೂ ಅವನ ತಾಯಿಗೂ ಹೇಳಲಾರದಷ್ಟು ದುಃಖವಾಯಿತು. ಹೀಗಿರುವಾಗ್ಯೆ ಆ ಊರಿಗೆ ಡೊಂಬರು ಆಡುವುದಕ್ಕೆ ಬಂದರು. ಅವರ ಕೋರಿಕೆಯಂತೆ ರಾಜನು ಮರಗೋಪಿಯನ್ನು ಮಾತ್ರ ಮನೆಯಲ್ಲಿ ಬಿಟ್ಟು ಬೀಗ ಹಾಕಿಕೊಂಡು ತನ್ನ ತಾಯಿಯೊಡನೆ ಆಟ ನೋಡುವುದಕ್ಕೆ ಹೋದನು. ಡೊಂಬರು ತಮ್ಮ ಆಟವನ್ನು ರಾತ್ರಿಯ ಹೊತ್ತು ಏರ್ಪಡಿಸಿದ್ದರು.

ಇದೇ ಸಮಯ ಎಂದು ಪದ್ಮಾವತಿ ತನ್ನ ಉಡುಪನ್ನು ಬಿಚ್ಚಿಟ್ಟು ಸ್ನಾನ ಮಾಡುತ್ತಿದ್ದಳು. ಅರ್ಧ ಆಟವಾದಾಗ ರತ್ನಕೀರ್ತಿ ಮನೆಯ ಕಡೆ ನೋಡಲು ಬಂದಿದ್ದಾಗ, ಮನೆಯಲ್ಲಿ ಶಬ್ದವಾಗುವುದನ್ನು ಕೇಳಿ, ಗವಾಕ್ಷಿಯಲ್ಲಿ ಇಣಿಕಿ ನೋಡಿದ. ಅವಳ ರೂಪನ್ನು ನೋಡಿ ಮೂರ್ಛೆ ಹೋಗುವಂತಾಯಿತು. ಇಂತಹವಳನ್ನು ಮನೆಯಲ್ಲಿಟ್ಟುಕೊಂಡು ಊರೂರು ತಿರುಗಿದೆನಲ್ಲಾ ಎಂದು ಮರುಗಿದ.

ಮರುದಿನ "ಮರಗೋಪಿಯೇ ಊಟಕ್ಕೆ ನೀಡಬೇಕು. ಅವಳೇ ತಾಂಬೂಲ ತಂದುಕೊಡಬೇಕು" ಎಂದು ತಾಯಿಗೆ ತಿಳಿಸಿದ. ಸೊಸೆಯ ಮೇಲೆ ಈ ದಿನ ಏನೋ ತುಂಬ ಪ್ರೇಮ ಬಂದಿದೆಯಲ್ಲಾ ಎಂದು ತಾಯಿ ಬಹಳ ಸಂತೋಷಪಟ್ಟಳು. ಅದೇ ಪ್ರಕಾರ ನಡೆಯಿತು. ತಾಂಬೂಲವನ್ನು ಕೊಟ್ಟು ಪದ್ಮಾವತಿ ಹಿಂದಿರುಗುತ್ತಿದ್ದಾಗ ರತ್ನಕೀರ್ತಿ ದೊಣ್ಣೆಯಿಂದ ಅವಳನ್ನು ಹೊಡೆದ. ಮರದ ಗೌನು ಒಡೆದುಹೋಗಿ ಪದ್ಮಾವತಿ ಬಯಲಿಗೆ ಬಂದಳು. ನಾಚಿಕೆಯಿಂದ ಒಳಗೆ ಓಡಿಹೋದಳು. ಇದೆಲ್ಲವನ್ನೂ ನೋಡಿ ಸಂತೋಷವೂ ಆಶ್ಚರ್ಯವೂ ತಾಯಿಗೆ ಏಕಕಾಲದಲ್ಲಿ ಉಂಟಾದುವು.

ಮರುದಿನವೇ ಪದ್ಮಾವತಿಗೂ ರತ್ನಕೀರ್ತಿಗೂ ವಿಜೃಂಭಣೆಯಿಂದ ಲಗ್ನವಾಯಿತು. ಆಮೇಲೆ ಎಲ್ಲರೂ ಸುಖವಾಗಿದ್ದರು.

—ಪಿ. ಎಂ. ನಾಗಭೂಷಣಯ್ಯ.

[ಇದು ಚಿತ್ರದುರ್ಗ ಡಿಸ್ಟ್ರಿಕ್ಟಿನ ಅಶೋಕಸಿದ್ದಾಪುರದ ಕಡೆಯದು.]

# ಕ್ಲಾಸಿನಲ್ಲಿ ಕಡಲುಯಾತ್ರೆ

ನೋಡಿ, ನಮ್ಮಲ್ಲಿ ಯಾರಾದರೂ ಒಂದು ಸಾಹಸ ಕಾರ್ಯವನ್ನಾಗಲಿ, ಇಲ್ಲವೆ ನಮ್ಮಿಂದಾಗದೆ ಇರುವ ಕೆಲಸವನ್ನಾಗಲಿ ಮಾಡಿದರೆ 'ನಾವೂ ಆ ಕೆಲಸಾನ ಮಾಡಬೇಕಪ್ಪಾ' ಅಂತ ನಮಗೂ ಅನಿಸೋದು ಸಹಜ. ಯಾಕೆ ಬಂತು ಈ ಮಾತು ಎಂದರೆ—ನಮ್ಮಲ್ಲಿ ಯಾರೋ ಒಬ್ಬರು Foreignಗೆ ಆಗ ತಾನೆ ಹೋಗಿದ್ದರು. ಅವರು ಹೋಗುವಾಗ Bombay portನಲ್ಲಿ ತಾವು ಹತ್ತಿದ ಹಡಗಿನ Photo ನನಗೆ ಕಳಿಸಿದ್ದರು. ನನಗಂತೂ ಆ ಫೋಟೋನ ಎಷ್ಟು ಸಲ ನೋಡಿದರೂ ಮನಸ್ಸು ತೃಪ್ತಿಯಾಗಲೆ ಇಲ್ಲ. ಅದನ್ನು ಒಂದೊಂದು ಸಲ ನೋಡಿದಾಗಲೂ ಒಂದೊಂದು ಹೊಸ ಯೋಚನೆ ಮನಸ್ಸಿನಲ್ಲಿ ಹಾದುಹೋಗುತ್ತಿತ್ತು.

ಸೆಂಟ್ರಲ್ ಕಾಲೇಜಿನ Mathematics Blockಇನ ಮಹಡಿಯ ಮೇಲೆ ಎಡಗಡೆ ಮೂರನೆಯ ಕೊಠಡಿಗೆ ಬರುವ ಹೊತ್ತಿಗೆ 11-30 ಘಂಟೆ ಯಾಗಿತ್ತು. ಕ್ಲಾಸಿನೊಳಗೆ ಹೋಗಿ ಕಿಟಕಿಯ ಪಕ್ಕದ ಸ್ಥಳದಲ್ಲಿ ಕುಳಿತೆ. ಅಧ್ಯಾಪಕರು ಬಂದರು. ನಾನು ಪುಸ್ತಕವನ್ನು ಅಣಿ ಮಾಡಿಕೊಳ್ಳೋಣಾಂತ ಪುಸ್ತಕಾನ ತೆಗೆದರೆ—ಅದರಲ್ಲಿ ಆ photoನೇ ಸಿಕ್ಕಬೇಕೆ! ಆ photoನ ಮನಸ್ಸಿನಲ್ಲಿಟ್ಟುಕೊಂಡು ಕಿಟಕಿಯ ಕಡೆಗೆ ತಿರುಗಿ ನೋಡಿದೆ. ನೀಲಿಯ ಬಣ್ಣಕ್ಕಿದ್ದ ಆಕಾಶವು ಅಲೆಗಳಿಂದ ಕೂಡಿದ ಸಮುದ್ರವಾಯಿತು. ಆ ಸಮುದ್ರದಲ್ಲಿ ನಾನು ಹತ್ತಬೇಕೆಂದಿದ್ದ ಹಡಗು ಪ್ರಯಾಣಕ್ಕೆ ಸಿದ್ಧವಾಯಿತು. ಸ್ನೇಹಿತರನ್ನೂ ಬಂಧು ಬಳಗದವರನ್ನೂ ಬೀಳ್ಕೊಂಡು ನಾನು ಹಡಗನ್ನು ಏರಿದೆ. ಆಗ ಸಂಜೆ 6 ಘಂಟೆ. ವಾತಾವರಣ ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಿತ್ತು. ಹಡಗಿನ ಒಂದು ಭಾಗದಲ್ಲಿ ನಾನು ನಿಂತುಕೊಂಡು ಎಲ್ಲವನ್ನೂ ನೋಡುತ್ತಿದ್ದೆ. ಬಾಯಲ್ಲಿ ಒಂದು ಸಿನಿಮಾ ಹಾಡು ನನ್ನ ಆಜ್ಞೆಯಿಲ್ಲದೆಯೆ ಹೊರಡುತ್ತಿತ್ತು. ಪಶ್ಚಿಮ ದಿಕ್ಕಿಗೆ ನನ್ನ ದೃಷ್ಟಿ ಹೋಯಿತು. ಹೃದಯದಲ್ಲಿದ್ದ ಆನಂದ ಹೊರಚೆಲ್ಲಿತು, ಸೂರ್ಯನು ದಿಗಂತದಲ್ಲಿ ತನ್ನ ದಿನಚರ್ಯೆಯನ್ನು ಮುಗಿಸಿಕೊಂಡು ಮತ್ತೊಂದು ಪ್ರಪಂಚಕ್ಕೆ ಹೋಗುತ್ತಿದ್ದನು. ಸೂರ್ಯನಿಂದ ಹೊರಟ

ಆ ಕೆಂಪು ಛಾಯೆ ಆಕಾಶವನ್ನೂ ಭೂಮಿಯನ್ನೂ ವ್ಯಾಪಿಸಿತ್ತು. ಆಗ ನನಗೆ Clough ಕವಿ ಬರೆದ

> And not through Eastern windows only,
> When morning comes, comes in the light.
> In front the dawn breaks slow, how slowly,
> But westward, look, the land is bright.

ಎಂಬ ಪದ್ಯ ಜ್ಞಾಪಕಕ್ಕೆ ಬಂತು. ನೀರಿನ ಕಲಕಲ ಶಬ್ದವೂ ತಂಗಾಳಿಯ ಸುಯ್ ಸುಯ್ ಶಬ್ದವೂ ಮನಸ್ಸನ್ನು ಆಕರ್ಷಿಸುತ್ತಿತ್ತು. ನಾನು ಹಾಗೇ ಕತ್ತೆತ್ತಿ ಮೇಲೆ ನೋಡಿದೆ; ಹಡಗಿನ ಬಾವುಟವು ರಪರಪನೆ ಹಾರಾಡುತ್ತಿತ್ತು. ಪೂರ್ವಕ್ಕೆ ತಿರುಗಿ ನೋಡಿದೆ: ಮನ್ಮಥನ ಬಾಣದಂತೆ ಇದ್ದ ಕಾಮನ ಬಿಲ್ಲು ಆ ದಿಕ್ಕಿಗೆ ಒಂದು ರತ್ನಖಚಿತವಾದ ಹೆಬ್ಬಾಗಿಲಿನಂತಿತ್ತು. ದಕ್ಷಿಣ ದಿಕ್ಕಿನಲ್ಲಿ ಸಮುದ್ರದ ಅಲೆಗಳಂತೆ ಮೋಡಗಳು ಬಂದು ಸೇರುತ್ತಿದ್ದುವು. ಆನಂದದಿಂದ ಕಣ್ಣು ಮುಚ್ಚಿದೆ.

ಕಣ್ಣು ತೆರೆಯುವ ಹೊತ್ತಿಗೆ ನಾನು ಆದುವರೆಗೆ ಅನುಭವಿಸಿದ್ದು ಕನಸೇನೋ ಅನ್ನಿಸಿತ್ತು. ಕತ್ತಲು ಎಲ್ಲೆಲ್ಲೂ ಹಬ್ಬಿತ್ತು. ಹಡಗಿನಲ್ಲಿದ್ದ ದೀಪ ಆ ಪ್ರದೇಶಕ್ಕೆಲ್ಲಾ ಒಂದು ಮಿಣುಕು ದೀಪದಂತಿತ್ತು. ಎಲ್ಲಿ ನೋಡಿದರೂ ಕಗ್ಗತ್ತಲು. ನೀರೆಲ್ಲವೂ ವಿಷದಂತೆ ಕಪ್ಪಾಗಿದ್ದಿತು. ಅಲೆಗಳ ಗುಳ್ ಗುಳ್ ಶಬ್ದ ಮತ್ತು ಗಾಳಿಯ ಗಂಭೀರ ಧ್ವನಿ ಮಾತ್ರ ಎಲ್ಲೆಲ್ಲೂ ಆವರಿಸಿತ್ತು. ಕತ್ತೆತ್ತಿ ಮೇಲೆ ನೋಡಿದೆ. ಮನಸ್ಸಿಗೆ ಗಾಬರಿಯಾಯಿತು. ಆಕಾಶವನ್ನೆಲ್ಲಾ ಕಪ್ಪು ಮೋಡ ಆವರಿಸಿತ್ತು. ನಕ್ಷತ್ರಗಳ ಬೆಳಕಿಲ್ಲ. ಸುತ್ತಲಿನ ಆ ಗಾಂಭೀರ್ಯ ಮನಸ್ಸಿಗೆ ಗಾಬರಿಯನ್ನುಂಟುಮಾಡುತ್ತಿತ್ತು. ಏಕಪ್ಪಾ ಕತ್ತಲೆಯಾಯಿತು! ಅನ್ನಿಸಿತು ನನಗೆ. ಸ್ನೇಹಿತರು ಉಪಾಹಾರವನ್ನು ಮುಗಿಸಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಇದ್ದಕ್ಕಿದ್ದಂತೆ ಹಡಗು ತಲೆಕೆಳಗಾಗುವ ಸಂಭವ ಬಂತು. ಗಾಳಿಯ ಆರ್ಭಟ ಜೋರಾಯಿತು. ಅಲೆಗಳ ಗಾತ್ರವೂ ಹೆಚ್ಚಿತು. ಅಲ್ಲಿದ್ದ ಸ್ನೇಹಿತರ ಮುಖಗಳೆಲ್ಲಾ ಎಣ್ಣೆಯ ಬಣ್ಣಕ್ಕಿಳಿಯಿತು. ಕೈ ಕಾಲು ನಡುಗಿತು, ಮೈ ಬೆವರಿತು, ಒಬ್ಬರನ್ನೊಬ್ಬರು ನಿರಾಶೆಯಿಂದ ನೋಡಿಕೊಳ್ಳುವಂತಾಯಿತು. ಇಷ್ಟೆಲ್ಲಾ ಆಗುತ್ತಿದ್ದಾಗಲೇ ನಮ್ಮ ಮಿಕ್ಕ ಸ್ನೇಹಿತರು ಜೋರಾಗಿ ಅರಿಚಿ

ಕೊಂಡರು. ತಿರುಗಿ ನೋಡಿದರೆ, ಸಮುದ್ರವೇ ನಮ್ಮನ್ನು ನುಂಗುವುದಕ್ಕೆ ಬರುತ್ತಿದೆಯೋ ಎನ್ನುವ ಹಾಗೆ ದೊಡ್ಡ ಪರ್ವತಾಕಾರದ ಒಂದು ಅಲೆ ಅತಿ ರಭಸದಿಂದ ನಮ್ಮ ಕಡೆಗೆ ಬರುತ್ತಿತ್ತು. ನನಗೆ ಅದನ್ನು ನೋಡಿದೊಡನೆಯೆ ಪ್ರಜ್ಞೆ ತಪ್ಪಿತು . . .

ಎಚ್ಚರವಾಯಿತು. ಕಣ್ಣು ತೆರೆದು ನೋಡಿದೆ: ಒಂದು ಮರಳು ದಿಣ್ಣೆಯ ಮೇಲೆ ಬಂದು ಬಿದ್ದಿದ್ದೆ. ಸಮುದ್ರದ ನೀರು ನನ್ನ ಕಾಲುಗಳನ್ನು ನೆನೆಸಿ ಹೋಗುತ್ತಿತ್ತು. ಬಿಸಿಲಿನ ತಾಪ ಹೆಚ್ಚಾಗಿತ್ತು, ಬಹಳ ಆಯಾಸವಾಗಿತ್ತು. ಮನಸ್ಸಿನ ಗಾಬರಿ ಇನ್ನೂ ಹಾಗೆಯೇ ಇತ್ತು. ಹಾಗೆಯೇ ಎದ್ದು ಕುಳಿತೆ. ಮುಂದುಗಡೆ ವಿಶಾಲವಾದ ಸಮುದ್ರ, ಈಗ ಶಾಂತವಾಗಿತ್ತು. ಅಲೆಗಳು ಬಂಡೆಗಳ ಮೇಲೆ ಬಡಿಯುವಾಗ ಆಗುವ ಶಬ್ದ ಆ ಪ್ರದೇಶವನ್ನೆಲ್ಲಾ ಆಕ್ರಮಿಸಿತ್ತು. 'ಇದೇನು? ನಾನು ಎಲ್ಲಿದ್ದೇನೆ?' ಎಂಬುದೇ ಅರಿವಾಗದೆಹೋಯಿತು. 'ಇದೇನು ಕನಸೋ, ನಾನು ಕಾಣುತ್ತಿರುವುದು?' ಎಂದು ನನ್ನನ್ನು ನಾನೇ ನಂಬಲಾರದೆ ಹೋದೆ. ಮೈಯನ್ನು ಜಿಗುಟಿಕೊಂಡೆ, ನೋವಾಯಿತು. 'ಪರವಾ ಇಲ್ಲಪ್ಪ, ಉಳಿದುಕೊಂಡೆ' ಎಂದು ನಿರ್ಧರಿಸಿದೆ. ಆದರೆ ನಮ್ಮ ಹಡಗು ಮತ್ತು ಸ್ನೇಹಿತರು? ಎಲ್ಲಾ ನೀರಿನ ಪಾಲಾದರೋ, ಅಥವಾ ಬದುಕಿದ್ದಾರೆಯೋ ಎಂದು ಕಣ್ಣಿಗೆ ಕೈ ಮರೆಮಾಡಿ ಸಮುದ್ರದ ಕಡೆ ನನ್ನ ದೃಷ್ಟಿ ಎಲ್ಲಿಯವರೆಗೆ ಹೋಗುತ್ತದೋ ಅಲ್ಲಿಯವರೆಗೂ ನೋಡಿದೆ. ಯಾರ ಸುಳಿವೂ ಇಲ್ಲ. ನಾನು ಹೊಸ ಪ್ರದೇಶಕ್ಕೆ ಬಂದಿದ್ದೇನೆಂದು ಗೊತ್ತಾಯಿತು. ಹೋದ ಸ್ನೇಹಿತರಿಗಾಗಿ ಬಹು ದುಃಖಪಟ್ಟೆ. ಹಾಗೆಯೇ ಸ್ವಲ್ಪ ತೆವಳಿಕೊಂಡು ಬಂದು ಒಂದೆಡೆಗೆ ಒರಗಿ ಕುಳಿತೆ. ಬಹಳ ಹಸಿವಾಗಿತ್ತು. ಏನಿದ್ದರೂ ಹೊಟ್ಟೆಗೆ ಅಡೆದುಕೊಳ್ಳಬೇಕೆಂದು ಅನ್ನಿಸಿತು. ಮೇಲೆದ್ದು ಹಿಂದಿರುಗಿ ನೋಡಿದೆ. ಮನಸ್ಸಿಗೆ ಸ್ವಲ್ಪ ಚೈತನ್ಯ ಕೊಟ್ಟಂತಾಯಿತು. ಸ್ವಲ್ಪ ದೂರದಲ್ಲೇ ಮರಗಳ ಗುಂಪು ಕಾಣಿಸಿತು. ನೆಲವೆಲ್ಲಾ ಹಸಿರು ಹುಲ್ಲಿನಿಂದ ಮುಚ್ಚಿತ್ತು. ಪಕ್ಷಿಗಳ ಕಲಕಲ ಧ್ವನಿ, ಕೋತಿಗಳ ಕಿರಿಚು, ಮೊಲಗಳು, ಬಣ್ಣಬಣ್ಣದ ಚಿಟ್ಟೆಗಳು ಇವೆಲ್ಲವೂ ಮನಸ್ಸಿಗೆ ಹರ್ಷವನ್ನುಂಟುಮಾಡಿದುವು. ಹಾಗೆಯೇ ಕಷ್ಟಪಟ್ಟು ಕೊಂಡು ಆ ಪ್ರದೇಶಕ್ಕೆ ಹೋದೆ. ಒಂದು ಮಾವಿನ ಮರ ಕಣ್ಣಿಗೆ ಬಿತ್ತು. ಹಣ್ಣಿನ ಭಾರಕ್ಕೆ ಆ ಮರದ ಕೊಂಬೆಗಳು ನೆಲವನ್ನು ಮುಟ್ಟುತ್ತಿದ್ದುವು.

ಅದನ್ನು ನೋಡಿದೊಡನೆಯೆ ಕೈ ಹಣ್ಣಿನ ಮೇಲೆ ಹೋಯಿತು. ಅಲ್ಲಿದ್ದ ಹಣ್ಣನ್ನು ಮುಟ್ಟಿದ ಆಕ್ಷಣವೇ ಬೆನ್ನಿನ ಮೇಲೆ ಬಲವಾದ ಒಂದು ಗುದ್ದು ಬಿತ್ತು. ಹಣ್ಣಿನ ಮೇಲಿದ್ದ ಗಮನ ನೋವಿನ ಕಡೆಗೆ ತಿರುಗಿತು. ಹಣ್ಣನ್ನು ಕೀಳದೆ ಹಿಂದಿರುಗಿ ನೋಡಿದೆ . . .

"ಏನೋ, ನೆನ್ನೆ ಏನಾದ್ರೂ Second showಗೆ ಹೋಗ್ಬಿಟ್ಟಿದ್ದೆಯೊ? ಏಳು, ಕಾಫಿ ಕುಡುಕೊಂಡು ಬರೋಣ" ಅಂತ ಅಂದ ನನ್ನ ಸ್ನೇಹಿತ. ಕಣ್ಣು ಬಿಟ್ಟು ನೋಡಿದೆ: ಮೇಷ್ಟ್ರು ಇಲ್ಲ, ಹುಡುಗರು ಒಬ್ಬೊಬ್ಬರಾಗಿ ಕ್ಲಾಸಿನಿಂದ ಹೊರಟು ಹೋಗುತ್ತಿದ್ದರು. ನಿಟ್ಟುಸಿರೆಳೆದು ನಾನೂ ನನ್ನ ಸ್ನೇಹಿತನೊಡನೆ ಕ್ಲಾಸ್ ಬಿಟ್ಟು ಕ್ಯಾಂಟೀನಿಗೆ ಹೋದೆ.

—**ಬಿ. ಕೆ. ನಾಗರಾಜಾರಾವ್.**

---

## ಧರುಮದ ದೀಪ

ಅನುಭವದ ಪಾಲೊಳು ವಿಚಾರ ಮಂಥನವಾಗೆ
ಜನಿಯಿಕುಂ ಜ್ಞಾನನವನೀತವದೆ ಸುಖದಂ
ಗಿಣಿಯೋದು ಪುಸ್ತಕಜ್ಞಾನ; ನಿನ್ನನುಭವವೆ
ನಿನಗೆ ಧರುಮದ ದೀಪ—ಮಂಕುತಿಮ್ಮ

ಬುದ್ಧಿಪ್ರಕಾಶದಿಂದಂತರನುಭವಶೋಧೆ
ಸಿದ್ಧವಾ ಶೋಧೆಯಿಂ ಸತ್ಯಸಂವೀಕ್ಷೆ
ಶುದ್ಧಸತ್ಯವ ಜೀವಿತಪ್ರಶ್ನೆಗನ್ವಯಿಪ
ಪದ್ಧತಿಯೆ ಧರ್ಮವೆಲೊ—ಮಂಕುತಿಮ್ಮ

# ಗಾಜಿನ ಕಂಭ

ಒಂದೂರಂತೆ. ಆ ಊರಿಗೆ ಒಬ್ಬ ರಾಜನಂತೆ. ಅವನಿಗೆ ಮಕ್ಕಳೇ ಇರೊಲ್ವಂತೆ. ಅದಕ್ಕೋಸ್ಕರ ಅವನು ದಿನಾ ಕಾಳಿಕಾದೇವೀನ ಪೂಜೆ ಮಾಡ್ತಾ ಇರ್ತಾನೆ. ತುಂಬಾ ದಿವಸವಾದ ಮೇಲೆ, ದೇವಿ ಮೆಚ್ಚಿ, ಪ್ರತ್ಯಕ್ಷಳಾಗಿ, ನಿನ್ಗೇನು ಬೇಕೋ ಕೇಳ್ಕೊ ಅಂದಳಂತೆ. ಅದಕ್ಕೆ ರಾಜ "ನನಗೆ ಮಕ್ಕಳ್ಬೇಕು" ಅಂದ. ದೇವಿ ನಕ್ಕು, ಇಷ್ಟೇನೆ ಅಂತ "ರಾಜ! ರಾಜ! ನಿನ್ನ ಮನೆ ಪಕ್ಕದಲ್ಲಿ ಒಬ್ಬ ರಾಕ್ಷಸ ಇದಾನೆ. ಅವನ ಹಿತ್ತಲಿನಲ್ಲಿ ಒಂದು ದಾಳಿಂಬ್ರೆ ಗಿಡ ಇದೆ. ಅದರಲ್ಲಿ ಒಂದೇ ಒಂದು ಹಣ್ಣು ತಂದು ನನಗೆ ನೈವೇದ್ಯ ಮಾಡಿ ನಿನ್ನ ಹೆಂಡ್ತೀಗೆ ಅರ್ಧ ಕೊಟ್ಟು, ನೀನು ಅರ್ಧ ತಿನ್ನು. ಆಗ ನಿನಗೆ ಮಕ್ಕಳಾಗುತ್ತೆ" ಅಂದು ಮಾಯ ವಾಗ್ಬಿಟ್ಟಳು. ರಾಜನಿಗೆ ತುಂಬಾ ಸಂತೋಷವಾಗ್ಬಿಡ್ತು. ತಕ್ಷಣ ಆಳುಗಳನ್ನ ಕೂಗಿದ. ಅವರನ್ನ ಕೂಗಿ "ಈ ಪಕ್ಕದ ಮನೆ ರಾಕ್ಷಸನ ಹಿತ್ತಲಿಗೆ ಹೋಗಿ, ಒಂದೇ ಒಂದು ದಾಳಿಂಬ್ರೆ ಹಣ್ಣು ಕಿತ್ಕೊಂಡ್ಬನ್ನಿ" ಅಂತ ಹೇಳಿ ಕಳುಹಿಸಿ ಕೊಟ್ಟ. ಹಾಗೇನೇ ಆಳುಗಳೂ, ಆ ರಾಕ್ಷಸ ಇಲ್ಲದೆ ಇರೋ ಹೊತ್ನಲ್ಲಿ ಅವನ ಹಿತ್ತಲಿಗೆ ಹೋದರು. ಅಲ್ಲಿ ನೋಡ್ತಾರೆ: ದಾಳಿಂಬ್ರೆ ಹಣ್ಣುಗಳು ಮರದಲ್ಲಿ ಝುಗಿಝುಗಿ ಅಂತ ಬಿಟ್ಟಿವೆ. ಆಳುಗಳಿಗೆ ತುಂಬಾ ಆಸೆ ಆಯ್ತು. ಮರ ಹತ್ತಿ ಬುಟ್ಟಿಗಟ್ಟಲೆ ಕಿತ್ತು ಕೆಳಕ್ಕಿಳಿದರು. ತಕ್ಷಣ ಬುಟ್ಟಿಗಟ್ಟಲೆ ಕಿತ್ತ ಹಣ್ಣೆಲ್ಲಾ ಒಂದೇ ಒಂದು ಹಣ್ಣಾಯ್ತು. ಹೀಗೇ ಮೂರು ನಾಲ್ಕು ಸಾರೀನೂ ಆಯ್ತು. ಕೊನೇಸಾರಿ ನೋಡೇಬಿಡಬೇಕೂಂತ ಮರಾನ ಹತ್ತಿದರು. ಅಷ್ಟೊತ್ತಿಗೆ ರಾಕ್ಷಸ ಎಲ್ಲೋ ಹೊರಗ್ಹೋಗಿದ್ದೋನು ಬಂದ. ಬಂದವನು ನೀದ ಹಿತ್ತಲಿಗೇ ಬಂದ. ಇವರನ್ನ ನೋಡ್ದ. ಕಣ್ಣು ಕಣ್ಣು ಬಿಡುತ್ತ "ಯಾರಿಗೆ ಈ ಹಣ್ಣು? ಏನು ಸಮಾಚಾರ? ಹೇಳಿ" ಅಂದ. ಅದಕ್ಕೆ ಆಳುಗಳು ಹೆದರಿ ಎಲ್ಲಾ ಸಮಾಚಾರಾನೂ ಹೇಳಿದರು. ರಾಕ್ಷಸ ಕೇಳಿ, "ಹೋಗ್ಲಿ, ಪರ್ವಾ ಇಲ್ಲ. ಆದರೆ ನಿಮ್ಮ ರಾಜನಿಗೆ ಒಂದು ಮಾತು ಹೇಳಿ: ಅವನಿಗೆ ಹೆಣ್ಣು ಮಗು ಆದರೆ ನನಗೆ, ಗಂಡಾದರೆ ಅವನ್ಗೆ. ಮೋಸ ಮಾಡಿದರೆ ನಾನು ಸುಮ್ನಿರೊಲ್ಲ" ಅಂತ ಹೇಳಿ ಕಳಿಸಿದ. ಆಳುಗಳು ಕೆಟ್ನೋ ಬಿದ್ನೋ ಅಂತ ಒಂದೇ ಉಸಿರಿನಲ್ಲಿ ಆ ಹಣ್ಣನ್ನು ಎತ್ಕೊಂಡು ಅರಮನೆಗೆ ಬಂದು, ನಡೆದ ಸಮಾಚಾರಾನ ರಾಜನಿಗೆ ಹೇಳಿದರು.

ರಾಜನಿಗೆ ಆ ಹಣ್ಣು ನೋಡಿದ್ದೇ ಆನಂದವಾಯ್ತು. ರಾಕ್ಷಸನ ಮಾತು ಕಿವೀಗೇ ಬೀಳಲಿಲ್ಲ. ತಕ್ಷಣ ಆ ಹಣ್ಣನ್ನ ದೇವೀಗೆ ನೈವೇದ್ಯ ಮಾಡಿ, ಹೆಂಡ್ತೀಗೆ ಕೊಟ್ಟು, ತಾನೂ ತಿಂದ. ಹೀಗೇ ಕೆಲವು ದಿವಸಗಳಾಯ್ತು. ಹೆಂಡ್ತಿ ಬಸುರಿ ಯಾದಳು. ಬಳೆ ತೊಡ್ಸಿದ್ದೂ ಆಯ್ತು. ಕೊನೆಗೆ ಹೆಣ್ಣುಮಗು ಹೆತ್ತಳು. ರಾಜನಿಗೆ ತಿಳೀತು. ಅವನಿಗೆ ಒಂದು ಕಡೆ ಸಂತೋಷ, ಒಂದು ಕಡೆ ದುಃಖ. ಈ ವಿಷಯ ಯಾರಿಗೂ ತಿಳಿಸಬಾರದೂ ಅಂತ ಎಷ್ಟೋ ಏರ್ಪಾಟು ಮಾಡಿದ. ಆದರೂ ಆ ವಿಷಯ ರಾಕ್ಷಸನಿಗೆ ಹೇಗೋ ತಿಳೀತು. ಬಂದ, ಕೇಳಿದ. ಅದಕ್ಕೆ ರಾಜ "ಮಗುವಿನ ಆಟ ಪಾಟ ನೋಡಿ ಕಳಿಸ್ತೀನಿ" ಅಂದ. ಅದಕ್ಕೆ ರಾಕ್ಷಸ ಒಪ್ಪಿ, ೫-೬ ವರ್ಷ ಬಿಟ್ಟು ಬಂದ. "ಮಗು ಓಡಾಡೋದು, ಕುಣಿಯೋದು ನೋಡಿ ಕಳಿಸ್ತೀನಿ" ಅಂತ ರಾಜ ಅಂದ. ಅದಕ್ಕೂ ರಾಕ್ಷಸ ಒಪ್ಪಿದ. ಪುನಃ ಬಂದ. "೧೬-೧೮ ವರ್ಷವಾಗುತ್ಲೂ ಕಳಿಸ್ತೀವಿ" ಅಂದ ರಾಜ. ಅದಕ್ಕೂ ಒಪ್ಪಿದ ಆ ರಾಕ್ಷಸ. ಆಮೇಲೆ ಬಂದ. ಕೇಳಿದ. ರಾಜ ಕಳ್ಸೊಲ್ಲ ಅಂದ. ಅದಕ್ಕೆ ರಾಕ್ಷಸ ಕಣ್ಣು ಕಣ್ಣು ಬಿಟ್ಟು ಹೆದರಿಸಿ, ಆ ಹುಡುಗೀನ ಹೊತ್ಕೊಂಡು ತನ್ನ ಮನೇಗೆ ಕರ್‍ಕೊಂಡ್ಹೋದ. ಪಾಪ, ಆ ಹುಡ್ಗೀ ಕಿರ್‍ರೋ ಮರ್‍ರೋ ಅಂತ ಕಿರಿಚಿದಳು. ಏನಾಗುತ್ತೆ ರಾಕ್ಷಸನ ಮುಂದೆ!—ಅವತ್ತು ರಾತ್ರಿ ಕಳೆದರು.

ಬೆಳಗಾಯಿತು—ರಾಕ್ಷಸ ಆ ಹುಡ್ಗೀನ ಕರೆದ. "ದಾಳಿಂಬ್ರೆ, ದಾಳಿಂಬ್ರೆ, ಇಲ್ಲಿ ಬಾ" ಅಂತ ಆ ಹುಡುಗೀನ ಅಡಿಗೆ ಮನೆಗೆ ಕರ್‍ಕೊಂಡ್ಹೋಗಿ, ಅಲ್ಲಿದ್ದ ದೊಡ್ಡ ಅನ್ನದ ತಪ್ಪಲೆ, ಸಾರಿನ ಕೊಳದಪ್ಪಲೆ ತೋರಿಸಿ, 'ಇದರ ತುಂಬಾ ಅಡಿಗೆ ಮಾಡು' ಅಂತ ಹೇಳಿ ಹೊರಟ್ಹೋದ. ಅದರಂತೇನೆ ಮಾಡಿದಳು. ಮಧ್ಯಾಹ್ನ ರಾಕ್ಷಸ ಬಂದ, ಒಂದು ಚೂರೂ ಮಿಗದ ಹಾಗೆ ಎಲ್ಲಾ ತಿಂದು ಬಿಟ್ಟ. ಆ ಹುಡುಗೀಗೂ ಮಿಗಲಿಲ್ಲ. 'ಇನ್ನೂ ಸ್ವಲ್ಪ ಹಾಕು' ಅಂದ. "ಏನೂ ಮಿಗಲಿಲ್ಲ" ಅಂದಳು. 'ಹೋಗ್ಲಿ ಬಿಡು' ಅಂತ ತಾನು ತಂದಿದ್ದ ಮಾಂಸ ತಿಂದು ಬಿಟ್ಟ. ಅವಳ್ನ ಕರೆದು, ಬೀಗದ ಕೈ ಗೊಂಚಲು ಕೊಟ್ಟು, "ನಾನಾಚೇಗೆ ಹೋಗ್ಬರ್‍ತೀನಿ. ಆದರೆ, ಈ ರೂಮುಗಳ ಬಾಗಿಲು ತೆಗೀಬೇಡ. ಬೀದಿ ಬಾಗಿಲು ಹಾಕ್ಕೊಂಡಿರು" ಅಂತ್ಹೇಳಿ ಹೊರಟುಹೋದ.

ಇವಳೂ ಹಾಗೇ ಬಾಗಿಲು ಹಾಕ್ಕೊಂಡು, ಬಂದು, 'ಅದ್ಯಾಕೆ ರೂಮು ಬಾಗಿಲು ತೇಗೀಬ್ಯಾಡ ಅಂದಿದ್ದಾನೆ? ನೋಡೇ ನೋಡ್ಬೇಕು' ಅಂತ

ಒಂದೊಂದಾಗಿ ತೇಗಿತಾಳೆ. ಒಂದೊಂದರಲ್ಲೂ ಕೈ, ಕಾಲು, ದೇಹ ಹೀಗೆ ನೇತ್ಹಾಕಿರ್ತಾನೆ. ಕೊನೇ ರೂಂನಲ್ಲಿ ತಲೇ ಬರುಡೆಗಳು ನೇತ್ಹಾಕಿರ್ತಾನೆ. ಇವಳು ಬಗ್ಗಿ ನೋಡ್ತಾಳೆ. ಆ ತಲೇ ಬರುಡೆಗಳ ಪೈಕಿ ಒಂದು ಇವಳನ್ನ ನೋಡಿ ನಗುತ್ತೆ. ಇವಳು ಅದನ್ನ ನೋಡಿ "ಯಾಕೆ ನಗುತೀ?" ಅಂತ ಕೇಳಿದಳು. ಅದಕ್ಕೆ ಅದು "ಅಮ್ಮಾ, ಇವನು ರಾಕ್ಷಸ. ನಾವೂ ನಿನ್ನ ಹಾಗೇ ಬಂದೋರು. ನಿನಗೂ ಹೀಗೇ ಮಾಡ್ತಾನೆ. ಆದ್ದರಿಂದ ಒಂದ್ಕೆಲಸ ಮಾಡು. ಈ ಮನೆ ಹಿತ್ತಲಲ್ಲಿ ಒಂದು ಗಾಜಿನ ಕಂಭ ಇದೆ. ಅದರ ಹತ್ತಿರ ಹೋಗಿ ನಿಂತುಕೊಂಡು 'ಒಬ್ಬ ತಾಯಿ ಹೊಟ್ಟೇಲಿ ಹುಟ್ಟಿದ್ದರೆ ಬಾಗಿಲು ತೆಗಿ' ಅನ್ನು. ತೆಗೆಯುತ್ತೆ. ಒಳಗೆ ಹೋಗು. ಎಲ್ಲಾ ಅನುಕೂಲಗಳೂ ಇವೆ. 'ಒಬ್ಬ ತಂದೆ ಹೊಟ್ಟೇಲಿ ಹುಟ್ಟಿದ್ದರೆ ಬಾಗಿಲು ಮುಚ್ಚು' ಅನ್ನು. ಮುಚ್ಚುತ್ತೆ. ಒಳಗೆ ಸುಖವಾಗಿರು" ಅಂತು. ಈ ಹುಡುಗಿ ದಾಳಿಂಬ್ರೆಗೆ ಸಂತೋಷವಾಯ್ತು. ತಕ್ಷಣ ಮನೇ ಬಾಗಿಲುಗಳು ಹಾಕ್ಬಿಟ್ಟು, ಆ ಕಂಭದ ಹತ್ತಿರ ಹೋಗಿ, ಹಾಗೇ ಮಾಡಿ, ಒಳಗೆ ಹೋಗಿ ಸುಖವಾಗಿದ್ದುಬಿಟ್ಟಳು.

ಅಷ್ಟು ಹೊತ್ತಿಗೆ ರಾಕ್ಷಸ ಕೂಕ್ಕೊಂಡು ಬಂದ. ಬಾಗಿಲು ತೆಗೀಲಿಲ್ಲ. ಕೋಪ ಬಂತು. ಬಾಗಿಲು ಸೀಳಿ ಒಳಕ್ಕೆ ಬಂದ. ಯಾರೂ ಇಲ್ಲ. ಕೋಪ ಬಂದು, ಅಲ್ಲಿ ಹುಡುಕುತ್ತಾ ಹಿತ್ತಲಿಗೆ ಬಂದ. ಆ ಗಾಜಿನ ಕಂಭ ನೋಡಿದ. ಒಂದು ಒದ್ದ—ಕಂಭ ಹೋಗಿ ಬೇರೆ ಊರಿನ ರಾಜನ ಮನೆ ಹಿಂದೆ ಬಿತ್ತು. ರಾಕ್ಷಸ ಸಾಕಾಗಿ ಮನೇಗೆ ಹೊರಟ್ಹೋದ.

ಅಲ್ಲಿ ರಾಜನ ಮನೆಯೋರು ಯಾರೂ ಆ ಕಂಭ ನೋಡಿರಲಿಲ್ಲ. ಇವಳು ರಾತ್ರಿಯಾಯ್ತು ಅಂದ್ರೆ, ಕಂಭದಿಂದ ಈಚೆಗೆ ಬಂದು, ಅಲ್ಲಿರೋ ಕೊಳದಲ್ಲಿ ಸ್ನಾನ ಮಾಡಿ, ಹಣ್ಣು ಹಂಪಲುಗಳ ತಿರುಳು ತಿಂದು, ಮೇಲಿನ ಸಿಪ್ಪೆ ಹಾಗೇ ಮರದಲ್ಲಿ ಬಿಟ್ಟುಬಿಡುತ್ತಿದ್ದಳು. ಹೀಗೇ ಇರುವಾಗ ಒಂದು ದಿನ ರಾಜ ಹಣ್ಣು ತಿನ್ನಬೇಕು ಅಂತ ಹಣ್ಣು ಕೀಳಿಸಿ ತರಿಸಿ ನೋಡಿದರೆ ಒಳಗಿರೋ ತಿರುಳೇ ಇಲ್ಲ. ಇದ್ಯಾರ ಕೆಲಸವಿರಬಹುದು ಅಂತ ಯೋಚಿಸಿ, ಹುಡುಕಲು ಆಳುಗಳಿಗೆ ಹೇಳಿದ. ಅವತ್ತು ರಾತ್ರಿ ಆಳುಗಳು ಕಾವಲಿದ್ದರು. ನಿದ್ರೆ ಬಂತು. ಬೆಳಗ್ಗೆ ಎದ್ದು ಬಂದು, ಸಿಗಲಿಲ್ಲ ಎಂದರು. ಹೀಗೆಯೇ ಮಂತ್ರಿ, ರಾಜನ ದೊಡ್ಡ ಮಗ, ಕೊನೆಗೆ ರಾಜನೇ ಬಂದು ಕಾವಲಿದ್ರೂ ಯಾರಿಗೂ ಗೊತ್ತಾಗಲಿಲ್ಲ.

ಕೊನೇಗೆ ರಾಜನ ಕಿರೀಮಗ "ನಾನ್ನುಡುಕ್ತೀನಿ" ಅಂತಂದು, ಅವತ್ತು ರಾತ್ರಿ ಆ ತೋಟದಲ್ಲಿ ಮಲಗಿಕೊಂಡ. ಮಲಗುವಾಗ ತನ್ನ ಕಿರುಬೆರಳ ತುದಿಯನ್ನು ಕೊಯ್ದು, ಅದಕ್ಕೆ ನಿಂಬೆಹಣ್ಣು ಸಿಕ್ಕಿಸಿಕೊಂಡ. ಅದರಿಂದ ನಿದ್ದೆಯೇ ಬರ್ಲಿಲ್ಲ. ಒಂದು ಹೊತ್ನಲ್ಲಿ ಆ ಕಂಭದಿಂದ ರಾಜಕುಮಾರಿ ಈಚೆಗೆ ಬಂದು ಹಣ್ಣು ತಿಂದು ಹೋಗ್ತಿದ್ದಳು. ಇವನು ನೋಡಿ, ಅವಳನ್ನ ಮಾತಾಡಿಸ್ದ. ವಿಷಯವೆಲ್ಲಾ ತಿಳಿಯಿತು. ಬೆಳಗಾಯ್ತು. ಕಿರೀಮಗನೂ ಸಿಗಲಿಲ್ಲ ಅಂತ ಹೇಳಿ, ಇತ್ತಲಾಗೆ ರಾಜಕುಮಾರಿಗೆ ಬಟ್ಟೆಬರೆ ತಿಂಡಿ ಎಲ್ಲಾ ಸರಬರಾಜು ಮಾಡಿದ.

ಹೀಗಿರೋವಾಗ ಒಂದು ದಿನ, ರಾಜನ ಕಿರೀಮಗ, ಅವರಪ್ಪನ ಹತ್ತಿರ ಹೋಗಿ, ಹಿತ್ತಲಲ್ಲಿರೋ ಗಾಜಿನ ಕಂಭ ಮದುವೆಯಾಗ್ತೀನಿ ಅಂತ ಹಠಹಿಡಿದ. ಬೇಡ ಅಂದರು. ಆದ್ರೂ ಹಠ ಹಿಡಿದ. ಮದುವೆ ಮಾಡಿದರು. ಕೊನೇಗೆ ಮಗೂ ಆಯ್ತು ಅಂದ. ರಾಜನಿಗೆ ಆಶ್ಚರ್ಯವಾಯ್ತು. ಜನಕ್ಕೆಲ್ಲಾ ಊಟ ವಾಯ್ತು. ಕೊನೇಗೆ ರಾಜನ ಮಗ ಕಂಭದ ಹತ್ತಿರ ಹೋಗಿ ಒಂದು ನಿಂಬೆ ಹಣ್ಣು ಎಸೆದ, ಕಂಭ ಛಟಛಟಾ ಅಂತು. ಎರಡನೇ ನಿಂಬೇ ಹಣ್ಣು ಎಸೆದ, ಬಿರುಕು ಬಿಟ್ಟಿತು. ಮೂರನೇದು ಎಸೆಯೋ ಹೊತ್ಗೆ ಕಂಭ ಒಡೆದು ಒಳಗಿಂದ ಒಬ್ಬ ಸುರಸುಂದರಿ ರಾಜಕುಮಾರಿ ಮಗು ಎತ್ತಿಕೊಂಡು ಬಂದಳು. ಎಲ್ಲರಿಗೂ ಸಂತೋಷ ಆಯ್ತು, ಆಶ್ಚರ್ಯ ಆಯ್ತು.

ಇದನ್ನೆಲ್ಲಾ ನೋಡುತಿದ್ದ ಮಂತ್ರಿಕುಮಾರ, ಅವತ್ತು ರಾತ್ರಿ ತನ್ನ ತಂದೆ ಹತ್ತಿರ ಹೋಗಿ, ಮನೆ ಹಿಂದಿರೋ ಹುಣಸೇಮರ ಮದುವೇ ಮಾಡ್ಕೊತೀನಿ ಅಂದ. ಬೇಡ ಅಂದ್ರೂ ಕೇಳಲಿಲ್ಲ. ಮದುವೆಯೂ ಮಾಡಿದರು. ಕೊನೇಗೆ ಮಗು ಆಯ್ತು ಅಂದ. ಜನರೂ ಸೇರಿದರು. ರಾಜನ ಮಗನ ಹಾಗೆ ಇವನೂ ಮರಕ್ಕೆ ನಿಂಬೆ ಹಣ್ಣು ಎಸೆದ. ಎಸೆದದ್ದರ ಮೇಲ್ಲೆ, ಮರದ ಒಳಗಿಂದ ದೆವ್ವ, ಪೀಡೆ, ಪಿಶಾಚಿಗಳು ಮೊರ, ಗೂಡೆ, ಪೊರಕೆ ಹಿಡಿದು ಎಲ್ಲರನ್ನೂ ಅಟ್ಟಸಿಕೊಂಡು ನುಗ್ಗಿದವು. ಜನವೆಲ್ಲಾ ಗಾಬರಿಬಿದ್ದು ಓಡಿಬಿಟ್ಟರು. ಇದರಿಂದ ಮಂತ್ರಿಗೂ ಮಂತ್ರಿಕುಮಾರನಿಗೂ ಅವಮಾನವಾಯಿತು. ಮಂತ್ರಿ ಮಗನ್ನ ಕೂಗಿ, 'ರಾಜಕುಮಾರ ತಿಳಿದೂ ತಿಳಿದೂ ಮಾಡಿದ ಅಂತ ನೀನೂ ಮಾಡಿದರೆ ಆಗುತ್ಯೇ?' ಅಂತ ಬುದ್ಧಿವಾದ ಹೇಳಿ, ಒಳ್ಳೆ ಹೆಣ್ಣು ತಂದು ಮದುವೆ

ಮಾಡಿದ. ಅವರು ಸುಖವಾಗಿದ್ದರು. ಇಲ್ಲಿ ಆ ರಾಜಕುಮಾರಿ, ರಾಜಕುಮಾರ, ತಮ್ಮ ತಾಯಿ ತಂದೆಯ ಮನೆಗೆ ಹೋಗಿ, ಎಲ್ಲಾ ವಿಷಯ ತಿಳಿಸಿ, ಅವರನ್ನೂ ಕರ್‍ಕೊಂಡುಬಂದು, ಅಷ್ಟರೂ ಒಟ್ಟಿಗೆ ಸುಖವಾಗಿದ್ದರು.

—ಕೆ. ಎನ್. ಶ್ರೀಹರಿರಾವ್.

[ಇದು ಮೈಸೂರಿನ ಕಡೆ ಕೇಳಿದ ಕತೆ.]

---

## ಹೆಸರಿನ ಹಂಬಲು

ಹೆಸರು ಹೆಸರೆಂದು ನೀಂ ಬಸವಳಿವುದೇಕಯ್ಯ?
ಕಸದೊಳಗೆ ಕಸವಾಗಿ ಹೋಹನಲೆ ನೀನು?
ಮುಸುಕಲೀ ಧರೆಯ ಮರವೆನ್ನನ್—ಎನ್ನುತ ಬೇಡು
ಮಿಸುಕದಿರು ಮಣ್ಣಿನಲಿ—ಮಂಕುತಿಮ್ಮ

ಅಕ್ಕಿಯೊಳಗನ್ನವನು ಮೊದಲಾರು ಕಂಡವನು?
ಅಕ್ಕರದ ಬರಹಕ್ಕೆ ಮೊದಲಿಗನದಾರು?
ಲೆಕ್ಕವಿರಿಸಿಲ್ಲ ಜಗ ತನ್ನಾದಿಬಂಧುಗಳ
ದಕ್ಕುವುದೆ ನಿನಗೆ ಜಸ?—ಮಂಕುತಿಮ್ಮ

ಎದ್ದೆದ್ದು ಬೀಳುತಿಹೆ, ಗುದ್ದಾಡಿ ಸೋಲುತಿಹೆ
ಗದ್ದಲವ ತುಂಬಿ ಪ್ರಸಿದ್ಧನಾಗುತಿಹೆ
ಉದ್ಧರಿಸುವೆನು ಜಗವನೆನ್ನುತಿಹ ಸಖನೆ, ನಿ-
ನ್ನುದ್ಧಾರವೆಷ್ಟಾಯ್ತೊ?—ಮಂಕುತಿಮ್ಮ

# ಚಂದ್ರಮತಿ

ರಾಜನಗರಿ ಎಂಬ ಪಟ್ಟಣದಲ್ಲಿ ಒಬ್ಬ ರಾಜನಿದ್ದನಂತೆ. ಅವನಿಗೆ ಮದನ, ಮೋಹನ, ಸುಮತಿ, ಸುಗುಣ, ವಸುಮತಿ, ವಾಸವ, ಚಂದ್ರಮತಿ ಎಂಬ ಸಪ್ತ ಕುಮಾರರಿದ್ದರಂತೆ. ಅವರಿಗೆ ಬೇಕಾದ ವಿದ್ಯೆ, ಕುದುರೆಸವಾರಿ, ರಾಜಕುವರರಿಗೆ ಏನೇನು ಬೇಕೋ ಎಲ್ಲ ಕಲಿಸಿದನಂತೆ. ಅಷ್ಟಾಗಿ ಇಷ್ಟಾಗಿ ಮದುವೆಯ ಪ್ರಾಯಕ್ಕೆ ಬಂದರಂತೆ. ಆಗ ರಾಜ ತನ್ನ ಪ್ರಧಾನಿಯನ್ನು ಕರೆದು, "ಅಯ್ಯಾ, ಮಹಾಮಂತ್ರಿ, ತನಯರೆಲ್ಲರೂ ಪ್ರಾಯಕ್ಕೆ ಬಂದರು. ಅವರಿಗೆ ತಕ್ಕ, ಮತ್ತು ನಮ್ಮ ಕುಮಾರರಂತೆ ಒಂದೇ ತಾಯಿಯ ಗರ್ಭದಲ್ಲಿ ಬಂದು ಒಂದೇ ಹೆಸರಿನವರಾದ ವಧುಗಳನ್ನು ನಿಶ್ಚಯಿಸಿಕೊಂಡು ಬಾ" ಎಂದು ಆಜ್ಞೆ ಮಾಡಿ ಕಳಿಸಿದನಂತೆ.

ರಾಜಾಜ್ಞೆಯಂತೆ ಮಂತ್ರಿಯು ಪಯಣಕ್ಕೆ ಬೇಕಾದ ಸಲಕರಣೆಗಳನ್ನು ತೆಗೆದುಕೊಂಡು, ಗಂಟೆಗೆ ಅರುವತ್ತು ಮೈಲಿ ಹೋಗುವ ಕುದುರೆಯನ್ನು ಏರಿ ಹೊರಟನಂತೆ. ಹೋಗುತ್ತಾ, ಹೋಗುತ್ತಾ, ಒಂದು ಗೊಂಡಾರಣ್ಯಕ್ಕೆ ಬಂದು ಸೇರಿದ. ಇನ್ನೇನು ಹೊತ್ತು ಮುಳುಗುವ ವೇಳೆಯಾಯಿತು. ಎಲ್ಲಿ ಯಾದರೂ ತಂಗೋಣ ಎಂದು ಸುತ್ತಲೂ ನೋಡಿದ. ಸ್ವಲ್ಪ ದೂರದಲ್ಲಿ ಮರ ಗಳು ಗುಂಪಾಗಿ ಬೆಳೆದದ್ದು ಕಾಣಿಸಿತು. ಅಲ್ಲಿಗೆ ಬಂದು ನೋಡಲು, ಒಂದು ಬಾವಿ ಇತ್ತು. ಹಸಿವನ್ನು ನೀಗಲು ತಾನು ತಂದ ತಿಂಡಿತೀರ್ಥಗಳನ್ನು ತೆಗೆದು ಕೊಂಡು ಕುದುರೆಯನ್ನು ಒಂದು ಮರಕ್ಕೆ ಕಟ್ಟಿ ಬಾವಿಯನ್ನು ಇಳಿಯಲು ಬಂದ. ಅಲ್ಲಿ ಯಾರೋ ಮತ್ತೊಬ್ಬ ಕುಳಿತು ಅನ್ನ ತಿನ್ನುತ್ತಿದ್ದ. ಬಂದವನೆ ಅವನನ್ನು ಕುರಿತು "ಏನಯ್ಯಾ, ನೀನು ಯಾರು? ಯಾವ ಊರು? ಯಾವ ಕಾರ್ಯಾರ್ಥವಾಗಿ ಪಯಣ ಬೆಳಸಿರುವೆ?" ಎಂದು ಕೇಳಿದ. ಆ ಮನುಷ್ಯ "ಅಯ್ಯಾ, ನಾನು ಮಂದಾರಪುರದ ಮಂತ್ರಿ. ರಾಜಾಜ್ಞೆಯಂತೆ ಅವನ ಸಪ್ತ ಕುವರಿಯರಿಗೆ ವರಗಳನ್ನು ನಿಶ್ಚಯಿಸಿಕೊಂಡು ಬರುವ ಪ್ರಯುಕ್ತ ಬಂದಿದ್ದೇನೆ. ತಮ್ಮದು ಯಾವ ಊರು? ತಾವು ಬಂದಿರುವ ಕೆಲಸವದೇನು?" ಎನಲು ರಾಜನಗರಿಯ ಮಂತ್ರಿಯು "ನಾನು ಕೂಡ ನಮ್ಮ ರಾಜನ ಏಳು ಜನ ಸುತ ರಿಗೆ ಕನ್ಯೆಯರನ್ನು ಹುಡುಕಲು ಹೊರಟಿದ್ದೇನೆ. ನೀನೂ ಅದೇ ಕೆಲಸಕ್ಕೆ

ಹೊರಟಿರುವೆ ಎಂದಮೇಲೆ ನಾನಿನ್ನು ಮುಂದೆ ಹೋಗುವುದು ತಪ್ಪಿತು. ಅವರ ಹೆಸರೇನು? ಅವರ ಚಿತ್ರಪಟಗಳನ್ನು ಕೊಡು" ಎನಲು; ಮಂದಾರಪುರದ ಅಮಾತ್ಯನು ಅವರ ನಾಮಧೇಯಗಳನ್ನರುಹಿ ಭಾವಚಿತ್ರಗಳನ್ನು ಕೊಟ್ಟನು. ರಾಜನಗರಿಯ ಪ್ರಧಾನಿ ಕುವರರ ಚಿತ್ರಗಳೊಂದಿಗೆ ಕುಮಾರಿಯರ ಚಿತ್ರಗಳನ್ನು ಹಿಡಿದು ನೋಡಲು, ರೂಪಿನಲ್ಲಿ ಒಬ್ಬರಿಗೊಬ್ಬರು ಸರಿತೂಗುತ್ತಿದ್ದರು, ಹೆಸರುಗಳೂ ಒಂದೇ ತರಹ ಇದ್ದುವು. ಆ ಮನುಷ್ಯನನ್ನು ಕುರಿತು "ಏನಪ್ಪಾ; ನಮ್ಮ ಪುಣ್ಯದಿಂದ ನಡುದಾರಿಯಲ್ಲೆ ದೇವರು ನಮ್ಮ ಆಶಯವನ್ನು ಕೈಕೂಡಿಸಿದ. ಎಲ್ಲಾ ವಿಧದಲ್ಲಿಯೂ ನಿಮ್ಮ ಕುಮಾರಿಯರು ನಮ್ಮ ಕುಮಾರರನ್ನು ಹೋಲುತ್ತಾರೆ. ಇದೇ ಮಾತು, ಮದುವೆಯ ನಿಶ್ಚಯ ಮಾಡಿಬಿಡೋಣ" ಎಂದು ಚಿತ್ರಪಟಗಳನ್ನು ಅದಲು ಬದಲು ಮಾಡಿಕೊಂಡು "ಊರು ತಲುಪಿದ ತಕ್ಷಣ ಒಪ್ಪಿಗೆಗೆ ಉತ್ತರ ಬರೆಯಿರಿ, ಮತ್ತು ಕಲ್ಯಾಣದ ದಿನವನ್ನು ನಿರ್ಧರಿಸಿ ತಿಳಿಸಿ" ಎಂದು ಅವನಿಗೆ ನಮಸ್ಕರಿಸಿ, ಅಂದಿನ ರಾತ್ರಿಯನ್ನು ಜೊತೆಯಲ್ಲಿಯೇ ಕಳೆದು ಒಬ್ಬರನ್ನೊಬ್ಬರು ಬೀಳ್ಕೊಂಡರು.

ಸುಮಾರು ಎಂಟು ದಿನಗಳ ಹೊತ್ತಿಗೆ ಮಂದಾರಪುರದಿಂದ ಉತ್ತರ ಬಂದಿತು: "ನಮ್ಮ ಕುವರಿಯರು ಒಪ್ಪಿದ್ದಾರೆ. ನಿಮಗೆ ಬೇಕಾದ ದಿವಸ ಬಂದು ಕಲ್ಯಾಣ ಮಾಡಿಕೊಂಡು ಹೋಗಬಹುದು" ಎಂದು. ಅವರ ಉತ್ತರಕ್ಕೆ ರಾಜನಗರಿಯ ರಾಜನು "ಇನ್ನು ಹದಿನೈದು ದಿನಗಳಿಗೆ ಪರಿವಾರ ಸಮೇತ ಬರುತ್ತೇವೆ. ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಳ್ಳಿ" ಎಂದು ಮಾರುತ್ತರ ಕಳಿಸಿದನು. ಹೊರಡುವ ದಿನವೂ ಬಂದಿತು. ಅಂದು ಪಟ್ಟಣದಲ್ಲೆಲ್ಲಾ ಸಂಭ್ರಮವೋ ಸಂಭ್ರಮ. ನಗರಿಯನ್ನು ತಳಿರು ತೋರಣಗಳಿಂದ ಸಿಂಗರಿಸಿ, ರಾಜಕುಮಾರರಿಗೆ ಗಂಧ ಪುನಗು ಮೊದಲಾದ ಸುಗಂಧ ದ್ರವ್ಯಗಳನ್ನು ಪೂಸಿ, ಮಂಗಳಸ್ನಾನ ಮಾಡಿಸಿ, ಪ್ರಯಾಣಕ್ಕೆ ಸಿದ್ಧರಾದರು. ಎಲ್ಲರಿಗಿಂತಲೂ ಕಿರಿಯವನಾದ ಚಂದ್ರಮತಿಯನ್ನು ರಾಣಿಯೇ ಸ್ವತಃ ಸಿಂಗರಿಸಿ ಹೊರಡಿಸಿದಳು.

ಮೊದಲನೆಯ ದ್ವಾರವನ್ನು ದಾಟುವಾಗ ಮೇಲಿನಿಂದ ಸ್ವಲ್ಪ ಮಣ್ಣು ಉದುರಿಬಿತ್ತು. ಅದರಿಂದ ರಾಣಿಯು ಇದೇನೋ ಅಪಶಕುನವೆಂದು ಮನಸ್ಸಿನಲ್ಲಿಯೆ ಹೆದರಿದಳು. ಎರಡನೆಯ ಬಾಗಿಲು ದಾಟುವಾಗ ಒಂದು ಚೇಳು ಇದಿರಿಗೆ ಬಂತು. ರಾಣಿ ಕುಮಾರನನ್ನು ಕುರಿತು "ಇದೇನೋ ಶಕುನ ಚೆನ್ನಾ

ಗಿಲ್ಲ. ನಾಳೆ ಹೋಗೋಣ"ವೆಂದು ತಡೆದಳು. ಆದರೆ ಚಂದ್ರಮತಿಯು ಅದನ್ನು ಲೆಕ್ಕಿಸದೆ "ಇದೆಲ್ಲಾ ಅಪಶಕುನವಲ್ಲ. ಇಂಥಾ ಅಲ್ಪಪ್ರಾಣಿಗಳಾದಿಯಾಗಿ ನನ್ನ ಮದುವೆಯಲ್ಲಿ ತಿಂದು ತೇಗುತ್ತವೆ ಎಂದು ತೋರುತ್ತದೆ. ಬಾರಮ್ಮ" ಎಂದು ಮುಂದೆ ನಡೆದು ಎಲ್ಲರೊಡನೆ ಸೇರಿ ಪಯಣಬೆಳಸಿದನು.

ದಿನವೆಲ್ಲಾ ಪ್ರಯಾಣಮಾಡಿ ಸಂಜೆಯಹೊತ್ತಿಗೆ ಮಂತ್ರಿಯು ವಧುಗಳನ್ನು ನಿಶ್ಚಯಿಸಿಕೊಂಡು ಬಂದಿದ್ದ ಸ್ಥಳವನ್ನು ತಲಪಿದರು. ಅಲ್ಲಿಗೆ ಹೊತ್ತು ಮುಳುಗಿ ಕತ್ತಲಾಯಿತು. ಅಲ್ಲಿಯೆ ಬೀಡುಬಿಟ್ಟರು. ಆ ಅಡವಿಯಲ್ಲಿ ಮಲ್ಲಾರಚೌಡಿ, ಗುಳಿಗುಳಿ, ಮಾಯಾವತಿ, ನಾಗಿನಿ, ಐರಾವತಿ ಎಂಬ ಐವರು ಋಷಿಕನ್ಯೆಯರು ವಾಸವಾಗಿದ್ದರು. ಅವರು ಪ್ರತಿ ದಿನವೂ ಜಲಕ್ರೀಡೆಗೆ ಆ ಭಾವಿಗೆ ಬರುತ್ತಿದ್ದರು. ಅವರು ಮಾಯೆಮಾಟಗಳಲ್ಲಿ ಅಪ್ರತಿಮರೆನಿಸಿದ್ದರು. ಅಂದು ಆ ಕೂಪಕ್ಕೆ ಬಂದು ತಮ್ಮ ಕ್ರೀಡೆಯನ್ನು ಮುಗಿಸಿ ಉಡುಪು ಧರಿಸಿ ಹೊರಡುವಾಗ ನಾಲ್ಕನೆಯವಳಾದ ನಾಗಿನಿಯ ದೃಷ್ಟಿ ರಾಜಪರಿವಾರದೆಡೆಗೆ ಹರಿಯಿತು. ಅದೇನೆಂದು ಪರೀಕ್ಷಿಸಲು ಎಲ್ಲರೂ ಅಲ್ಲಿಗೆ ಹೋದರು. ಒಂದು ಕಡೆಯಿಂದ ನೋಡಿಕೊಂಡು, ಚಂದ್ರಮತಿ ಪವಡಿಸಿದ್ದ ಸ್ಥಳಕ್ಕೆ ಬಂದು, ಅವನ ರೂಪಿಗೆ ಮೋಹಿಸಿ, ಅವನನ್ನು ಅಲ್ಲಿಂದ ಅಪಹರಿಸಿ, ಕಾನನದ ಮಧ್ಯದಲ್ಲಿದ್ದ ಕಾಳಿಕಾದೇವಾಲಯಕ್ಕೆ ತಂದರು. ಅವನ ತಲೆಯಿಂದ ಎರಡು ಕೂದಲನ್ನು ಕಿತ್ತು, ಅಂಗಾಲಲ್ಲಿ ಏರಿಸಿ ಗಂಟುಹಾಕಿ, ಅವನಿಗೆ ಜ್ಞಾನ ತಪ್ಪಿಸಿ ಹೊರಟುಹೋದರು.

ಬೆಳಗಾಯಿತು. ತಾಯಿಯ ಗೋಳು ಹೇಳತೀರದು! ಭೂತಾಯಿ ಏನಾದರೂ ನುಂಗಿದಳೋ! ವನರಾಣಿಯೇನಾದರೂ ಕದ್ದಳೋ! ರಾಕ್ಷಸಿಗಳೇನಾದರೂ ಕದ್ದೊಯ್ದವೋ! ಎಂಬುದಾಗಿ ಹಲುಬತೊಡಗಿದಳು. ಬಿಡಾರದಲ್ಲಿ ಗಲಿಬಿಲಿಯುಂಟಾಯಿತು. ಮುಂದೇನು ಗತಿ? ಮಂದಾರಪುರದರಸಿಗೆ ಏನು ಹೇಳಬೇಕು? ಆರು ಜನ ರಾಜಕುಮಾರರಿದ್ದು, ಕಡೆಯವನು ಏಕೆ ಬರಲಿಲ್ಲವೆಂದರೆ ಹೇಳುವುದೇನು? ಎಂಬ ಅನೇಕ ಸಮಸ್ಯೆಗಳುದಿಸಿದವು. ಆದರೆ ಕುಶಲಮತಿಯಾದ ಮಂತ್ರಿ ಅವರೆಲ್ಲರಿಗೂ ಸಮಾಧಾನ ಹೇಳಿ, ಅವರಿಗೆ ನಾನು ಉತ್ತರ ಕೊಡುತ್ತೇನೆಂದು ಭರವಸೆಯಿತ್ತು, ಮಂದಾರಪುರದಭಿಮುಖವಾಗಿ ಪ್ರಯಾಣಮಾಡಿ ಆ ಪಟ್ಟಣವನ್ನು ತಲಪಿದನು. ಆ ಪುರಿಯ ರಾಜನು

ಬಹಳ ವಿಜೃಂಭಣೆಯಿಂದ ಅವನನ್ನು ಇದಿರುಗೊಂಡು ಉಚಿತವಾದ ಬಿಡದಿಗಳಲ್ಲಿರಿಸಿದನು. ಮದುವೆಯ ದಿನ ಒದಗಿ ಬಂತು. ಆಗ ರಾಜನಗರಿಯ ಮಂತ್ರಿಯು ಅವರಿಗೆ "ಚಿಕ್ಕ ರಾಜಕುಮಾರನು ಕಾರ್ಯಾರ್ಥವಾಗಿ ನಮ್ಮ ಪಟ್ಟಣದಲ್ಲಿಯೇ ಉಳಿಯಬೇಕಾಗಿ ಬಂತು. ಆದ್ದರಿಂದ ಅವನ ಚಂದ್ರಾಯುಧಕ್ಕೆ ನಿಮ್ಮ ಮಗಳನ್ನು ಧಾರೆಯೆರೆದುಕೊಡಿ" ಎಂದು ಕೇಳಿದನು. ಅದರಂತೆಯೇ ಮದುವೆಯು ವರನಿಲ್ಲದಿದ್ದರೂ ಸಡಗರದಿಂದ ನೆರವೇರಿತು.

ಇತ್ತ ಕಾಳೀದೇವಾಲಯದಲ್ಲಿ ರಾಜಕುಮಾರ ಮೈಮರೆದು ಮಲಗಿದ್ದಾನೆ. ಆ ರಾತ್ರಿ ಋಷಿಕನ್ನಿಕೆಯರು ಬಂದು ಅವನನ್ನು ಎಬ್ಬಿಸಿದರು. ಅವನು ಎದ್ದು ಕುಳಿತು ಸುತ್ತಲೂ ನೋಡಿ ಗಾಬರಿಗೊಂಡು, "ಅಮ್ಮಾ, ನೀವು ಯಾರು? ನಮ್ಮ ತಾಯಿ ಎಲ್ಲಿ?" ಎಂದು ಕೇಳಲು, ಅವರು ನಸುನಗುತ್ತಾ "ಇನ್ನೆಲ್ಲಿಯ ಅಮ್ಮ? ನಾವು ಋಷಿಪುತ್ರಿಯರು. ನಿನ್ನ ರೂಪಿಗೆ ಸೋತು ಇಲ್ಲಿಗೆ ತಂದಿದ್ದೇವೆ. ನಮ್ಮನ್ನು ಕೂಡಿ ನಮ್ಮನ್ನು ತಣಿಸು ಬಾ" ಎಂದರು. ಅವನು ನಮ್ರತೆಯಿಂದ "ಅಮ್ಮಾ, ನನ್ನನ್ನು ನನ್ನ ತಾಯಿಯ ಹತ್ತಿರ ಬಿಟ್ಟುಬನ್ನಿ. ಅವಳು ಅದೆಷ್ಟು ನೊಂದುಕೊಳ್ಳುತ್ತಾಳೋ, ದುಃಖಿಸುತ್ತಾಳೋ. ನಿಮಗೆ ಎಂದಿಗೂ ಋಣಿಯಾಗಿರುತ್ತೇನೆ" ಎಂದನು.

ಮೂರನೆಯ ಮಾಯಾವತಿ "ನಿನ್ನನ್ನು ತಂದಿರುವುದು ಬಿಡುವುದಕ್ಕಲ್ಲ, ನಿನ್ನೊಡನೆ ನಲಿದು ಸುಖವನ್ನನುಭವಿಸಲು. ಇನ್ನು ನಿನ್ನ ತಾಯಿ ತಂದೆಗಳ ಚಿಂತೆ ಬಿಟ್ಟು ನಮ್ಮೊಡನೆ ಸಂತೋಷವಾಗಿರು, ಬಾ" ಎಂದು ಕೈ ಹಿಡಿದಳು.

ರಾಜಕುಮಾರನು ಸಿಟ್ಟಿನಿಂದ ಕೈ ಬಿಡಿಸಿಕೊಂಡು, "ಥೂ ನೀಚರೆ! ಪರಪುರುಷರನ್ನು ಅಪಹರಿಸಿ ನಿಮ್ಮ ಕಾಮವನ್ನಡಗಿಸುವಂತೆ ಪೀಡಿಸಲು ನಾಚಿಕೆಯಾಗುವುದಿಲ್ಲವೆ? ಮರ್ಯಾದೆ ಮೀರಿ ಮಾತಾಡದೆ ನನ್ನನ್ನು ಬಿಟ್ಟುಬಿಡಿ" ಎಂದನು.

ಐದನೆಯ ಐರಾವತಿ "ಪಾಪ! ಎಷ್ಟು ಗುಣಸಂಪನ್ನ ನೀನು! ಬೋಧನೆ ಸಾಕು, ಸಾಕು ನಿನ್ನ ವಾದ. ತುಸು ವಿರಾಮಕೊಡುತ್ತೇವೆ. ಯೋಚಿಸು, ದುಡುಕಿದರೆ ಒಳಿತಲ್ಲ" ಎಂದು ಹೇಳಿ, ಅವನನ್ನು ಮೊದಲಿನ ಹಾಗೆ ಮಲಗಿಸಿ ಹೊರಟುಹೋದರು.

ಮಂದಾರಪುರದಲ್ಲಿ ಎಲ್ಲಾ ಶಾಸ್ತ್ರಗಳನ್ನು ಮುಗಿಸಿಕೊಂಡು ವಧುಗಳನ್ನು ಜೊತೆಯಲ್ಲಿ ಕರೆದುಕೊಂಡು ರಾಜ ನಗರಿಗೆ ಬಂದು ಸೇರಿದರು. ಹೀಗೆಯೇ ಕೆಲವು ದಿನಗಳು ಕಳೆದರೂ ರಾಜಕುಮಾರನ ಸುಳಿವೇ ಇಲ್ಲದಿರಲು, ಚಂದ್ರ ಮತಿಯು (ರಾಜಕುಮಾರಿ) ತನ್ನ ಅತ್ತೆಯನ್ನು ಕೇಳಿದಳು. ಅವಳು ಅಂಜುತ್ತಾ ನಡೆದ ಸಮಾಚಾರವನ್ನು ಹೇಳಿ, "ನಿನ್ನನ್ನು ವರಿಸಲು ಬಂದು ನನ್ನ ಮಗ ಅಡವಿಪಾಲಾದ. ಎಷ್ಟು ಸುಕೃತವಂತೆಯಮ್ಮಾ ನೀನು!" ಎಂದು ಅವಳನ್ನೇ ಮೂದಲಿಸಿದಳು. ಆ ಮಾತುಗಳನ್ನು ಕೇಳಿ ಅರಸುಕುಮಾರಿಗೆ ಬಹಳ ನೋವಾಯಿತು. "ನನ್ನಿಂದ ನನ್ನ ಪತಿಯು ಗತಿಸಿದನೆ! ನಾನು ಬದುಕಿ ಫಲವೇನು? ಪ್ರಾಣಪ್ರಿಯನೇ ಇಲ್ಲದಮೇಲೆ ನಾನಿದ್ದು ಸಾಧಿಸುವುದೇನು? ಇನ್ನು ಈ ಪ್ರಾಣ ಧರಿಸಿ ಇರಬಾರದೆಂದು ನಿರ್ಧರಿಸಿ, ಆ ರಾತ್ರಿ ತನಗೆ ಬೇಕಾದ ವಸ್ತುಗಳನ್ನು ತೆಗೆದುಕೊಂಡು ಲಾಯಕ್ಕೆ ಹೋಗಿ ಒಂದು ತೇಜಿಯನ್ನೇರಿ ಪಟ್ಟಣವನ್ನು ತೊರೆದು ಮನೋವೇಗದಿಂದ ಮನಹರಿದೆಡೆ ಓಡಿಸಿದಳು. ರಾತ್ರಿ ಯೆಲ್ಲಾ ದಾರಿ ಸಾಗಿ ಬೆಳಗಾಗುವ ಹೊತ್ತಿಗೆ ದಟ್ಟವಾದ ಅಡವಿಯನ್ನು ಸೇರಿದಳು. ಅಲ್ಲಿ ಇಳಿದು ಕುದುರೆಯನ್ನು ಒಂದು ಮರಕ್ಕೆ ಬಂಧಿಸಿ, ಅದೇ ಮರವನ್ನು ಹತ್ತಿ ತನ್ನ ಕೇಶಗಳಿಂದ ಉರುಲು ಹಾಕಿಕೊಳ್ಳಲು ಮರದ ಕೊಂಬೆಗೆ ಕಟ್ಟಿ, ದೇವರನ್ನು ಮನದಲ್ಲಿ ಧ್ಯಾನಿಸಿ, "ಮುಂದಿನ ಜನ್ಮದಲ್ಲಿ ನನ್ನ ಪತಿ ನನಗೆ ಲಭಿಸಲಿ" ಎಂದು ಬೇಡಿ ನೇತು ಬೀಳುವಷ್ಟರಲ್ಲಿ "ಅಮ್ಮಾ ಭಿಕ್ಷೆ" ಎಂಬ ಧ್ವನಿಯು ಕೇಳಿಸಿತು. ತಿರುಗಿ ನೋಡುತ್ತಾಳೆ: ಒಬ್ಬ ಗೋಸಾಯಿ ಕೆಳಗೆ ನಿಂತಿದ್ದ. ಅವನನ್ನು ಕುರಿತು "ಅಪ್ಪಾ, ನಾನೀಲೋಕವನ್ನು ತೊರೆದು ಪರಲೋಕದ ಯಾತ್ರೆಯಲ್ಲಿದ್ದೇನೆ. ನಿನಗಾವ ಭಿಕ್ಷೆ ಕೊಡಲಿ? ನನ್ನಲ್ಲಿ ಏನಿದೆ ಹೇಳು?" ಎನಲು "ಅಮ್ಮಾ, ನಾನು ಯಾಚಿಸುವುದು ಯಾವ ವಸ್ತು ವನ್ನೂ ಕುರಿತಲ್ಲ. ನಿನ್ನ ಉದ್ಯಮವನ್ನು ಬಿಟ್ಟು ಕೆಳಗೆ ಬಾ. ಹೇಳುತ್ತೇನೆ" ಎಂದನು. ಅವಳು ಕೆಳಗಿಳಿದು ಬರಲು "ಅದೋ ಅಲ್ಲಿ ನೋಡು" ಎಂದು ಕೈತೋರಿ ಮಾಯವಾದನು. ಅವಳು ಕೌತುಕದಿಂದ ಆಕಡೆ ನೋಡಲು, ಮರ ಗಿಡ ಬಳ್ಳಿಗಳು ಒತ್ತಾಗಿ ಬೆಳೆದು ನಿಂತಿವೆ! ಅವುಗಳ ಮಧ್ಯೆ ಒಂದು ಇಕ್ಕಟ್ಟಾದ ದಾರಿ ಇತ್ತು. ಅದನ್ನು ಕಂಡು ಅವಳಿಗೆ ಅಲ್ಲಿ ಹೋಗಿ ನೋಡ ಬೇಕೆಂಬ ಉತ್ಸುಕತೆಯುಂಟಾಯಿತು.

ಅಲ್ಲಿಂದ ಆ ದಾರಿಯಲ್ಲಿ ನಡೆದು ಒಂದು ವಿಶಾಲವಾದ ಬಯಲನ್ನು ಸೇರಿದಳು. ಅಲ್ಲಿ ಒಂದು ದೇವಾಲಯ, ಅದಕ್ಕೆ ಒಂದು ಬಾಗಿಲು, ಆ ಬಾಗಿಲಿಗೆ ದೊಡ್ಡದೊಂದು ಗುಂಡು ದಬ್ಬಿ ಮುಚ್ಚಿದ್ದಾರೆ. ಹತ್ತಿರ ಹೋಗಿ ಅಲುಗಿಸುತ್ತಾಳೆ —ಅದು ಭದ್ರವಾಗಿದ್ದ ಹಾಗೆ ಕಂಡಿತು. ಕಾಳಿಯನ್ನು ಭಜಿಸಿ, ತನ್ನ ಶಕ್ತಿ ಯೆಲ್ಲವನ್ನೂ ಬಿಟ್ಟು ನೂಕಿದಳು. ಅದು ಓರೆಯಾಗಿ ಅವಳಿಗೆ ದಾರಿ ಕೊಟ್ಟಿತು. ಒಳಹೊಕ್ಕರೆ—ಕಾಳಿಯು ಗರ್ಭಗುಡಿಯಲ್ಲಿ ತನ್ನ ವಿಕೃತಾಕೃತಿ ಯಿಂದ ಮೆರೆಯುತ್ತಿದ್ದಾಳೆ. ವಿಗ್ರಹದ ಮುಂದೆ ಒಂದು ನಿರ್ಜೀವ ದೇಹ ಬಿದ್ದಿದೆ. ಹತ್ತಿರ ಹೋಗಿ ಅಲುಗಾಡಿಸುತ್ತಾಳೆ, ಮಾತನಾಡಿಸುತ್ತಾಳೆ— ಉತ್ತರವಿಲ್ಲ. ಮುಖ ತಿರುವಿ ನೋಡುತ್ತಾಳೆ—ತನ್ನ ಪತಿ! ದುಃಖ ಉಮ್ಮಳಿಸಿ ಬಂತು. ಆದರೂ ತಡೆದು, ಮೈಯೆಲ್ಲಾ ತಡವಿದಳು. ಅಂಗಾಲಲ್ಲಿ ಏನೋ ಎಡವಿದ ಹಾಗಾಯಿತು. ನೋಡಿದರೆ—ಕೂದಲಿನ ಗಂಟುಗಳು ಕಂಡವು. ನಿಧಾನವಾಗಿ ಅವುಗಳನ್ನು ಬಿಚ್ಚಲು, ಅವನು ಎದ್ದು ಕುಳಿತು, "ನೀನು ಯಾರು?" ಎಂದು ಕೇಳಲು, ಅವಳು ನಡೆದ ವಿಷಯವೆಲ್ಲವನ್ನೂ ತಿಳಿಸಿದಳು. ಆಗ ಅವನು ತನ್ನ ದುಃಸ್ಥಿತಿಯನ್ನು ನೆನೆದು ಹಲುಬಿದ, ರೋದನ ಮಾಡಿದ. "ಇಲ್ಲಿಂದ ಪಾರಾಗಿ ಹೋಗಲು ಸಾಧ್ಯವಿಲ್ಲ. ನಾನು ರಾಕ್ಷಸ ನಾರಿಯರ ಕೈಗೆ ಸಿಕ್ಕಿದ್ದೇನೆ" ಎಂದನು. ಅವಳು ತನ್ನ ಪತಿಯನ್ನು ಸಮಾಧಾನಪಡಿಸಿ "ಬಿಡಿಸಿಕೊಳ್ಳಲು ಪ್ರಯತ್ನಿಸುತ್ತೇನೆ" ಎಂದು ಅವನಿಗೆ ಹೇಳಿ ಪಟ್ಟಣಕ್ಕೆ ಹಿಂದಿರುಗಿ ಹೋದಳು.

ರಾತ್ರಿಯಾಯಿತು. ಋಷಿ ಕನ್ನಿಕೆಯರು ಬಂದು, ಯಥಾರೀತಿ ಅವನನ್ನು ಎಬ್ಬಿಸಿ ತಮ್ಮ ಕೋರಿಕೆಯನ್ನು ಈಡೇರಿಸುವಂತೆ ಪೀಡಿಸುತ್ತಾರೆ. ಅವನು ಒಪ್ಪದಿರಲು "ಥೂ ಷಂಡ! ನಾವು ಎಷ್ಟು ವಿಧವಾಗಿ ಕಾಡಿದರೂ ಬೇಡಿದರೂ, ಒಂದಿಷ್ಟೂ ಕರುಣೆ ಇಲ್ಲದೆ ಹಠ ಮಾಡುತ್ತಿರುವೆಯಾ! ನೋಡು, ನಾಳೆ ಈ ನಿನ್ನ ಹಠವನ್ನು ನಿನ್ನನ್ನು ಉಪ್ಪಿನ ಮಡುವಿನಲ್ಲಿ ತುಳಿಯುವಾಗ ಸಾಧಿಸಿಕೋ" ಎಂದು ಸಿಟ್ಟಾಗಿ ಹೊರಟುಹೋದರು.

ಮಾರನೆಯ ದಿನ ರಾಜಕುಮಾರಿಯು ತನ್ನ ಪತಿಗೋಸ್ಕರವಾಗಿ ನಾನಾ ರೀತಿಯ ತಿಂಡಿ ತೀರ್ಥಗಳನ್ನು ತಯಾರಿಸಿಕೊಂಡು, ಹೊತ್ತಿಗೆ ಮುಂಚೆ ಬಂದು ತನ್ನ ಗಂಡನನ್ನು ಎಬ್ಬಿಸಿ, ಅವುಗಳನ್ನು ತಿನ್ನಿಸಿ ಸಂತೋಷದಿಂದ

ಹರಟುತ್ತಿರಲು, ಚಂದ್ರಮತಿಯು "ನೀನು ಏನು ಸಂತೋಷಪಟ್ಟರೂ ಇದೊಂದೇ ದಿನ. ನಾಳೆ ನನ್ನನ್ನು ಉಪ್ಪಿನ ಮಡುವಿಗೆ ಹಾಕಿ ತುಳಿಯುತ್ತಾರಂತೆ" ಎಂದು ಸಂಕಟಪಟ್ಟನು. ಅವಳಿಗೆ ಎಲ್ಲೂ ಇಲ್ಲದ ದುಃಖವುಂಟಾಯಿತು. "ಇಲ್ಲಿಯಾದರೂ ನಮ್ಮ ಕೂಡುವಿಕೆಗೆ ಎಡೆಯಿಲ್ಲದಂತಾಯಿತೆ! ಅಯ್ಯೋ! ಪರಮೇಶ್ವರಾ! ನಾವು ಎಷ್ಟು ಪಾಪಮಾಡಿ ಈ ಜನ್ಮ ತಾಳಿದ್ದೇವೊ? ಮುಂದೆ ದಾರಿಯೇನು?" ಎಂದು ಯೋಚಿಸಿ, ತನ್ನ ಪ್ರಾಣೇಶ್ವರನಿಗೆ "ದೇವರು ಮಾಡಿದಂತಾಗಲಿ. ನಾನು ನಿನಗೆ ಐದು ಮಲ್ಲಿಗೆಯ ಹೂವುಗಳನ್ನು ಕೊಡುತ್ತೇನೆ. ನಾಳೆ ಅವರು ನಿನ್ನನ್ನು ತೆಗೆದುಕೊಂಡು ಹೋಗುವಾಗ ಜ್ಞಾನ ಬರುವಂತೆ ಮಾಡಿ ತೆಗೆದುಕೊಂಡು ಹೋಗುತ್ತಾರೆ. ಆಗ ನೀನು ಒಂದು ಹರಿದಾರಿ ದಾಟಿದ ತಕ್ಷಣ ಒಂದು ಪುಷ್ಪವನ್ನು ಉದುರಿಸು. ಅವುಗಳ ಗುರುತಿನಿಂದ ನಾನು ಅಲ್ಲಿಗೆ ಬರುತ್ತೇನೆ. ದೇವರ ಕೃಪೆ ಇದ್ದರೆ ತಪ್ಪಿಸಿಕೊಂಡು ಹೋಗೋಣ. ಇಲ್ಲವಾದರೆ ಜೊತೆಯಲ್ಲೇ ಪ್ರಾಣ ಬಿಡೋಣ" ಎಂದು ಹೇಳಿ, ಆ ದಿನವನ್ನು ಕಳೆದು, ಖಿನ್ನಮುಖದಿಂದ ಹಿಂದಿರುಗಿದಳು.

ಬೆಳಕು ಮರೆಯಾಗಿ ಕತ್ತಲಾಗುತ್ತಲೇ ಋಷಿಕನ್ನೆಯರು ಕಾಳಿಯ ದೇಗುಲಕ್ಕೆ ಬಂದು ರಾಜಕುಮಾರನನ್ನು ತೆಗೆದುಕೊಂಡು ತಮ್ಮ ಮಂತ್ರಶಕ್ತಿಯಿಂದ ಅಂತರಿಕ್ಷಮಾರ್ಗವಾಗಿ ಹಾರಿದರು. ಒಂದು ಹರಿದಾರಿ ಕಳೆಯಿತು. ಅಲ್ಲಿ ಒಂದು ಹೂ ಉದುರಿಸಿದ. ಹೀಗೆಯೇ ಐದು ಹೂಗಳೂ ಮುಗಿದವು. ಅವರ ಸ್ಥಳವೂ ಬಂದಿತು. ಅಲ್ಲಿ ಅವರು ಒಂದು ಮಾಯಾಗೃಹವನ್ನು ನಿರ್ಮಿಸಿ, ಅದರಲ್ಲಿ ಅವನನ್ನಿರಿಸಿ, "ನೋಡು, ಇನ್ನೊಂದು ದಿವಸ ಗಡು ಕೊಟ್ಟಿದ್ದೇವೆ. ಅಷ್ಟರಲ್ಲಿ ಯೋಚಿಸಿ, ನಿನಗೆ ಉಚಿತವಾದುದನ್ನು ಆರಿಸಿಕೊ" ಎಂದು ಎಚ್ಚರಿಸಿ, ಇಬ್ಬರನ್ನು ಆ ನಿಲಯದ ದ್ವಾರಕ್ಕೆ ಕಾವಲಿರಿಸಿ ಹೋದರು.

ರಾಜಕುಮಾರಿ ಬಂದು ದೇವಾಲಯದಲ್ಲಿ ನೋಡುತ್ತಾಳೆ: ರಾಜಕುಮಾರನಿಲ್ಲ. ಯಾವ ಕಡೆಗೆ ಒಯ್ದಿದ್ದಾರೋ ಎಂದು ಕಳವಳವುಂಟಾಯಿತು. ದೇವರೇ ಗತಿ ಎಂದು ತನ್ನ ಕುದುರೆ ಓಡಿದ ದಿಕ್ಕಿಗೆ ಹೊರಟಳು. ಒಂದು ಹರಿದಾರಿ ಕಳೆಯಿತು. ಅಲ್ಲಿ ಒಂದು ಹೂ ಸಿಕ್ಕಿತು. ಅದೇ ಜಾಡನ್ನನುಸರಿಸಿ ಮುಂದೆ ಸಾಗಿದಳು. ಕಡೆಗೆ ಮಾಯಾಗೃಹವನ್ನು ಸೇರಿದಳು. ಅಲ್ಲಿಗೆ ಹೋಗಿ ದ್ವಾರವನ್ನು ಮುಟ್ಟಲು, ಕಾವಲಿರಿಸಿದ್ದ ಮಂತ್ರದ ಮನುಷ್ಯರು

ಅವಳನ್ನು ಹಿಡಿದುಕೊಂಡರು. ತತ್‌ಕ್ಷಣವೇ ಚಂದ್ರಾಯುಧದಿಂದ ಅವರನ್ನು ಕತ್ತರಿಸಿ, ಒಳಹೊಕ್ಕು, ಪತಿಯನ್ನೆಬ್ಬಿಸಿ ತಪ್ಪಿಸಿಕೊಂಡುಹೋಗಲು ಕುದುರೆಯನ್ನೇರಿ ಹೊರಟಳು. ಆದರೆ! ಕುದುರೆ ಮುಂದೆ ಒಂದು ಹಜ್ಜೆಯನ್ನೂ ಇಡಲಿಲ್ಲ. ಆ ಮಾಟಗಾತಿಯರು ಕಟ್ಟು ಕಟ್ಟಿದ್ದಾರೆ ಎಂಬುದು ಅವರಿಗೆ ತಿಳಿಯಿತು. "ಇನ್ನು ಬೇರೆ ಉಪಾಯವಿಲ್ಲ. ಸಾಯುವುದೇ ಶತಸ್ಸಿದ್ಧ" ಎಂದು ಮನವರಿಕೆಯಾಯಿತು. ಆಗ ರಾಜಕುಮಾರನನ್ನು ಮೊದಲಿನ ಸ್ಥಿತಿಯಲ್ಲಿ ಬಿಟ್ಟು, ತಾನು ಕಾಡಿನಲ್ಲಿ ಮರೆಯಾಗಿ, ಮುಂದಿನ ಘೋರ ಮರಣವನ್ನು ನೆನೆದು ಪರಿತಪಿಸಿ ರೋದನಮಾಡಲು ಮೊದಲಿಟ್ಟಳು. ಅದೇ ಕಾಲಕ್ಕೆ ಸರಿಯಾಗಿ ಕೈಲಾಸವಾಸಿ ಪಾರ್ವತೀ ಪರಮೇಶ್ವರರು ಸಂಚಾರ ಹೊರಟಿರಲು, ಈ ಶೋಕವು ಪಾರ್ವತಿಯ ಕಿವಿಗೆ ಮುಟ್ಟಿತು. ತತ್‌ಕ್ಷಣ ಆಕೆ ತನ್ನ ಪತಿಯನ್ನು ಕುರಿತು "ಯಾರೋ ನಾರಿ ಶೋಕಿಸುತ್ತಿದ್ದಾಳೆ. ಪಾಪ! ಅವಳಿಗೆ ಏನು ಸಂಕಟ ಒದಗಿದೆಯೋ ಹೋಗಿ ವಿಚಾರಿಸೋಣ" ಎಂದು ಬೇಡಿದಳು.

ಮರುಕ್ಷಣದಲ್ಲಿಯೇ ಅವರು ಚಂದ್ರಮತಿಯ ಮುಂದೆ ಮೈಯೊಡೆದು ನಿಂತು, ಅವಳ ದುಃಖಕ್ಕೆ ಕಾರಣ ತಿಳಿದು "ಅಮ್ಮಾ, ನೀನು ಸಂಕಟಪಡಬೇಡ. ಧೈರ್ಯದಿಂದಿರು. ಅವರು ನಿನ್ನ ಗಂಡನನ್ನು ಇಷ್ಟು ಜಾಗ್ರತೆ ಕೊಲ್ಲುವುದಿಲ್ಲ. ಸುಮ್ಮನೆ ಹೆದರಿಸಿ ತಮ್ಮ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇಲ್ಲಿ ಸ್ವಲ್ಪ ದೂರದಲ್ಲಿ ಅವರ ತಂದೆ ತಪಸ್ಸಿಗೆ ಕುಳಿತಿದ್ದಾನೆ. ಅವನನ್ನು ಮರೆಹೊಗು. ನಿನ್ನನ್ನವನು ಉದ್ಧರಿಸಿ ಕಾಪಾಡುತ್ತಾನೆ" ಎಂದು ಹೇಳಿ ಅಂತರ್ಧಾನವಾದರು.

ಅವರ ಮಾತಿನಂತೆ ರಾಜಕುಮಾರಿ ಅವನನ್ನರಸುತ್ತಾ ಹೊರಟಳು. ಆ ಋಷಿಯು ಕಣ್ಣುಮುಚ್ಚಿ ಅದೆಷ್ಟು ವರ್ಷಗಳಿಂದ ತಪಸ್ಸನ್ನಾಚರಿಸುತ್ತಾ ಕುಳಿತಿದ್ದನೋ! ಅವನ ಕೂದಲು ಜಡೆಕಟ್ಟಿ ಭೂಮಿಯಲ್ಲಿ ಇಳಿದಿದ್ದುವು. ದೂರದಿಂದ ಅವನನ್ನು ಕಂಡು ರಾಜಕುಮಾರಿಯ ಮನಸ್ಸು ಹಗುರವಾಯಿತು. ಬಂದವಳೆ ಅವನ ಕಾಲಮೇಲೆ ಉದ್ದವಾಗಿ ಬಿದ್ದು, ಪಾದಗಳನ್ನು ಬಿಗಿಯಾಗಿ ಹಿಡಿದು, ಅಳತೊಡಗಿದಳು. ಋಷಿಯು ಕಣ್ಣು ತೆರೆದು ಅವಳ ತಲೆಯನ್ನು ಸವರುತ್ತಾ, "ನೀನು ಯಾರಮ್ಮಾ? ಏಕೆ ಅಳುತ್ತಿದ್ದೀಯೆ? ನಿನಗೇನು ಬೇಕು ಹೇಳು" ಎನಲು "ಸ್ವಾಮಿ, ಮೊದಲು ನನಗೊದಗಿರುವ ಸಂಕಟವನ್ನು ಪರಿ

ಹರಿಸುತ್ತೇನೆಂದು ಅಭಯಕೊಟ್ಟರೆ ಹೇಳುತ್ತೇನೆ, ಇಲ್ಲವಾದರೆ ಇಲ್ಲಿಯೇ ಪ್ರಾಣ ತೊರೆಯುತ್ತೇನೆ" ಎಂದಳು.

ಋಷಿ "ಆಗಲಿ ಏಳಮ್ಮ. ನಿನಗೆ ಒದಗಿರುವ ಕಷ್ಟವೇನು? ಪಾರುಮಾಡುತ್ತೇನೆ" ಎಂದನು. ಚಂದ್ರಮತಿಯೆದ್ದು, ತನಗೆ ಬಂದ ಕಷ್ಟವನ್ನೂ ಅವನ ಮಕ್ಕಳೇ ಅದಕ್ಕೆ ಕಾರಣವೆಂಬುದನ್ನೂ ತಿಳಿಸಿದಳು. ಆಗ ತಪಸ್ವಿಯು "ಅಮ್ಮಾ, ನಾನಿಲ್ಲಿಂದ ಎದ್ದು ಬರುವ ಹಾಗಿಲ್ಲ. ಅವರು ಇಲ್ಲಿಗೆ ಬರುವಹಾಗೆ ನಿನಗೆ ಒಂದು ಉಪಾಯ ಹೇಳುತ್ತೇನೆ. ನಾನು ನಾಳೆ ಅವರಿಗೆ ಹೊಟ್ಟೆನೋವು ಕಣ್ಣುರಿ ಬರುವಂತೆ ಮಾಡುತ್ತೇನೆ. ನೀನು ವೈದ್ಯವೇಷವನ್ನು ಹಾಕಿಕೊಂಡು, ಮದ್ದು ಕೊಡುತ್ತೇನೆ ಎಂದು ಅವರನ್ನು ನಂಬಿಸಿ ನನ್ನಲ್ಲಿಗೆ ಕರೆದುತಾ. ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ" ಎಂದನು. ಅದರಂತೆ ಅವಳು ವೈದ್ಯವೇಷ ತಾಳಿ ಅವರನ್ನು ನಂಬಿಸಿ ಕರೆತಂದಳು. ತತ್‌ಕ್ಷಣವೇ ಅವರನ್ನು ಆ ಋಷಿಯು "ನಾನು ಮಮತೆಯಿಂದ ನಿಮ್ಮ ಕಲ್ಯಾಣಕ್ಕೋಸ್ಕರ ಎಲ್ಲಾ ವಿದ್ಯೆಗಳನ್ನು ಕಲಿಸಿದರೆ, ನೀವು ಅವುಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸದೆ ಪರರ ಪತಿಯನ್ನು ತಂದು ಆ ಹೆಣ್ಣಿನ ಹೊಟ್ಟೆಯನ್ನುರಿಸಿ ಗೋಳಾಡಿಸಿ, ಕಣ್ಣೀರಿಡಿಸಿ ಮೆರೆಯುವುದೆ!" ಎಂದು ಅವರ ಮುಂದಲೆಯನ್ನು ಜಗ್ಗಿಸಿ, ಹಲ್ಲುಗಳನ್ನು ಕಿತ್ತು, ಮಂತ್ರಭ್ರಷ್ಟರನ್ನಾಗಿ ಮಾಡಿ, "ಅವಳ ಪತಿಯನ್ನು ಅವಳಿಗೊಪ್ಪಿಸಿ" ಎಂದನು.

ಅನಂತರ ಚಂದ್ರಮತಿಯೂ ಅವಳ ಗಂಡನೂ ಆ ಋಷಿವರ್ಯರಿಗೆ ನಮಸ್ಕರಿಸಿ ತಮ್ಮ ಪಟ್ಟಣಕ್ಕೆ ತೆರಳಿದರು. ಆ ವೇಳೆಗೆ ಅವರ ತಂದೆ ತಾಯಿಗಳು ಮಗನ ಕೊರಗಿನಿಂದ ನೆಲಹಿಡಿದಿದ್ದರು. ಮಗನು ಬಂದ ಸುದ್ದಿಯನ್ನು ಕೇಳಿ ಅವರಿಗೆ ಆದ ಆನಂದ ಅಷ್ಟಿಷ್ಟಲ್ಲ. ತನ್ನ ಪತಿಯನ್ನು ಪಡೆದು ಬಂದ ಸೊಸೆಯನ್ನು ಬಾಯಿತುಂಬ ಹೊಗಳಿ "ಆಗ ಮದುವೆ ಮಾಡಿದ್ದಲ್ಲ, ಈಗ ಮದುವೆ!" ಎಂದು ತಿರುಗಿ ಪಟ್ಟಣವನ್ನು ಸಿಂಗರಿಸಿ, ಇಬ್ಬರಿಗೂ ಮದುವೆ ಮಾಡಿದರು. ಅಂದಿನಿಂದ ಅವರು ಸುಖವಾಗಿ ಇದ್ದರು.

—**ಬಿ. ಆರ್. ಸಂಜೀವರೆಡ್ಡಿ.**

[**ಈ ಕತೆ ಚಿತ್ರದುರ್ಗ ಡಿಸ್ಟ್ರಿಕ್ಟಿನ ಬೆಳಗಟ್ಟದ ಕಡೆ ಪ್ರಚಾರದಲ್ಲಿದೆ.**]

# ಗಳ-ಗಂಟೆ

"ಜೋ ಜೋ ಗಂಟೆ, ಗಳಗಂಟೆ,
ನಾನೆದ್ದು ಬಂದೇನಂದ್ರೇ
ತಾನೇದ್ದು ಬಂದಾನೇ
ಓಡ್ಹೋಗೊ ನನ್ನ ಗಳಗಂಟೇ"

ಬಾಗಿಲ ಮುಂದೆ ನಿಂತುಕೊಂಡು ಇಬ್ಬರು ಜೋಗಿತಿಯರು ಜೋಗುಳ ಹೇಳುತ್ತಿದ್ದರು. ಇನ್ನೂ ಏನೇನೋ ಹೇಳುವುದರಲ್ಲಿದ್ದ ಅವರನ್ನು ರಂಗಣ್ಣ ತಡೆದು ನಿಲ್ಲಿಸಿದ. ಆ ಬಾಗಿಲಲ್ಲೆ ಕುಳಿತು ಎಲೆ ಅಡಿಕೆ ಮೆಲ್ಲುತ್ತಿದ್ದ ಅವ.

"ಅದರ ಅರ್ತ ಒಡೆದು ಯೇಳ್ತಿರೇನವ್ವ?" ರಂಗಣ್ಣ ಕೇಳಿದ.

ಅವರ ಅವ್ವ ರಾಮಕ್ಕ "ಬಿಡೋ ರಂಗ. ಮುಂದಿನ ಮನೆಯಾಗೆ ಕಾಳಾದರೂ ಹಾಕಿಸಿಕೊಂಡಾರು ಹೋಗಿ. ಅವರ್ನ ಸುಮ್ನೆ ಯಾಕೆ ನಿಲ್ಲಿಸಿ ಕೊಳ್ತೀಯಾ?" ಎಂದು ಹೇಳಿದಳು. ಹಾಡು ಹೇಳಿದವರಲ್ಲಿ ಒಬ್ಬಳು "ಅದೆಲ್ಲ ನಾವೇ ಕಟ್ಟಿದ ಪದಗಳ್ ಕಣಪ್ಪ. ಕಾಳು ಹಾಕಲಿ ಅಂತ ಹೇಳೋಕೆ" ಎಂದು ಹೇಳಿ ಮುಂದಿನ ಮನೆಗೆ ಹೋಗುವುದರಲ್ಲಿದ್ದಳು. ಆದರೆ ರಂಗಣ್ಣ ಅವರನ್ನು ಅಷ್ಟಕ್ಕೆ ಬಿಡಲಿಲ್ಲ. ಅವನ ಸ್ವಭಾವವೇ ಹಾಗೆ. ಯಾರಾದರೂ ಒಂದು ಹಾಡು ಹೇಳಿದರೆ, ಅದನ್ನು ಕೇಳಿ ಅರ್ಥಮಾಡಿಕೊಂಡು, ತಾನೇ ಅನೇಕ ಸಾರಿ ಹಾಡಿಕೊಳ್ಳುತ್ತಿದ್ದ. ಅವ್ವನಿಂದ ಬೈಸಿಕೊಂಡು ಅವರಿಗೆ, ತಾನೇ ಮುದ್ದೆ ರಾಗಿ ಕೊಟ್ಟು, ಕೂರಿಸಿಕೊಂಡು, ಅನಂತರ ಪದದ ಅರ್ಥ ಕೇಳಿದ.

"ಅದೊಂದು ಕತ್ಯಾಗಬಿಡುತ್ತೆ ಕಣಪ್ಪಾ, ಯೇಳ್ತಾ ಓದ್ರೆ" ಎಂದಳು ಒಬ್ಬಳು ಜೋಗಿತಿ. ರಂಗಣ್ಣನ ಕುತೂಹಲ ಕೆರಳಿತು. "ಮುದ್ದೆ ಕೊಟ್ಟವನಿ, ರಾಗಿಕೊಟ್ಟವನಿ, ಇನ್ನೇನಾಗಬೇಕ್ರವ್ವ ನಿಮಗೆ? ಪಸಿ ಒತ್ತು ಕೂತಕೊಂಡು, ಅದೇನು ಕತೇ ಹೇಳಿದರೇನು ಮುಣಿಗಿಹೋಗ್ತೀತ ಪ್ರಪಂಚ?" ಎಂದ, ಸ್ವಲ್ಪ ಸಿಡುಕಿನಿಂದ. ಅರೆಮನಸ್ಸಿನಿಂದ ಹೆಂಗಸರು ಕುಳಿತುಕೊಂಡರು. ಅಷ್ಟು ಹೊತ್ತಿಗೆ ಕೆಲವು ಉತ್ಸಾಹಿ ಹೆಂಗಸರು ತಾವೂ ಕಥೆ ಕೇಳಲು ಬಂದು ಕುಳಿತರು. ಮನೆಯ ಹುಡುಗರೆಲ್ಲ ಸುತ್ತುಗಟ್ಟಿದ್ದರು.

"ಕತೇನ ಮೊಟಕುಮಾಡಿ ಹೋಗ್ರೇ ತಾಯಿ, ಮುಂದಿನ ಮನೆಗೆ" ಎಂದಳು ರಾಮಕ್ಕ. ಆದರೆ ಮಗ ರಂಗಣ್ಣ ಬಿಡಲಿಲ್ಲ. "ಸರಿಯಾಗಿ ಏಳ್ರಿ, ಇನ್ನೂ ಒಸಿ ಮುದ್ದೆ ಕೊಟ್ಟೇನಂತೆ" ಎಂದು ಕುಳಿತ.

ಒಬ್ಬಳು ಹಾಡಿನ ಅರ್ಥವನ್ನು ಸ್ವಲ್ಪದರಲ್ಲಿ ಹೇಳಿ ಮುಗಿಸುವ ಮನಸ್ಸಿನಿಂದ "ಇಲ್ಲಪ್ಪ. ಸರಿಯಾಗಿ ಏಳ್ತೀವಿ. ಮತ್ತೆ—ಒಬ್ಬ ಅವ್ವ ಅವಳ ಮಗನ್ನ ಜ್ವಾಲೆ(ಜೋಲಿ)ಗೆ ಮಲಗಿಸಿ, ಮಲಗಲಿ ಮಗಾಂತ ಮ್ಯಾಲೆ ಒಂದು ಗಂಟೆ ಕಟ್ಟಿ, ಆ ಗಂಟೆ ಮ್ಯಾಲೇನೆ ಪದಾ ಯೇಳ್ತಾಳೆ. ಮಗ ನಿದ್ದೆ ಓಗ್ತವ್ನೆ. ಅಷ್ಟೇ ಈ ಹಾಡಿನ ಅರ್ಥ. ಅದನ್ನೇ ನಾವೇಳಿದ್ದು" ಅಂದಳು.

ರಂಗಣ್ಣನಿಗೆ ಕತೆ ಮೊಟಕಾದ್ದು ಅರ್ಥವಾಗದಿದ್ದರೂ, ಹೆಂಗಸರಿಗೆ ಸವಾಲು ಹಾಕಿ ಕೇಳುತಾನೆ: "ಅಂಗಾದ್ರೇ ತೊಟ್ಲು ತೂಗ್ತಿದ್ದೋಳು 'ನಾನೆದ್ದು ಬಂದೇನಂದ್ರೇ ತಾನೇದ್ದುಬಂದಾನೇ, ಓಡ್ಹೋಗೊ ನನ್ನ ಗಳಗಂಟೆ' ಅಂತ ಯಾಕೆ ಹೇಳ್ತಾಳೆ?"

ಆಗ ಹೆಂಗಸರು ವಿಧಿಯಿಲ್ಲದೆ ಕಥೆಯನ್ನು ಪ್ರಾರಂಭಿಸಬೇಕಾಯಿತು. ರಂಗಣ್ಣನ ಹಠವನ್ನು ಕಂಡುಕೊಂಡಿದ್ದ ರಾಮಕ್ಕ ಅವರಿಬ್ಬರು ಹೆಂಗಸರಿಗೂ ಊಟಕ್ಕೆ ಬಡಿಸಿದಳು. ಅವರು ಊಟವಾದನಂತರ ಮನೆಯ ಅಂಗಳದಲ್ಲಿ ಕುಳಿತುಕೊಂಡರು. ಹಳ್ಳಿಯಲ್ಲಿ ಸರ್ವರೂ ಊಟ ತೀರಿಸಿಕೊಂಡು ನಿದ್ದೆ ಹೋಗುವ ಸಮಯ. ಆದರೆ ಕತೆಯನ್ನು ಕೇಳಲು ಅಪೇಕ್ಷೆಯುಳ್ಳವರೆಲ್ಲಾ ಅಲ್ಲಿ ನೆರೆದಿದ್ದರು. ತಾಂಬೂಲ ತಿನ್ನುತ್ತಿದ್ದರು. ಕಥೆ ಪ್ರಾರಂಭವಾಯಿತು.

"ಒಂದೂರಿನಲ್ಲಿ ಒಬ್ಬ ಶೆಟ್ಟಿ ಸಾವಕಾರ ಇದ್ದ. ಅವನಿಗೆ ಒಬ್ಬಳೇ ಒಬ್ಬಳು ಎಣ್ಣು ಮಗಳು. ಬಾಳ ಸುಖವಾಗಿ ಬೆಳಸಿದ್ದ ಶೆಟ್ಟಿ. ಶಾನೆ ಮುದ್ದು ಮಾಡಿ ಬೆಳಸಿದ್ದ. ಉಡುಗಿ ತಳತಳಾಂತ ಒಳೀತಿದ್ಲು. ಬಾಳ ಚಂದಾಗಿದ್ಲು. ಗುಣಾನೂ ಒಳ್ಳೇದೇ. ಆ ಊರಾಗೆ ಆ ಶೆಟ್ಟಿ ನೆಂಟ್ರೊಬ್ಬ್ರಿದ್ದರು. ಅವರೂ ಬಾಳ ದುಡ್ಡಿದ್ದೋರು. ಇಬ್ಬರ ಮನೆಗಳೂ ಇದಿರುಬದಿರಿಗಿದ್ದವು. ಅವರಿಗೆ ಒಬ್ಬನೇ ಒಬ್ಬ ಮಗ ಇದ್ದ. ಉಡುಗ ಒಳಿಯೋ ಚಂದ್ರಪ್ಪ ಇದ್ದಾಗೆ ಇದ್ದ. ಉಡುಗನ ಅಪ್ಪ ಅವ್ವ ಎಲ್ಲಾ ಸೇರಿಕಂಡು ಅವಗೆ ಮದ್ವೆ ಮಾಡಾನಾಂತ ನೋಡಿದ್ರು. ಆದ್ರೆ ಉಡುಗ ಒಪ್ಲೆವಲ್ಲ! ಯಾವ ಎಣ್ಣ್ ತೋರ್ಸಿದರೂ ಒಂದಲ್ಲ ಒಂದು ಊನಾ ಅಂತ ಏಳೋನು!"

ಅಷ್ಟು ಹೊತ್ತಿಗೆ ಸರಿಯಾಗಿ ರಂಗಣ್ಣನ ಗೆಳೆಯ ಕೆಂಚಪ್ಪ ಆಗ ತಾನೆ ಊಟಮಾಡಿ ಬಂದು "ಏನೋ ರಂಗಾ, ನಂಗ ಏಳ್ಲೆ ಇಲ್ಲವಲ್ಲೋ ಕತೆಸುದ್ದಿ? ಮುಂಚೇನೇ ಬರ್‍ತಿದ್ದೆ" ಎಂದು ಬೀಡಿ ಸೇದುತ್ತಾ ರಂಗಣ್ಣನ ಪಕ್ಕದಲ್ಲಿ ಕುಳಿತ. ಅವನಿಗೆ ಪುನಃ ಕತೆ ಹೇಳಿಸಿದ್ದಕ್ಕೆ ಕಾರಣ, ಹಾಡು, ಅದರ ಅರ್ಥ, ಎಲ್ಲ ವನ್ನೂ ಆದ್ಯಂತವಾಗಿ ತಿಳಿಸಿದ ಮೇಲೆ ಕತೆಯನ್ನು ಮುಂದುವರಿಸಲು ಅನು ಮತಿ ಇತ್ತ. "ಜೋಗೇರ್‍ರು ಆಡು ಬಲು ಪಸಂದ್ ಏಳ್ತಾರೆ ಕಣೋ" ಎಂದು ರಂಗನಿಗೆ ಹೇಳಿದ. "ಆಡನೂ ಯೇಳ್ತಾರೆ, ಕತೇನೂ ಅದ್ಕಿಂತ ಪಸಂದಾಗಿ ಏಳ್ತಾರೆ ಕೇಳೋ" ಎಂದು ರಂಗ ಹೇಳಿ ತನ್ನ ಮೆಚ್ಚಿಕೆಯನ್ನು ತೋರಿಸಿದ. ಇವರು ಮಾತನಾಡುತ್ತಿರುವಾಗ ಕತೆ ಹೇಳುತ್ತಿದ್ದವಳು ಸುಮ್ಮನಾಗಿದ್ದಳು. "ಕತೆ ನೆಪ್ಪು ಮಾಡಿಕೋತೀಯೇನವ್ವ?" ಎಂದು ಕೇಳಿದ ಕೆಂಚಣ್ಣ. ಅವಳು ಮಾತೇನನ್ನೂ ಆಡದೆ ಪುನಃ ಕತೆ ಮುಂದುವರಿಸಿದಳು.

" ಇಂಗೇ ಇರೋವಾಗ . . . "

"ಅಲ್ಲ ಕಣವ್ವಾ. ಆ ಉಡ್ಗಿ ಎಸ್ರೇ ಏಳ್ಲಿಲ್ಲ. ಏನದು? ಉಡುಗನ ಎಸರೇನು? ಇಬ್ಬರು ಶೆಟ್ಟಿ ಸಾವ್ಕಾರ್‍ರಿಗೂ ಏನು ಸೆಂಟಸ್ತನ?" ಎಂದು ಮಧ್ಯೆ ರಂಗಣ್ಣ ಪ್ರಶ್ನೆ ಹಾಕಿದ.

ಅದಕ್ಕವಳು "ಮರ್‍ತಿದ್ದೆ ಕಣಪ್ಪ. ಅವೆಳ್ಡು ಮನ್ಯೋರಿಗೂ ಆಗ್ತಿರನಿಲ್ಲ. ಒಬ್ರಿಗೊಬ್ರಿಗ ದ್ವೇಸ! ದುಡ್ಡಿದ್ದೋರೆಲ್ಲ ಅಂಗೆ ಅಲ್ವಾ? ಅವೆಳ್ಡು ಮನೆಗೂ ಎಣ್ಣು ಕೊಟ್ಟು ಎಣ್ಣು ತಂದಿದ್ದರಂತೆ. ಈಗಲೂ ಆ ಉಡಿಗ್ಗೂ ಈ ಉಡುಗ್ಗೂ ಮದ್ವೆ ಮಾಡಬೋದಿತ್ತು! ಆದ್ರೆ ಜಿದ್ದೊಂದೈತಲ್ಲಾ, ಅದ್ಕೇ ಮಾಡಿರ್‍ನಿಲ್ಲ. . . . . ಇಂಗೇ ಇರೋವಾಗ, ಊರ್‍ತುಂಬ ಸುದ್ದಿ! ಆ ಗುರಪ್ಪನಿಗೂ, ಸುಂದ್ರವ್ವನಿಗೂ ಗೆಣಿತನ ಬಿದ್ದದೇ ಅಂತ! ಮರ್‍ತಿದ್ದೆ—ಉಡ್ಗಿ ಎಸ್ರು ಸುಂದರೀಂತ; ಉಡ್ಗನೆಸ್ರು ಗುರಪ್ಪಾಂತ. ಈ ಸುದ್ದಿ ಅವರಪ್ಪ ಅವ್ವಗಳಿಗೂ ಮುಟ್ಟಿತೂ ಅನ್ನು.

"ಕಳ್ನೇಂಡ್ತಿ . . . " ಎಂದು ಮಧ್ಯೆ ಬಾಯಿ ಹಾಕಿದ ರಂಗಣ್ಣ.

"ಇಬ್ರು ಸಾವ್ಕಾರ್‍ರಿಗೂ ಸಿಟ್ಟು ಎಚ್ಚಾಗಿಬಿಡ್ತು. ಗುರಪ್ಪರಪ್ಪ ಉಡ್ಗನ್ನ ಸಿಕ್ಕಾಪಟ್ಟೆ ಬೈದು "ಮನೆ ಬಿಟ್ಟು ಒಳ್ಡು ಸುಮ್ಕಗೆ. ನಿನ್ನ ನೆಣಾನೆಲ್ಲ ಕಕ್ಕಿಸಿ ಬಿಡ್ತೀನಿ" ಅಂತ ಅಂದುಬಿಟ್ಟ. ಈ ಕಡೆ ಸುಂದ್ರವ್ವನವ್ವ ಅಪ್ಪ ಇಬ್ರೂ ಸೇರಿ

ಅಪ್ಪಿಗೆ ಚೆನ್ನಾಗಿ ಬೈದು ಒದ್ದು, 'ಮಾಡಿಮೇಲೇ ಇರು' ಅಂತ ಏಳಿ, ಎಲ್ಲಿ ಓಗ್ಬೇಡ ಅಂತ ಏಳಿದ್ದರು.

ಇದಿರುಬದರಿಗೆ ಮನೆಯ ಕಟ್ಟಿ
ಬರಿಯಮಾತಿಗೆ ಗುರಿಯನಾದೆಲ್ಲೊ—ಐಮಾಲೆರುಡುಗ
ಬರಿಯ ಮಾತಿಗೆ ಗುರಿಯನಾದೆಲ್ಲೊ . . .
ಆಗುದೋನೆ ಭೋಗುದೋನೆ
ನಾಗರಾವಿನ ಬಣ್ಣದೋನೆ
ಕೋಗುಲಾಗಿ ಕೂಗುತಿದ್ದೆಲ್ಲೊ—ಐಮಾಲೆರುಡುಗ
ಕೋಗುಲಾಗಿ ಕೂಗುತಿದ್ದೆಲ್ಲೋ . . .

ಇಂಗೇ ಏಳ್ಕೊಂತಾ ಕಾಲ ಕಳೀತಿದ್ಲು. ಅವರಪ್ಪ ಅವ್ವರು 'ಉಡ್ಗಿ ಇಂಗೇ ಬಿಟ್ರೆ ಅತ್ತು ಅತ್ತು ಬತ್ತಿ ಅಂಗಾಗೋಗ್ತಾಳೆ' ಅಂತ ಬೇರೆ ಊರಿನ ಸಾವ್ಕಾರ್ರ ಮನೆಗೆ ಕೊಟ್ಟು ಲಗ್ನ ಮಾಡಿದರು . . ."

"ಈನಂತ ರುಸ್ತುವ್ಮಾಗಿದ್ರೆ ಆ ಹುಡ್ಗೀನೇ ಮದ್ವೆ ಆಗ್ತಿದ್ದ. ಅದಬಿಟ್ಟು ಸುಮ್ನೆ ಯಾಕೆ ಬಿಟ್ಬಿಟ್ಟ? ಅದೆಂಗೆ ಗೊತ್ತಾತವ್ವ ಅವರಿಬ್ಬರ ಗೆಣೆತನ ಎಲ್ಲಾರಿಗೂ ?" ಎಂದ ಕೆಂಚಣ್ಣ.

"ಎಂಗೋ ಗೊತ್ತಾತು ಅಂದುಕೊಪ್ಪ. ಕತೆ ಏಳ್ಬಿಡ್ತೀನಿ. ಆವ್ಮ್ಯಾಲೆ ಅದ್ನೆಲ್ಲಾ ಕೇಳೀವಂತೆ" ಎಂದು ಹೇಳಿ ಕತೆ ಹೇಳುವವಳು ಕತೆಯನ್ನು ಮುಂದುವರಿಸಿದಳು.

"ಆವ್ಮ್ಯಾಲೆ ಏನಾತೂಂದ್ರೆ—ವುಡ್ಗ ಸೊಲ್ಪ ಹಠಗಾರ, ಏನೇ ಆಗ್ಲೀ ನನ್ನ ಇಶ್ವಾಸ ಬಿಡಾಕಿಲ್ಲ ಅಂತ ಇದ್ದ."

"ಹಠಮಾಡಿ ಮಠದಯ್ಯ ಕೆಟ್ಟನಂತೆ ಅನ್ನೋ ಗಾದೇ ಹಂಗೇ ಅನ್ನವ್ವ" ಕೆಂಚಣ್ಣ ದನಿಗೂಡಿಸಿದ. "ಮುಂದೇನಾತವ್ವ ?" ಎಂದು ಎಲ್ಲರೂ ಕೇಳಿದರು.

"ಆ ವುಡ್ಗಿ ಕೊಟ್ಟ ಊರು ಬಾಳ ಅತ್ತರ ಆಗಿತ್ತು. ಈ ಉಡ್ಗ ದಿನಾಲು ಚೆಂಚೆ ಒತ್ನಾಗೆ ಓಗೋಗಿ ಬರ್ತಿದ್ದ್ನಂತೆ. ಇಂಗೇ ನಡೀತಾ ಇತ್ತು ಅವರಿಬ್ಬರಿಗೂ ಇಶ್ವಾಸ."

"ಗೊತ್ತಾಗಕಿಲ್ವ ಅಂಗೆ ಪರೂರಿಗೋಗಿ ಬಂದ್ರೆ ದಿನಾಗ್ಲೂ ?" ಎಂದು ಅಲ್ಲಿದ್ದ ಯುವಕರಲ್ಲೊಬ್ಬ ಕೇಳಿದ.

"ಅವ್ವ ಬಾಳ ಗಾಟಿ ಎಣ್ಣು! ಒಂದು ಒಳ್ಳೆ ಪಸಂದಾದ ಆಟಾನೇ ಕಟ್ಟಿದ್ಲಂತೆ. ಈ ಉಡಗನಿಗೆ ಅವಳು ಏಳಿಕೊಟ್ಟಿದ್ಲಂತೆ, 'ನೀನು ಜಿನಾ ಬರೋವಾಗ ಒಂದು ಎತ್ತಿಗೆ ಕಟ್ಟೊ ಗಂಟೆನಾ ಇಡುಕೊಂಡು ಬಂದು ನಮ್ಮನೆ ಸೂರಿನ ಗಳ ಅಲಗಾಡಿಸಿ ಗಂಟೆ ದನಿಮಾಡು. ಅಂದರೆ ದನ ಬಂದು ಸೂರು ಉಜ್ಜಿದರೆ ಯಂಗ ಸಬ್ದಾಗುತ್ತೊ ಅಂಗಮಾಡು' ಅಂತ ಹೇಳ್ಕೊಟ್ಟಿದ್ಲಂತೆ . . ."

"ಊ ಊ ಆ ಮಾಕೇನಾಯಿತು?" ಎಂದು ಎಲ್ಲರೂ ಉತ್ಸಾಹದಿಂದ ಕೇಳಿದರು.

"ಜಿನಾಲು ಇವ ಚೆಂಜಿನಾಗ ಬರೋದು. ಗಂಟೆ ಸಬ್ದ ಮಾಡಿ ಎತ್ತು ಉಜ್ಜಿದಾಂಗೆ ಮನೆಸೂರು ಉಜ್ಜ್ತಿದ್ದ. ಆವಾಗ ಅವಳು ತನ್ನ ಗಂಡನಿಗೆ 'ಯಾವುದೋ ದನಾ ಬಂದಂಗೈತೆ. ಓಗಿ ಓಡಿಸಿ ಬತ್ತೀನಿ' ಅಂತ ಏಳಿ, ವರಾಕೆ ಬಂದು, ಈ ಉಡ್ಗನತ್ರ ಮಾತಾಡಿ ಓಗ್ತಿದ್ಲು. ಇಂಗೇ ಬಾಳ ದಿನ ನಡೀತಾ ಇತ್ತು. ಗಾದೇಲಿ ಕಳ್ಳನೇಂಡ್ತೀನ ಅನ್ನವಂಗೆ ಇದೂ ಕೂಡಾ ಗೊತ್ತಾಗಬೋದು ಅಂತ ಅವರು ಏಚ್ಚೇನೇ ಮಾಡ್ಲಿಲ್ಲ."

"ಅಲ್ಲವ್ರೊ, ಅವನಿಗೆ ಅವ್ಳ ಗಂಡಗೆ ಗೊತ್ತಾಗ್ಲೇ ಇಲ್ವ? ವಸಿನೂ ಅನ ಮಾನಾನೇ ಬರಾಲ್ವ? ಅವನೆಂತನವ್ನ ಅವನು?" ಎಂದು ಕೇಳಿದ ರಂಗಣ್ಣ. ಸ್ವಲ್ಪ ಬಿರುಸಾಗಿತ್ತು ಅವನ ವಾಣಿ. ಮನಸ್ಸು ಜುಗುಪ್ಸೆಯಾಗಿತ್ತು, ಈ ಹೊಲಸು ಸುದ್ದಿ ಕೇಳಿ. ಆದರೂ ಕತೆ ಮುಂದುವರಿಯಲೆಂದು ಸುಮ್ಮನಾದ.

"ಬರಾಕಿಲ್ವ ರಂಗಪ್ಪ? ಎಂತರಿಗೂ ಅನಮಾನ ಬರಾ ಮಾತೇ, ಬಿಡಪ್ಪ. 'ದಿನಾನು ದನ ಬರೋದಂದ್ರೇನು? ದಿನಾಲು ಗಂಟೆ ಸಬ್ದಾಗದಂದ್ರೇನು? ಇವ್ಳು ಅದ ಬಡಿಯಾಕೆ ಯಾಕೆ ಓಗ್ಬೇಕು? ಅದೂನೂ ಇದೇ ಒತ್ಗೆ?' ಅಂತ ಅವನಿಗೂ ಅಪೂಟಾ ಅನುಮಾನಾಗಿಬಿಡ್ತು. ಒಂದಿನ ಗಂಟೆ ಶಬ್ದಾಗ್ತಿಲೂ ಏನ್ಮಾಡ್ದಾಂತೀಯಾ? ಏಂಡ್ತಿ ವರಕ ಓಗಬರ್ತೀನೀಂತ ಏಳ್ಕೆಂತ ಓಗ್ಬೇಕು— ಅಷ್ಟೊತ್ತಿಗಿವನೇ ಎದ್ದು 'ಲೇ, ಇವತ್ತು ನಾನೇ ಕಾಲ್ಮುರೀವಗೆ ವಡ್ದು ಬರ್ತೀನಿ ಕಣೇ ಈ ದನಾನ! ಏನಿದು ದಿನಾಲು ಬಂದು ಸೂರು ಉಜ್ಜುತದೆ!" ಎಂತ ಹೇಳಿ ಹೊರಡುವುದರಲ್ಲಿದ್ದ. ಸರ್ರಂತ ಇವ್ಳು ಒಂದುಪಾಯ ಮಾಡಿದ್ಲು. ಏನಂತಿಯಾ—ಸರಕ್ ಅಂತ ತೊಟ್ಲು ತಾಕೋಗಿ—ಮಗ - ಮಸಿಕ್ಕಂಡಿತ್ತು ಅಂಗಾದ್ರೂ ಸುಮ್‌ಸುಮ್ಕೆ ತೂಗಿದ್ಲು; ತೂಗಬೇಕಾದರೆ ಒಂದಾಡೇಳಿದ್ಲು!

ಜೋ ಜೋ ಗಂಟೆ, ಗಳಗಂಟೆ,
ನಾನೆದ್ದು ಬಂದೇನಂದ್ರೇ
ತಾನೇದ್ದು ಬಂದಾನೇ
ಓಡ್ಹೋಗೊ ನನ್ನ ಗಳಗಂಟೆ

ಅಂತ ಅವ್ವ ಇಶ್ವಾಸದ ಗಳ-ಗಂಟೆಗೆ ಎಚ್ಚರಕೊಟ್ಟು, ಜೋ ಜೋ ಕಂದಾ ಅಂತ ಮನಗಿದ್ದ ಮಗೀನ ತೂಗ್ತಾ ಇದ್ಲು. ಇತ್ಲಾಗಿ, ಹೊರಗಡೆ ನಿಂತಿದ್ದ ಗುರಪ್ಪನಿಗೆ ಈ ಆಡು ಕೇಳಿಸ್ತು. ಒಂದ್ಸಾರಿ, ಎಳ್ಡಾವರ್ತಿ ಕೇಳಿ ಪದದ ಅರ್ಥಮಾಡಿಕೊಂಡ. 'ಓಡ್ಹೋಗೋ ನನ್ನ ಗಳ-ಗಂಟೆ' ಅಂತ ಕೇಳಿದೇಟಿಗೇ ಕಿತ್ತ ಓಟ ತನ್ನೂರು ಕಾಣುವರಿಗೂ. ಗಂಡ ನೋಡಿದರೆ ಅಲ್ಲೇನು ಇರ್ಲಿಲ್ಲ. ಗಂಡ ಪೆದ್ನಂಗೆ ಸುಮ್ಕೆ ಬಂದ ಮನೆ ವಳಾಕೆ."

"ಎಂಗ್ಸರ ಬುದ್ದಿ ಇಂಗೇ ಅಂತ ಏಳಾಕೇ ಏಳ್ನೂರ್ ದೇವರ ಕೈಲೂ ಆಗಲ್ಲ ಅಂತಾರವ್ವೊ, ಅದ್ಕೇ ಇರಬೇಕು" ಎಂದು ರಂಗಣ್ಣ ಸೇರಿಸಿದ. "ಈಗ ಇಚಾರ ಗೊತ್ತಾತೇನಪ್ಪಾ ಆ ಪದೀನರ್ಥ ಏನೂಂತ?" ಎಂದು ಜೋಗಿತಿ ಕೇಳಿದಳು. ಅದಕ್ಕೆ ಅವನು ಅರ್ಥವಾಯಿತೆಂದು ತಲೆದೂಗಿದ. "ಇಂತವನ್ನ ಅರ್ತಮಾಡಿಕಣಕಿಂತ ಎಲಡ್ಕೆ ಜಗಿಯಾದು ಏಟೋ ವಾಸಿ" ಅಂತ ಹೇಳಿದ.

ಅಷ್ಟು ಹೊತ್ತಿಗೆ ಎಲ್ಲರಿಗೂ ನಿದ್ರೆ. ಜೋಗಿತಿ ಹೆಂಗಸರು ದೇವಸ್ಥಾನದಲ್ಲಿ ಮಲಗಲು ಹೊರಟರು, ಉಳಿದವರು ಅವರವರ ಮನೆಗೆ ಹೊರಟರು.

—ಎಂ. ಚಂದ್ರಶೇಖರಯ್ಯ.

[ಇದು ಹೊಳಲ್ಕೆರೆ ತಾಲ್ಲೂಕು, ಸಿರಾಪನಹಳ್ಳಿಯಲ್ಲಿ ಕೇಳಿದ್ದು.]

---

## ಅಳು—ನಗು

ಅಳುವೇನು? ನಗುವೇನು? ಹೃತ್ಕಪಾಟೋದ್ಘಾಟ!
ಶಿಲೆಯೆ ನೀಂ ಕರಗದಿರಲ್? ಅರಳದಿರೆ ಮರಳೇಂ?
ಒಳಜಗವ ಹೊರವಡಿಪ, ಹೊರಜಗವನೊಳಕೊಳುವ
ಸುಳುದಾರಿಯಳುನಗುವು—ಮಂಕುತಿಮ್ಮ

# ತಕ್ಕಣ್ಣನ ಮಗ

ತಲಕಾಡು ತಕ್ಕಣ್ಣ ಹೆಸರುವಾಸಿಯಾದ ಭಾರಿ ಕಳ್ಳ. ಕಳ್ಳತನ ಅವನ ಮನೆತನದ ಕಸುಬು. ಕುಲಕಸುಬನ್ನು ಚಾ-ಚು ತಪ್ಪದೆ ನಡಸುತ್ತಿದ್ದ. ಆ ಪ್ರಾಂತ್ಯದ ಎಲ್ಲಾ ಪೊಲೀಸ್ ಅಧಿಕಾರಿಗಳ ಗುರ್ತೂ ಅವನಿಗುಂಟು. ಪೊಲೀಸಿನವರು ಅವನನ್ನು ವಾರಕ್ಕೆ ಎರಡು ಮೂರು ಬಾರಿಯಾದರೂ ಭೇಟಿ ಮಾಡುವರು; ಆ ಸುತ್ತಿನಲ್ಲಿ ಎಲ್ಲಿ ಕಳ್ಳತನ, ದರೋಡೆಗಳಾದರೂ ಪೊಲೀಸಿನವರು ಬಂದು ಅವನನ್ನು ವಿಚಾರಿಸಿಕೊಂಡು ಹೋಗುವ ಒಂದು ಸಂಪ್ರದಾಯ ಬಹಳ ಕಾಲದಿಂದ ಬಂದಿತ್ತು. ಆ ಸಮಯದಲ್ಲಿ ಅವನು ಎಲ್ಲಿದ್ದ, ಏನು ಮಾಡುತ್ತಿದ್ದ ಎಂಬುದನ್ನು ಗ್ರಾಮಸ್ಥರಿಂದ ತನಿಖೆ ಮಾಡಿ ತಿಳಿದುಕೊಳ್ಳುತ್ತಿದ್ದರು. ಈ ಗ್ರಾಮಸ್ಥರಿಗೆ ತಕ್ಕಣ್ಣ ಮನೆಯಲ್ಲಿ ಇದ್ದಂತೆ ತೋರಿದರೂ ರಾತ್ರಿ ಎಲ್ಲರೂ ಗಾಢವಾಗಿ ನಿದ್ರಿಸುವ ವೇಳೆಯಲ್ಲಿ ತನ್ನ ಕಾರ್ಯವನ್ನು ಪ್ರಾರಂಭಿಸಿ, ಬೆಳಗಾಗುವ ಮೊದಲೇ ಮನೆ ಸೇರಿ, ನಿದ್ರೆ ಹೊಡೆದು ಏನೂ ತಿಳಿಯದವನಂತೆ ಇರುತ್ತಿದ್ದ. ಇದರಿಂದ ಗ್ರಾಮಸ್ಥರಿಗೆ ಅವನ ಚಲನವಲನಗಳನ್ನರಿಯುವುದು ಕಷ್ಟವಾಗಿತ್ತು.

ರಂಗ ಇವನ ಒಬ್ಬನೇ ಮಗ. ಚಿಕ್ಕಂದಿನಿಂದ ತುಂಬಾ ಮುದ್ದಿನಿಂದ ಸಾಕಿದ್ದ. ಇವನನ್ನು ತಕ್ಕಣ್ಣ ಅಕ್ಕಪಕ್ಕದ ಸಂತೆಗೆ ಕರೆದುಕೊಂಡು ಹೋಗುತ್ತಿದ್ದ. ಸಂತೆಯಲ್ಲಿ ಹಣ್ಣು ತರಕಾರಿ ಮಾರುವವರಿಂದ ತರಕಾರಿ ಹಣ್ಣು ಕದಿಯುವುದು ರಂಗನಿಗೆ ತನಗೆ ತಾನೆ ಬಂದ ವಿದ್ಯೆಯಾಗಿತ್ತು. ಒಂದು ದಿನ ರಂಗ ಅಪ್ಪನ ಹೆಗಲ ಮೇಲೆ ಕೂತು ಹೋಗುವಾಗ ಪಕ್ಕದಲ್ಲಿ ಹಾಯ್ದು ಹೋಗುವವನ ಬುಟ್ಟಿಯಿಂದ ಬಟ್ಟೆಯ ಗಂಟೊಂದನ್ನು ಕದ್ದು ಮನೆಯಲ್ಲಿ ಅಪ್ಪನಿಗೆ ತೋರಿಸಿದ. ತಕ್ಕಣ್ಣ ಅವನ ಬುದ್ಧಿಕೌಶಲಕ್ಕೆ ಬೆರಗಾಗಿ ರಂಗನನ್ನು ಕೊಂಡಾಡಿದ. ತನ್ನ ಮನೆತನದ ಕಸುಬು ತನಗೇ ಕೊನೆಗೊಳ್ಳದೆ ಮುಂದಕ್ಕೂ ಬೆಳೆಯುವ ಚಿಹ್ನೆಯನ್ನು ಕಂಡು ಸಂತೋಷಪಟ್ಟ.

ರಂಗ ಬೆಳೆಬೆಳೆದಂತೆಲ್ಲಾ ತಕ್ಕಣ್ಣ ತನಗೆ ಗೊತ್ತಿದ್ದ ಕಳ್ಳತನದ ಎಲ್ಲಾ ವಿದ್ಯೆಗಳನ್ನೂ ಮಗನಿಗೆ ಕಲಿಸಿದ. ತನ್ನ ಗ್ರಾಮದಲ್ಲಿ ಎಲ್ಲರೂ ರಾತ್ರಿವೇಳೆ ಮಲಗಿದ ಮೇಲೆ, ರಂಗನ ಕಾಲಿಗೆ ಗೆಜ್ಜೆ ಕಟ್ಟಿಸಿ, ತನ್ನ ಹೆಂಚಿನ ಮನೆಯ

ಮೇಲೆ ಒಂದು ಚೂರೂ ಶಬ್ದವಾಗದಂತೆ ನಡೆಯುವುದನ್ನು ಹೇಳಿಕೊಡುತ್ತಿದ್ದ. ಬಹಳ ಶ್ರಮದ ಫಲವಾಗಿ ರಂಗ ಈ ವಿದ್ಯೆಯಲ್ಲಿ ಪಾರಂಗತನಾದ.

ರಂಗನಿಗೆ ಇಪ್ಪತ್ತು ವರ್ಷವಾಗುತ್ತಾ ಬಂತು. ಅಪ್ಪನನ್ನು ಮೀರಿಸಿದ ಭಾರಿ ಕಳ್ಳನಾದ. ಪೊಲೀಸಿನವರ ರೆಜಿಸ್ಟರಿಗೆ ಅಪ್ಪ ಮಕ್ಕಳಿಬ್ಬರೂ ದಾಖಲಾದರು. ತಕ್ಕಣ್ಣನಿಗೆ ಮಗನ ಮದುವೆಯ ಯೋಚನೆ ಬಲವಾಯಿತು. "ಕಳ್ಳನ ಹೆಂಡತಿ ಎಂದಿದ್ದರೂ . . ." ಎಂಬುದನ್ನು ಅವನು ತಿಳಿದಿದ್ದರೂ, ತನಗೆ ಸರಿಸಮಾನರಲ್ಲಿ ಹೆಣ್ಣು ತರುವ ಹಂಬಲ ಹಿಡಿಯಿತು.

ಆ ಪ್ರಾಂತ್ಯದ ಸುತ್ತ ಯಾರೂ ತಕ್ಕಣ್ಣನಷ್ಟು ಭಾರಿ ಕಳ್ಳರಿರಲಿಲ್ಲ. ಆದರೆ ಮಾಲಂಗಿ ಚಿಕ್ಕಣ್ಣ ಕೆಲವು ವಿಷಯಗಳಲ್ಲಿ ತಕ್ಕಣ್ಣನಿಗೆ ಸರಿಸಮಾನನಾಗಿದ್ದ. ಚಿಕ್ಕಣ್ಣನ ಪರಿಚಯ ತಕ್ಕಣ್ಣನಿಗೆ ಸ್ವಲ್ಪ ಮಟ್ಟಿಗಿತ್ತು. ಇಬ್ಬರೂ ಒಂದೇ ಕಡೆ ಜೈಲಿನಲ್ಲಿ ಕೆಲವು ದಿವಸವಿದ್ದರು. ಚಿಕ್ಕಣ್ಣ ತನ್ನ ಮನೆಯ ವಾರ್ತೆಯನ್ನು, ತನಗೆ ಇದ್ದ ಒಬ್ಬಳೇ ಮಗಳು ಚೆನ್ನಿಯ ವಿಚಾರವನ್ನು ತಕ್ಕಣ್ಣನಿಗೆ ತಿಳಿಸಿದ್ದ. ತಕ್ಕಣ್ಣ ಅದೆಲ್ಲವನ್ನು ಯೋಚಿಸಿ, ಕೊನೆಗೆ ಚಿಕ್ಕಣ್ಣನನ್ನು ನೋಡಲು ಮಾಲಂಗಿಗೆ ಹೊರಟ. ಚಿಕ್ಕಣ್ಣ, ತಕ್ಕಣ್ಣನನ್ನು ಬಹು ಆದರದಿಂದ ಬರಮಾಡಿಕೊಂಡು, ಬಂದ ಸಮಾಚಾರವನ್ನು ವಿಚಾರಿಸಿ, ಎಲ್ಲವನ್ನೂ ತಿಳಿದ. ಚಿಕ್ಕಣ್ಣ ತಕ್ಕಣ್ಣನನ್ನು ಅವನ ವಿದ್ಯೆಗೆ ಮೆಚ್ಚಿದ್ದ. ಆದರೆ ಅಪ್ಪನಂತೆ ಮಗನೂ ಇರಬಲ್ಲನೆಂದು ತಿಳಿದಿರಲಿಲ್ಲ. ತನ್ನ ಮಗಳನ್ನು ತನಗಿಂತ ಭಾರಿ ನಿಸ್ಸೀಮ ಕಳ್ಳನಿಗೆ ಕೊಡಬೇಕೆಂಬ ಆಸೆ ಬಹು ದಿವಸಗಳಿಂದಲೂ ಮನಸ್ಸಿನಲ್ಲಿ ಬೇರೂರಿತ್ತು. ತಕ್ಕಣ್ಣನೊಡನೆ ಸಂಬಂಧ ಬೆಳೆಸಲು ಆಸೆಯಾದರೂ ಅವನ ಮಗನ ಯೋಗ್ಯತೆಯ ವಿಚಾರದಲ್ಲಿ ಸ್ವಲ್ಪ ಅನುಮಾನಗೊಂಡಿದ್ದ. ಕೊನೆಗೆ "ಗಂಡನ್ನು ನೋಡಬೇಕು, ನಮ್ಮ ಮನೆಗೆ ಕಳಿಸಿಕೊಡಿ" ಎಂದು ಚಿಕ್ಕಣ್ಣ ತಿಳಿಸಿ ತಕ್ಕಣ್ಣನನ್ನು ಊರಿಗೆ ಕಳಿಸಿಕೊಟ್ಟ.

ರಂಗ ಮಾರನೆಯ ದಿನ ಚಿಕ್ಕಣ್ಣನ ಮನೆಯಲ್ಲಿ ಹಾಜರಾದ. "ಹುಡುಗನೇನೋ ದೃಢವಾಗವನೆ, ಗಟ್ಟಿಮುಟ್ಟಾಗವನೆ" ಎಂದು ಚಿಕ್ಕಣ್ಣ ಮನಸ್ಸಿನಲ್ಲಿ ಅಂದುಕೊಂಡ. ತಾನು ಹಿಂದೆ ಕದ್ದು ತಂದ ಒಡವೆ ವಸ್ತುಗಳನ್ನು ಕರಗಿಸಿ ಒಂದು ದೊಡ್ಡ ಬೆಳ್ಳಿತಟ್ಟೆ ಮಾಡಿಸಿದ್ದ. ಆ ತಟ್ಟೆಯನ್ನು ಯಾವಾಗಲೂ ಹೊರಗೆ ತೆಗೆದಿರಲಿಲ್ಲ. ಅಂದು ಭಾವೀ ಅಳಿಯನ ಉಪಚಾರಕ್ಕೆ ಹೊರ

ತೆಗೆದ. ಅದರಲ್ಲಿಯೇ ಅಳಿಯನಿಗೆ ಚೊಕ್ಕ ಭೋಜನ ಮಾಡಿಸಿದ. ರಂಗ ಅಷ್ಟು ದೊಡ್ಡ ತಟ್ಟೆಯನ್ನು ಎಂದೂ ಎಲ್ಲಿಯೂ ನೋಡಿರಲಿಲ್ಲ. ರಂಗನಿಗೆ ಊಟಕ್ಕಿಂತ ತಟ್ಟೆಯ ಮೇಲೆ ಹೆಚ್ಚಿಗೆ ಗಮನ ಬಿತ್ತು. "ಕೊನೆಗೆ ಏನಾದರೂ ಮಾಡಿ ಇದನ್ನು ಹೊಡೆದುಬಿಡಬೇಕು" ಎಂದು ಮನಸ್ಸಿನಲ್ಲಿಯೇ ಗುಣಾಕಾರ ಹಾಕಿದ. ತಟ್ಟೆ ಇಡುವ ಸ್ಥಳವನ್ನು ಬಹು ಸೂಕ್ಷ್ಮವಾಗಿ ಕೂತ ಕಡೆಯಿಂದಲೇ ಪರೀಕ್ಷಿಸುತ್ತಿದ್ದ. 'ಕಳ್ಳರ ಗುಟ್ಟು ಕಳ್ಳರಿಗೇ ಗೊತ್ತು' ಎಂಬಂತೆ ಚಿಕ್ಕಣ್ಣ ಇವನ ಸೂಕ್ಷ್ಮತೆಯ ಮರ್ಮವನ್ನರಿತ. ರಂಗ ಬೆಳ್ಳಿತಟ್ಟೆಯನ್ನು ಕದಿಯಲು ಇಷ್ಟು ಹೊಂಚು ಹಾಕುತ್ತಿದ್ದಾನೆಂಬುದು ಚಿಕ್ಕಣ್ಣನಿಗೆ ಮನದಟ್ಟಾಯಿತು. ರಂಗ ಮಲಗಿದ ಮೇಲೆ ಚಿಕ್ಕಣ್ಣ ತಟ್ಟೆಯನ್ನು ತನ್ನ ಮಗಳಿಂದ ತರಿಸಿ, ಅದರ ತುಂಬಾ ನೀರು ತುಂಬಿಸಿ, ತಾನು ಮಲಗಿಕೊಳ್ಳುವ ಸ್ಥಳದ ಮೇಲೆ ಚಾವಣಿಗೆ ತೂಗುಹಾಕಿದ. ಯಾರಾದರೂ ತಟ್ಟೆಯನ್ನು ಕದಿಯಲು ಬಂದಾಗ, ಅದರಲ್ಲಿನ ನೀರು ತನ್ನ ಮೇಲೆ ಚೆಲ್ಲಿ ಎಚ್ಚರಗೊಳ್ಳಬಹುದೆಂಬುದೇ ಅವನ ಉಪಾಯ.

ಸುಮಾರು ರಾತ್ರಿ ಎರಡು ಗಂಟೆ ಇರಬಹುದು. ಎಲ್ಲರೂ ಗಾಢ ನಿದ್ರೆಯಲ್ಲಿದ್ದಾರೆ. ರಂಗ ಎದ್ದವನೇ ಸದ್ದಿಲ್ಲದೆ ಒಳಹೊಕ್ಕು ತಟ್ಟೆಗಾಗಿ ಹುಡುಕಾಡಿದ. ತಟ್ಟೆಯು ಕಣ್ಣಿಗೆ ಬೀಳದೆ ನಿರಾಸೆಗೊಂಡು ಹಿಂತಿರುಗುವಾಗ ಹಠಾತ್ತನೆ ಮೇಲಕ್ಕೆ ಕತ್ತೆತ್ತಿ ನೋಡಿದ. ತಟ್ಟೆ ಚಿಕ್ಕಣ್ಣನ ಮೇಲೆ ನೇರವಾಗಿ ನೇತುಹಾಕಿತ್ತು. ಅದರಲ್ಲಿ ತುಂಬಾ ನೀರಿದ್ದದ್ದು ರಂಗನಿಗೆ ಕಂಡುಬಂತು. ಕೈಯಿಂದ ತೆಗೆಯಲು ಹೋದರೆ ನೀರು ಕೆಳಕ್ಕೆ ಚೆಲ್ಲಿ ಚಿಕ್ಕಣ್ಣ ಎಚ್ಚರಗೊಳ್ಳಬಹುದೆಂದು ಯೋಚಿಸುತ್ತಿರುವಾಗಲೇ ತಕ್ಷಣ ಒಂದು ಉಪಾಯ ಹೊಳೆದು, ಹೊರಗೆ ಹೊರಟ. ಹೊರಗಡೆ ಮೇಕೆ ಕಟ್ಟಿದ್ದ ಸ್ಥಳದಲ್ಲಿ, ಹರಳುಕಡ್ಡಿಯ ಕೊಳವೆಗಳು ತುಂಬಾ ಬಿದ್ದಿದ್ದುವು. ಮೇಕೆ ಎಲೆಯನ್ನು ತಿಂದು ಕೊಳವೆಗಳನ್ನು ಹಾಗೆಯೇ ಬಿಟ್ಟಿತ್ತು. ಅವುಗಳಲ್ಲಿ ಚೆನ್ನಾಗಿರುವುದನ್ನು ಹುಡುಕಿ ತಂದು ತಟ್ಟೆಯಲ್ಲಿದ್ದ ನೀರನ್ನೆಲ್ಲಾ ಒಂದು ತೊಟ್ಟೂ ಕೆಳಕ್ಕೆ ಬೀಳದಂತೆ ಹೀರಿ ಕುಡಿದ. ಅನಂತರ ತಟ್ಟೆಯನ್ನು ಕೆಳಕ್ಕೆ ತೆಗೆದುಕೊಂಡ. ಅದನ್ನು ಎಲ್ಲಿ ಬಚ್ಚಿಡಬೇಕೆಂಬುದು ಅವನಿಗೆ ಕೂಡಲೆ ಹೊಳೆಯಲಿಲ್ಲ. 'ಊರಿಗೆ ಇಗಲೇ ಹಿಂದಿರುಗಿದರೆ ಕಳ್ಳತನವನ್ನು ತನ್ನ ಮೇಲೆ ಹೊರಿಸುವರು' ಎಂದು ಭಾವಿಸಿ, ಅದನ್ನು ಅಲ್ಲಿಯೇ ಎಲ್ಲಿಯಾದರೂ ಬಚ್ಚಿಡಲು ಮನಸ್ಸು ಮಾಡಿದ. ತತ್‌ಕ್ಷಣ

ಒಂದು ಉಪಾಯ ಹೊಳೆದು, ತಟ್ಟೆಯನ್ನು ಕೈಲಿ ಹಿಡಿದು ಹೊಳೆಯ ಕಡೆಗೆ ಧಾವಿಸಿದ. ಹೊಳೆಯಲ್ಲಿ ನಡುವಿನವರೆಗೂ ಇಳಿದು, ತಟ್ಟೆಯನ್ನು ತಳದ ಬದಿಯಲ್ಲಿ ಬಚ್ಚಿಟ್ಟು, ಮನೆಗೆ ವಾಪಸ್ ಬಂದು ನಿದ್ರೆಹೋದ.

ಚಿಕ್ಕಣ್ಣನಿಗೆ ಇದಾದ ಸ್ವಲ್ಪ ಹೊತ್ತಿನ ಮೇಲೆ ಎಚ್ಚರವಾಗಿ ಮೇಲೆ ನೋಡಿದ. ತಟ್ಟೆಯು ಕಾಣಲಿಲ್ಲ. ರಂಗ ಮಲಗಿರುವ ಕಡೆ ನೋಡಿದ. ರಂಗ ಗೊರಕೆ ಹೊಡೆಯುತ್ತಾ ನಿದ್ರಿಸುತ್ತಿದ್ದ. ಚಿಕ್ಕಣ್ಣ ಮೊದಮೊದಲು ಗಾಬರಿ ಪಟ್ಟರೂ ಈ ಕೆಲಸ ರಂಗನಿಂದಲೇ ನಡೆದಿರಬೇಕೆಂದು ಬಗೆದ. ತನ್ನ ಮನೆಯಲ್ಲಿ ಎಲ್ಲೂ ತಟ್ಟೆ ಬಚ್ಚಿಟ್ಟಿಲ್ಲವೆಂದು ತನ್ನ ಕಳ್ಳತನದ ಅನುಭವದ ಮೇಲೆ ಯೋಚಿಸಿದ. ಬೇರೆ ಎಲ್ಲಿಯಾದರೂ ಬಚ್ಚಿಟ್ಟಿದ್ದಾನೆಯೆ ಎಂಬುದಕ್ಕೆ ಆ ಊರು ರಂಗನಿಗೆ ಹೊಸ ಸ್ಥಳವಾಗಿತ್ತು. ಎಷ್ಟು ಯೋಚಿಸಿದರೂ ಇದು ಚಿಕ್ಕಣ್ಣನ ಅನುಭವಕ್ಕೆ ನಿಲುಕದುದಾಗಿತ್ತು. ಕೊನೆಗೆ ರಂಗನ ಸಮೀಪಕ್ಕೆ ಬಂದು ಪರೀಕ್ಷಿಸಲಾಗಿ, ಆತನ ಪಂಚೆಯು ಒಂದು ಕಡೆ ಒದ್ದೆಯಾಗಿತ್ತು. 'ತಟ್ಟೆಯನ್ನು ಹೊಳೆಯಲ್ಲಿ ಬಚ್ಚಿಟ್ಟಿರಬೇಕು' ಎಂದು ಯೋಚಿಸಿದ. ಆದರೆ ಎಲ್ಲಿ ಯಾವ ಕಡೆ ಇಟ್ಟಿದ್ದಾನೆಂಬುದು ತಿಳಿಯಲಿಲ್ಲ. ಕೊನೆಗೆ ಕಾಲಿನಿಂದ ತಲೆಯವರೆಗೂ ರಂಗನ ಶರೀರವನ್ನು ಮುಟ್ಟಿಕೊಂಡು ಬಂದ. ನಡುವಿನ ತನಕ ದೇಹ ಹೆಚ್ಚು ತಣ್ಣಗಿದ್ದುದು ಕಂಡುಬಂತು. ಅದರ ಮರ್ಮವೆಲ್ಲಾ ಚಿಕ್ಕಣ್ಣನಿಗೆ ಮನದಟ್ಟಾಯಿತು. ತತ್‌ಕ್ಷಣ ಹೊಳೆಗೆ ಹೋಗಿ ನಡುವಿನ ಉದ್ದದ ನೀರಿನಲ್ಲಿ ಕೆಸರನ್ನು ಕೆದಕಿದಾಗ ಬೆಳ್ಳಿತಟ್ಟೆಯು ಪತ್ತೆಯಾಯಿತು. ತಟ್ಟೆಯನ್ನು ಮನೆಗೆ ತಂದು ಪೆಟ್ಟಿಗೆಯಲ್ಲಿಟ್ಟು ಪುನಃ ನಿದ್ರಿಸಿದ.

ಬೆಳಗ್ಗೆ ಎಲ್ಲರೂ ಏಳುವುದಕ್ಕೆ ಮೊದಲೇ ರಂಗ ಹೊಳೆಯ ಕಡೆ ಹೊರಟು, ತನ್ನ ಎಲ್ಲಾ ಕೆಲಸ ಕಾರ್ಯಗಳನ್ನು ತೀರಿಸಿಕೊಂಡು ವಾಪಸ್ಸು ಮನೆಗೆ ಬಂದ. ರಂಗ ಒಳಕ್ಕೆ ಬಂದ ಮೇಲೆ ತಿಂಡಿಗೆ ಆಹ್ವಾನಿಸಿದರು. ತನ್ನ ಮುಂದೆ ಇಟ್ಟಿದ್ದ ಬೆಳ್ಳಿತಟ್ಟೆಯನ್ನು ನೋಡಿ ರಂಗ ತನ್ನ ಕಣ್ಣನ್ನು ತಾನೇ ನಂಬದಾದ. ಮುಖ ಬೆಳ್ಳಗಾಯಿತು. ಆದರೆ ಇದಾವುದನ್ನು ಹೊರಕ್ಕೆ ತೋರದೆ ತಿಂಡಿ ತಿಂದು ಮುಗಿಸಿದ. ಚಿಕ್ಕಣ್ಣನಿಗೆ ರಂಗನ ಸ್ಥಿತಿ ನೋಡಿ ನಗು ಬಂತು. ಆದರೆ ನಗದೆ, ಹೊಳೆಗೆ ಹೋಗಿ ತಟ್ಟೆ ತಂದ ವಿಚಾರವನ್ನು ಕೂಲಂಕಷವಾಗಿ ರಂಗನಿಗೆ ತಿಳಿಸಿದ. ರಂಗ ತಟ್ಟೆ ಕದಿಯಲು ತಾನು ಮಾಡಿದ

ಉಪಾಯವನ್ನು ತಿಳಿಸಿದ. ಚಿಕ್ಕಣ್ಣ ಭಾವೀ ಅಳಿಯನ ಚಾಕಚಕ್ಯತೆಗೆ ಮೆಚ್ಚಿ, ರಂಗನೇ ತನ್ನ ಮಗಳಿಗೆ ಅನುರೂಪನಾದ ವರ ಎಂದು ಬಗೆದು ತನ್ನ ಮಗಳನ್ನು ರಂಗನಿಗೆ ಮದುವೆಮಾಡಿ, ಬೆಳ್ಳಿ ತಟ್ಟೆಯನ್ನು ಉಡುಗೊರೆಯಾಗಿ ಅವರಿಗೆ ಕೊಟ್ಟನು.

—ಪಿ. ಜಿ. ಚಿಕ್ಕವೀರೇ ಗೌಡ.

[ಇದು ನಾಗಮಂಗಲದ ಕಡೆ ಕೇಳಿದ್ದು.]

---

## ಜಗದ ಅಶ್ವತ್ಥ

ತಲೆಯ ಮೇಗಡೆ ಬೇರು, ಕೆಳಗೆ ಕೊಂಬೆಲೆ ಚಿಗುರು
ಬಿಳಲೂರೆಗಳ ಲೆಕ್ಕಕಿಲ್ಲ ಮೊದಲು ಕೊನೆ
ಬೆಳೆವುದೀಪರಿಯರಳಿಮರದಂತೆ ನರಕೋಟಿ
ನಲಿವನದರಲಿ ಬೊಮ್ಮ—ಮಂಕುತಿಮ್ಮ

ಒಂದು ಕೊಂಬೆಯು ಬಾಡಲಿನ್ನೊಂದು ಚಿಗುರುವುದು
ಸಂದಿಹುದು ಚಿರನವತೆಯಶ್ವತ್ಥಮರಕೆ
ಎಂದೆಂದುಮಂತಿರುವುದೀ ವಿಶ್ವವೃಕ್ಷವದ-
ರೊಂದು ರಂಬೆಯೊ ನೀನು—ಮಂಕುತಿಮ್ಮ

ಅಂದಂದಿಗಾದನಿತು ಬುಡಕಟ್ಟೆ ಕಳೆ ತೆಗೆದು
ಚೆಂದಳಿರು ದಿನದಿನಮುಮೊಗೆಯೆ ನೀರೆರೆದು
ಸಂದ ಬಲದಿಂದ ಜಗದಶ್ವತ್ಥ ಸೇವೆಯಲಿ
ನಿಂದಿರುವುದಲೆ ಧರ್ಮ—ಮಂಕುತಿಮ್ಮ

# ಬೀರಣ್ಣ

ನಮ್ಮೂರಿನಲ್ಲಿ ಎರಡು ವರ್ಷಗಳಿಂದಲೂ ಕ್ಷಾಮ. ಮಳೆಗಾಲದಲ್ಲಿ ಬೇಸಾಯಗಾರರನ್ನು ನಗಿಸಿ, ಬೇಸಗೆಯಲ್ಲಿ ಪ್ರಯಾಣಿಕರನ್ನು ಸಂತೈಸುವ ಚಿತ್ರಾವತಿ ನದಿಯ ಅಂಗಳ ಈಗ ಬಿಸಿಲಿಗೆ ಬಿರುಕುಬಿಟ್ಟಿದೆ. ನಾಲ್ಕಾರು ಮೈಲಿ ಹರಡಿಕೊಂಡಿರುವ ಹಸುರು ಹತ್ತಾರು ಹಳ್ಳಿಗಳ ದನಕರುಗಳನ್ನು ರಕ್ಷಿಸುತ್ತಿತ್ತು. ಸೂರ್ಯನು ನಡುನೆತ್ತಿಯ ವರೆಗೆ ಬರುವ ತನಕ ಮೇದು, ತೊರೆಯ ತಂಪಾದ ನೀರನ್ನು ಕುಡಿದು, ನೇರಳೆ ತೋಪಿನ ವಿಸ್ತಾರವಾದ ನೆರಳಿನಲ್ಲಿ ಮೆಲಕು ಹಾಕುತ್ತಿದ್ದ ಆಕಳು ಇಂದು ಮೂಳೆಚಕ್ಕಳಗಳಾಗಿ, ಬಿದ್ದ ಕಡೆಯಿಂದ ಏಳ ಲಾರದೆ, ಬಿಸಿಲಿನ ಬೇಗೆಗೆ ಜೊಲ್ಲು ಸುರಿಸುತ್ತ ಬಿದ್ದಿರುವುವು. ಕೆಲವು ಒಂದರ ಪಕ್ಕದಲ್ಲೊಂದು ಮಲಗಿದ್ದವು ಜೊತೆಯಲ್ಲೇ ಅಂತಕನಪುರವನ್ನು ಸೇರಿದ್ದುವು. ಬಿಡಿಯಾಗಿಯೂ ಕೆಲವು ಶವಗಳಾಗಿದ್ದುವು. ಕುಪ್ಪಳಿಸಲಾರದೆ ತೊಳ ಲಾಡುತ್ತಾ ಸುತ್ತಲೂ ಓಲಾಡುತ್ತಾ ಸತ್ತ ತಾಯಿಯನ್ನು ನೆಕ್ಕುತ್ತಿರುವ ಕರು ಗಳನ್ನು ನೋಡಿದರೆ ಎಂಥ ಕಲ್ಲೆದೆಯವನಿಗೂ ಹೃದಯ ಕರಗಿ ನೀರಾಗುತ್ತಿತ್ತು. ಪ್ರಕೃತಿ ಸೌಂದರ್ಯವು ಸ್ಮಶಾನ ಸದೃಶವಾಗಿತ್ತು. ಜನರ ಹಾಹಾಕಾರ ಹೇಳ ತೀರದು. ಗೆಲುವಿಗೆ ಬದಲು ಅಂಥಕಾರ, ಸೊಕ್ಕಿಗೆ ಬದಲು ಸುಕ್ಕು ಅವರ ಮುಖದ ಚಿಹ್ನೆಗಳಾಗಿದ್ದುವು.

ಹೀಗೆ ವರ್ಣಿಸಿದರೇ ದುಃಖವಾಗುವ ಪ್ರಕೃತಿಯಲ್ಲಿ ನನಗೆ ಆಚೆ ಹೋಗಲೇ ಮನಸ್ಸಾಗುತ್ತಿರಲಿಲ್ಲ. ಜನರ ಗೋಳಾದ ಬಾಳನ್ನು, ಕಳೆಯಿಲ್ಲದ ಹೊರವಲಯವನ್ನು ನೋಡುವುದಕ್ಕಿಂತ ನನ್ನ ಕೋಣೆಯೇ ನನಗೆ ಒಪ್ಪಿತ್ತು.

ಒಂದು ದಿನ ಬಹಳ ಬೇಜಾರಾಯಿತು. ಹತ್ತಿರವಿದ್ದ ಪುಸ್ತಕಗಳನ್ನು ತಿರುವಿಹಾಕಿಯಾಗಿತ್ತು. ಬೇರೆ ಪುಸ್ತಕ ಸಿಕ್ಕುವುದು ದುರ್ಲಭ, ಮಲಗಲು ಮನಸ್ಸಾಗದು. ಕೂತಿರಲು ಬೇಜಾರು. ಹೀಗಿದ್ದಾಗ ನನ್ನ ತಮ್ಮ ಬಂದ. ಅವನಿಗೆ ಕಥೆ ಕೇಳುವುದೆಂದರೆ ಬಹಳ ಆಸೆ. ನನ್ನನ್ನು ಕೇಳಿದ. ಹೂಬತ್ತಿ ಹೊಸೆಯುತ್ತಿದ್ದ ಅಜ್ಜಿಯನ್ನು ತೋರಿಸಿದೆ. ಅಜ್ಜಿಯನ್ನು ಕಥೆ ಹೇಳಲೊಪ್ಪಿ ಸುವುದಕ್ಕೆ ನನ್ನ ತಮ್ಮನಿಗೆ ಪ್ರಯಾಸವೇ ಆಯಿತು. ಅಂತೂ ಒಪ್ಪಿದಳು. ಎಲ್ಲರ ಜೊತೆಗೆ ನಾನೂ ಕಿವಿಯಗಲಿಸಿ ಕೇಳತೊಡಗಿದೆ.

"ಏನ್ಹೇಳ್ಲಿ ಮಗೂ?" ಅಜ್ಜಿ ಕೇಳಿದಳು.

"ಏನಾದ್ರೂ ಹೇಳಜ್ಜಿ, ಕಾಗೆ ಗುಬ್ಬಚ್ಚಿ ಕಥೆ ಬೇಡ. ಇನ್ಯಾವದಾದ್ರೂ ಹೇಳು" ಎಂದ ನನ್ನ ತಮ್ಮ.

"ಯಾವ್ದೂ ಜ್ಞಾಪಕಕ್ಕೇ ಬರೊಲ್ವೇ. ಏನ್ಮಾಡೋದು?"

"ಜ್ಞಾಪಿಸ್ಕೋ ಅಜ್ಜೀ."

"ಆ! ಆ ಮೇಲ್ಗಡೆ ಬೀದೀಲಿ ಕೊನೇ ಮನೆ . . ."

"ಮನೆಯೆಲ್ಲಿದೆ ಅಜ್ಜಿ? ಎಲ್ಲಾ ಹಾಳುಗೋಡೆ . . . ಬಿದ್ದುಹೋಗಿರೋದು . . . "

"ಅದೇ. ಅದೇ . . . ಆ ಮನೇಲಿ ಬೀರ ಅಂತ ಒಬ್ಬನಿದ್ನಂತೆ . . . "

"ಯಾವಾಗಜ್ಜೀ . . . ಊ . . . ಇದ್ದಾ ಅಂತ ಇಟ್ಕೊಳ್ಳೋಣ."

"ಅಲ್ಲಾ ಮಗೂ, ನಿಜವಾಗ಼್ೂ ಇದ್ನಂತಪ್ಪ. ನಮ್ಮ ಮಾವ್ನೋರ್ಹತ್ರ ಭೂಮೀನ ಗೇಣಿಗ್ಮಾಡ್ತಿದ್ನಂತೆ. ನಾನೀ ಮನೇಗ್ಬರೋ ಹೊತ್ಗೆ ಅವನೇ ಹೋಗ್ಬಿಟ್ಟಿದ್ದಾನ್ನು."

"ಊ . . . ಆಮೇಲೆ?"

"ಅವನು ವಿಪ್ರೀತ ಬಡವ್ನಂತೆ. ಮದ್ವ್ಯಾದ ಹೊಸ್ದು. ಹೊಲಾ ಗೇಯ್ತಿದ್ದಾಗ ಜನಕಮಹಾರಾಜ—ಶ್ರೀರಾಮಚಂದ್ರಮೂರ್ತಿಗೆ ಮಾವನಾದೋನು—ಅವನಿಗೆ ನೆಲ್ದಲ್ಲಿ ಸೀತಾ ಮಹಾತಾಯಿ ಸಿಕ್ಕಿದ್ದು ನೆನಸ್ಕೊಂಡ್ನಂತೆ. ಇವ್ನಿಗೂ ಅನ್ನಿಸ್ತಂತೆ . . . ಏನೂ ಅಂತ?" ಎಂದು ಪ್ರಶ್ನೆ ಹಾಕಿದಳು.

"ಇನ್ನೇನು? ಒಂದ್ಮಗೂ ಸಿಕ್ಲೀ ಅಂತ ಇರಬಹುದು" ಅಂದೆ ನಾನು.

"ಅವ್ರಿಗೆ ಮಕ್ಕಳ್ಗೇನು ಬರ? ಆದ್ರಲ್ಲೂ ಅವ್ರೆಲ್ಲಾ ಮಕ್ಕಳ್ಗೆ ದೇವರ್ನ ಕೇಳೊಲ್ಲ, ಅಣ್ಣಾ, ಮಕ್ಳಾಗುಲ್ಲ ಅಂದ್ರೆ. ಬೇರೆ ಮದ್ವೆ ಮಾಡ್ಕೊಳ್ತಾರೆ ಅಷ್ಟೆ. ಹಣ ಇರ್ಬೋದಜ್ಜೀ."

"ನೀನ್ಹ್ಯಾಣ. ಅವ್ನು ಆಗ಼್ೇ ನೇಗ್ಲು ನಿಲ್ಸಿ ಊರ ಮುಂದಿನ ಹನ್ಮಂತರಾಯ್ನಿಗೆ ಹರಕೆ ಹೊತ್ಕೊಂಡ್ನಂತೆ. 'ನನ್ನೊಡ್ಯಾ ಮಾಸ್ವಾಮಿ, ಹೀಗೇ ಉಳ್ತಿದ್ದಾಗ ಒಂದು ಕೊಪ್ಪರ಼್ೆ ನಾಣ್ಯ ಸಿಕ್ಬುಟ್ರೆ ನಿನ್ನ ಪಾದಕ್ಕೊಂದು ಕಾಯೊಡಸ್ತೀನಿ. ನಮ್ಮಪ್ಪ—ತಲೇ ಮೇಲಿರೋ ಸೂರ್ನಾರಾಯಣನೇ ಸಾಕ್ಷಿ. ನೊಗ ಪೊತ್ತಿರೋ ನನ್ನ ಬಸವ್ನೇ ಸಾಕ್ಷಿ' ಅಂತ ಹೇಳಿ, ಸೂರ್ಯದೇವನ್ಗೆ ಮುಗಿದು,

ಎದೆ ಮೇಲೆ ಕೈಯಿಟ್ಟು, ಕಣ್ಮುಚ್ಚಿ . . . ಕಣ್ಬಿಟ್ಟು ನೋಡಿದ್ರೆ—ಹೆಂಡ್ತಿ—ಹೊಸ್ಪೆಂಡ್ತಿ ಬುತ್ತಿ ತಂದಿದ್ಲಂತೆ. 'ಏನು ಅದು, ಅಳ್ಕೆ ಅಕ್ತಿದ್ರಲ್ಲಾ?' ಅಂತ ಕೇಳಿದ್ದಕ್ಕೆ—ಇದ್ದ ವಿಷ್ಯ ಎಲ್ಲಾ ಹೇಳಿದ್ಲಂತೆ. 'ನೋಡು—ಸಿಕ್ಬುಟ್ರೆ—ಅಯ್ನೋರ ಬೂಮಿಾ ಬಿಟ್ಬಿಡೋಣ. ಅನ್ಮಂತ್ರಾಯ ನಮ್ಮ ಕಾಯೋನಿಗೆ ಒಂದ್ಕಾಯಿ ಒಡೆಸ್ಬಿಡೋಣ. ಆಮೇಲೆ ಒಂದ್ಗದ್ದೆ, ಒಂದೊಲ, ಊರ್ಮುಂದಿನ ತೋಟ ಸ್ವಂತೀಕೆ ತಕ್ಕೊಂಡು . . . ನಿನ್ಗೆ ಒಂದ್ಕಾಸಿನ್ಸರ . . . ಚೈನೂ ಮಾಡಿಸ್ತೇನೆ. ಆಗ ನಾನು ಗೌಡ . . . ನೀನು ಗೌಡಿತಿ' ಅಂತ ಹೇಳಿ 'ಕಂದಾನ ಕಾಯೋ ಅನುಮಂತರಾಯಾ' ಅಂತ ಹಾಡಿದ್ಲಂತೆ."

"ಆಮೇಲೆ ಸಿಕ್ತಾ ಅಜ್ಜೀ ಹಣ?" 'ಇಲ್ಲ' ಎಂಬ ಉತ್ತರವನ್ನಾಶಿಸಿ ಕೇಳಿದೆ.

"ಕೇಳು ಮಗೂ. ಅವನ್ಗೆ ರಾತ್ರಿ ಕನ್ಸು ಆಯ್ತಂತೆ, ದೇವ್ರೇ ಬಂದು 'ಮೆಚ್ಚಿದ್ನೋ ನನ್ ಮಗ್ನೇ, ನಿನ್ಬಕ್ತೀಗೆ. ವರಾ ಕೊಟ್ಟೆನ್ನಿ' ಅಂತ ಹೇಳಿ ಮಾಯ್ವಾಗಿ ಹೋದ್ನಂತೆ. ನೋಡ್ಮಗೂ, ಅವನ್ಗೆ ದೇವ್ರು ಅಂದ್ರೆ ಬಹಳ ಭಕ್ತಿ ಅಂತೆ. ಒಳ್ಳೇವ್ನೂ ಆಗಿದ್ನಂತೆ, ಯಾರ್ಗಾದ್ರೂ ಕಷ್ಟ ಬಂದ್ರೆ ಕೈಕಟ್ಕೊಂಡು ಸಹಾಯ ಮಾಡೋವ್ನಂತೆ, ಸತ್ಯವಂತ ಅಂತ ಅನ್ಸ್ಕೊಂಡಿದ್ನಂತೆ. ಆದ್ರೆ ಜಿಪುಣಾ ಅಂದ್ರೆ ಜಿಪುಣ. ಊಟ ಮಾಡಿದ ಕೈಲಿ ಕಾಗೆ ಕೂಡ ಓಡಿಸ್ತಾ ಇರ್ಲಿಲ್ಲವಂತೆ ನೋಡು, ಆ ಜಿಪುಣಾಗ್ರೇಸರ ಚಕ್ರವರ್ತಿ."

"ಅಂತೂ ಒಂದ್ಕೆಟ್ಗುಣ ಇದ್ದೇ ಇರ್ಬೇಕು. ಊ . . . ಮುಂದೆ?"

"ವಿಪರೀತ ಬಲಶಾಲಿಯಂತೆ. ಒಂದು ಸಲ ತೊರೆ ಹೆಚ್ಚಿ ಬಂದು ದಾಟಕ್ಕಾಗ್ತಿರ್ಲಿಲ್ವಂತೆ. ನಿಮ್ತಾತ—ಆಗ್ಗೆ ಅವರ್ಗೆ ೧೮ ವರ್ಷ ಅಂತೆ—ಅವರ್ನೂ ಎತ್ಕೊಂಡು ಇಳ್ದೇಬಿಟ್ನಂತೆ—ನಡವುದ್ದ ನೀರ್ನಲ್ಲಿ. ಎಲ್ರೂ ಬಾಯಲ್ಲಿ ಅಕ್ಕಿ ಕಾಳ್ಹಾಕ್ಕೊಂಡ್ನೋಡ್ತಾ ಇದ್ರಂತೆ. ನಮ್ಮಾವ್ನೋರು ಕೂಕ್ಕೊಳ್ತಾ ಇದ್ರಂತೆ. ಸೇರೇ ಬಿಟ್ನಂತೆ ಆಚೆ ದಡಾನ. ತಿರುಗಿ ಬಂದು ಮಾವ್ನೋರ್ನೆ ಎತ್ಕೊಳ್ಳೋಕ್ಕೆ ಹೋದ್ನಂತೆ. ಅವರ್ಬೇಡ ಅಂದ್ರೂ ಬಿಟ್ರೆ ತಾನೇ . . . ?"

"ಅಜ್ಜೀ, ನಮ್ತಾತ ಹೇಗಿದ್ದಾ ಅಜ್ಜೀ?" ನನ್ನ ತಮ್ಮ ಕೇಳಿದ.

"ಹುಡ್ಗಾಟ ನಿನ್ಗೆ . . . ಕಥೆ ಬೇಡಾ ಅಂದ್ರೆ ಹೇಳ್ತೀನಪ್ಪಾ."

"ಕಥೇನೇ ಹೇಳಜ್ಜೀ."

"ಆಮೇಲೆ . . . ಏನ್ಹೇಳ್ತಿದ್ದೆ?" ಪಾಪ! ಅಜ್ಜಿಗೆ ತಾತನ ನೆನಪಾಯ್ತೋ ಏನೋ!

"ಎತ್ತುಗ್ಳು ಅಂದ್ರೆ ಪ್ರಾಣಾನೇ ಕೊಡ್ತಿದ್ನಂತೆ. ಗಂಟೆ ಶಬ್ದ ಕೇಳಿದ ತಕ್ಷಣ ಎಲ್ರಿಗೂ 'ಬೀರಪ್ಪನೆತ್ತುಗ್ಳು ಬಂದ್ವು' ಅಂತ ಗೊತ್ತಾಗ್ಬಿಡ್ತಿತ್ತಂತೆ. ಗೆಜ್ಜೆಮಣಿಗಳ ಪಟ್ಟಿ ಕೊರಳ್ಗೆ, ಕೊಂಬಿಗೆ ಚಿನ್ನದ ಹಾಗೆ ಹೊಳ್ಯೋ ಕುಪ್ಪಿಗ್ಳು. ಅವನ್ನ ಮೇಯಿಸ್ತಿದ್ದದ್ದೂ ಹಾಗೇ ಅಂತೆ. ಎತ್ತಿನ ಮೈಮೇಲೆ ನೊಣ ಕೂತ್ರೆ ಜಾರಿ ಕೆಳ್ಗೆ ಬೀಳ್ತಿದ್ವಂತೆ. ಅಷ್ಟು ಚೆನ್ನಾಗಿ ಮೇಯಿಸ್ತಿದ್ದದ್ದಕ್ಕೆ ನಂದೀ ಜಾತ್ರೇಲೊಂದ್ಸಲ ಬಹುಮಾನ ಕೂಡ ಬಂದಿತ್ತಂತೆ."

"ಅಜ್ಜೀ, ಹಣಾ ಸಿಕ್ತೋ ಇಲ್ವೋ ಅವನ್ಗೆ?" ತಡೆಯಲಾರದೆ ಕೇಳಿದೆ.

"ಹೇಳ್ತೀನೆ ಮಗೂ . . . ಹೇಳ್ತೀನೆ. ಮಾರನೇ ದಿನವೇ ಹೊಲ ಉಳೋಕ್ಹೋದ್ನಂತೆ. ಒಂದ್ಸಾಲು ಉತ್ತಾಕಿದ್ನಂತೆ. ಒಂದ್ಮೂಲೇಲಿ ತಿರುಗಿಸೊ ಕ್ಹೋದ್ರೆ ಎತ್ತು ಎಳೀಲಾರ್ದೆ ಹೋಯ್ತಂತೆ. ಏನೂ ಅಂತ ನೋಡಿದ್ರೆ . . ."

"ಹಣ!"

"ಅಲ್ಲ ಮಗೂ, ದೊಡ್ಡ ಕಲ್ಲು." ಎಲ್ಲರೂ ನಕ್ಕೆವು. ಕಥೆ ಮುಂದು ವರಿಯಿತು. "ಹಾಗೇ ಕೋಲ್ನಿಂದ ಕಲ್ಲಸ್ಕಿತ್ತಾಕಿದ್ನಂತೆ. ಕೆಳಗೆ ಒಂದ್ಪೆಟ್ಗೆ ಇತ್ತಂತೆ. ಬೀರಣ್ಣನಿಗೆ ಭಾರಿ ಸಂತೋಷ ಆಯ್ತಂತೆ. ತೆಗೆದ್ನಂತೆ. ಬೀಗ ಇದ್ದಿಲ್ಲವಂತೆ. ಬರೀ ನಾಣ್ಯಗ್ಳು. ಎತ್ತನ್ನ ಅಲ್ಲೇ ಮೇಯೋಕ್ಬಿಟ್ಟು ಓಡಿದ್ನಂತೆ ಮನೇಗೆ. 'ಏನ್ಮಾಡೋದು?' ಅಂತ ಹೆಂಡ್ತೀನ ಕೇಳಿದ್ನಂತೆ. 'ಅಯ್ನೋರ್ತಾವ ಮಡ್ಗಿರೋಣ, ನಮ್ಗುಡಿಸಲಾಗೇ ಇದ್ರೆ ಯಾರಾದ್ರೂ ಎತ್ತಾಕ್ಬಿಡ್ತಾರೆ' ಅಂತ ಹೇಳಿದ್ಳಂತೆ. 'ಎಲ್ಲೂ ಬೇಡ. ಅಯ್ನೋರ್ದೇ ಒಲ. ಅವ್ರಿಗೆ ತೋರ್ಸಿದ್ರೆ ನಮ್ಹೊಲ್ದಾಗಿಂದು ನಮ್ದೇ ಅಂತಾರೆ ಅವ್ರು. ಒಬ್ಬರ್ಗೂ ತಿಳೀಬಾರ್ದು ಈ ವಿಷ್ಯ. ಬಾಯ್ಬಿಟ್ಟೀಯಾ ಜೋಕೆ. ತತ್ತಾ ಆರೇನ' ಅಂತ ಹೇಳಿ, ಒಂದ್ಗುಂಡಿ ತೋಡಿ, ಅದರಲ್ಹಾಕಿ ಹೂತಿಟ್ನಂತೆ. ಮೇಲೆ ಸಗಣಿ ಸಾರಿಸ್ಬಿಟ್ರಂತೆ."

"ದೇವ್ರನ್ನ ಮರೆತುಹೋಗ್ಬಿಟ್ನಾ? ಕಾಯಿ ಒಡೆಸ್ಲಿಲ್ವಾ?"

"ಕೇಳ್ಬೇಕ್ಗೂ. ಆಮೇಲ್ನ ಮ್ಮಾರ್ವ್ನೋರ್ಷತ್ರ ಬಂದು, ಒಂದಾಣೆ ಕೇಳಿದ್ನಂತೆ. —ಸಾಲ. ಅವ್ರು ಯಾತಕ್ಕೇ ಅಂತ ಕೊಟ್ರಂತೆ. ತಕ್ಕೊಂಡು ಸಂತೇಗ್ಹೋದ್ನಂತೆ, ಕಾಯಿ ತರೋಕೆ. ಅಲ್ಲಿ ಆಣೇಗೊಂದ್ಕಾಯಿ ಮಾರ್ತಿದ್ರಂತೆ. ಅವನು 'ಸಂತೇಲಿ

ಒಂದಾಣೆ; ಪೇಟೇಗ್ಹೋದ್ರೆ ಇನ್ನೂ ಕಮ್ಮಿ ಸಿಕ್ಬಹುದು' ಅಂತ ಯೋಚ್ನೆಮಾಡಿ ಪೇಟೇಗೇ ಹೋದ್ನಂತೆ. ಅಲ್ಲಿ ಒಂಬತ್ಕಾಸ್ಗೊಂದು ಕೊಡ್ತಿದ್ರಂತೆ. ಬೆಂಗಳೂರಲ್ಲಿ ಧಾರಣೆ ಕಡಮೆ ಆಗಿದೆ ಅಂತ ಯಾರೊ ಹೇಳಿದ್ರಂತೆ. ಅಲ್ಲೇ ಹೋಗೋಣಾ ಅಂತ ಹೊರ್ಟು ಬೆಂಗಳೂರನ್ನು ಸೇರಿದ್ನಂತೆ. ಅಲ್ಲಿ ಇಲ್ಲಿ ತಿರ್ಗಿನೋಡೋ ಹೊತ್ಗೆ ಆರ್ಕಾಸಿಗೊಂದ್ಕಾಯಿ ಕೊಡ್ತಿದ್ದ ಅಂಗಡೀಗೆ ಬಂದ್ನಂತೆ. 'ಹೆಂಗಯ್ಯಾ ಕಾಯಿ?' ಅಂದ್ನಂತೆ. 'ನೋಡಯ್ಯ, ತಿಪ್ಟೂರ್ ಕಾಯಿ ಇವೊತ್ತು ತಾನೇ ಬಂದಿದೆ. ಬಹಳ ಚೆನ್ನಾಗಿದೆ. ಆರ್ಕಾಸ್ಗೊಂದು' ಅಂದ್ನಂತೆ. 'ಮೂರ್ಕಾಸ್ಗೊಂದು ಕೊಡ್ತೀಯಾ?' ಅಂತ ಇವ್ನು ಕೇಳಿದ್ನಂತೆ. 'ತಿಪಟೂರಿಗ್ಹೋಗಯ್ಯ, ಕೊಡ್ತಾರೆ. ಯಾವೂರ್ನಿಂದೂ?' ಅಂತ ಅಂದ್ನಂತೆ. ಅವ್ನಲ್ಲಿಂದಲೇ ದಾರಿ ಕೇಳ್ಕೊಂಡು ತಿಪಟೂರ್ಗೇ ಹೊರಟ್ನಂತೆ. ಸೇರಿದ್ದೂ ಆಯಿತು. ಪೇಟೇಗ್ಹೋಗಿ ಕೇಳಿದ. ಮೂರ್ಕಾಸ್ಗೊಂದು ತೆಂಗಿನ್ಕಾಯಿ ರಾಶಿರಾಶಿ ಸುರಿದಿದ್ರಂತೆ. ಆಗ ಅವ್ನಿಗೊಂದು ಯೋಚ್ನೆ ಬಂತಂತೆ. 'ಇಷ್ಟು ಕಾಯ್ಬೆಳ್ಯೋ ಪುಣ್ಯಾತ್ಮರು ಒಂದ್ಕಾಯಿ ಕೇಳಿದ್ರೆ ಕೊಡ್ದೆಹೋಗ್ತಾರೆಯೆ? ಯಾರಾದ್ರೂ ಒಂದ್ಕಾಯಿ ಕೊಟ್ರೆ ಸಾಕು— ಅಯ್ನೋರ ಸಾಲ ಅವರ್ಗೇ ವಾಪಸುಕೊಟ್ಟು, ದೇವ್ರಸೇವೇನೂ ತೀರಿಸ್ಬಿಡ್ಬಹುದು' ಅಂದ್ಕೊಂಡು ಪೇಟೇ ಬಿಟ್ಟು, ಒಂದು ತೋಟ ಹುಡಿಕ್ಕೊಂಡು ಹೋದ್ನಂತೆ. ತೋಟದಲ್ಲಿ ಮರಗ್ಳು ಕಾಯ್ತುಂಬಿ ಜೋಲಾಡ್ತಾ ಇದ್ದವಂತೆ. ಹೋಗಿ ತೋಟ ದೋನ್ಕೇಳಿದ್ರೆ—ಪಾಪ! ಅವ್ನೂ ಒಳ್ಳೇವ್ನಂತೆ—'ಒಂದುಕಿತ್ಕೋ ಹೋಗಯ್ಯಾ —ಮರ ಹತ್ತೋರಿಲ್ಲ' ಎಂದ್ನಂತೆ. ಬೀರಣ್ಣ ಮೊದ್ಲೇ ಬಲಶಾಲಿ, ಹತ್ತೇ ಬಿಟ್ಟ ಒಳ್ಳೆದೊಂದು ಮರಾನ. ಮರ್ದಲ್ಲಿದ್ದ ಕಾಯ್ನೋಡ್ತಿದ್ದ ಹಾಗೇ ನೀರೂರ್ತಿತ್ತಂತೆ—ಅವ್ನ ಬಾಯಲ್ಲಿ. ಮರಾನೂ ಹತ್ತಿದ. ಅಷ್ಟೊಂದು ಕಾಯಿ ನೋಡಿದ್ಮೇಲೆ ಅವ್ನಿಗಿನ್ನೊಂದು ಯೋಚ್ನೆ ಹುಟ್ತಂತೆ: 'ಈ ಕಾಯ್ನೆಲ್ಲಾ ತೆಕ್ಕೊಂಡು, ಅವ್ನು ನೋಡ್ದೇ ಇದ್ದಾಗೆ ಹೊರಟ್ಹೋಗ್ಬಿಟ್ರೆ—ಈ ಹೊಟ್ನಿಂದ ಬಸವನ್ಗೆ ಹಗ್ಗ ಹೊಸೀಬಹ್ದು. ಅದ್ರ ದುಡ್ಡೂ ಉಳೀತದೆ. ಈ ಕಾಯ್ನೆಲ್ಲಾ ಮಾರ್ಬಿಟ್ರೆ —ಇಷ್ಟು ಹಣಾನೂ ಬರುತ್ತೆ. ಈಗಿರೋ ಹಣಕ್ಕೆ ಇನ್ನಿಷ್ಟು ಹಣ ಸೇರಿದ್ರೆ ಇಷ್ಟು ಹಣ ಆಗುತ್ತೆ' ಅಂತ ಕೈನಲ್ಲಿ ಅಷ್ಟು ಹಣ ಅಂತ ನೋಡಿಕೊಳ್ಳೋಕ್ಹೋಗಿ ಕೈಬಿಟ್ನಂತೆ, ಕೆಳಗೆ ಬಿದ್ನಂತೆ." ಎನ್ನುವಾಗ ಅಜ್ಜಿಯ ಕೈಗಳು ಪ್ರಮಾಣವನ್ನು ಸೂಚಿಸುವಂತೆ ಹಿಗ್ಗುತ್ತಿದ್ದುವು. ನಮ್ಮ ಬಾಯಿಗಳೂ ಹಿಗ್ಗಿದುವು.

"ಆಮೇಲೆ . . . ?" ಎಂದ ನನ್ನ ತಮ್ಮ, ನಕ್ಕು ಮುಗಿಸಲಾರದೆ.

"ಆಮೇಲೆ ಕೆಳಗೆ ಬಿದ್ದ ಯಮುನ ಪಟ್ಣ ಸೇರಿದ . . . ಅದನ್ನು ಕೇಳಿ ಅವನ ಹೆಂಡ್ತಿ ಎದೆ ಎದೆ ಹೊಡ್ಕೊಂಡು ಬಡ್ಕೊಂಡಳು. ನಡೆದ ವಿಷ್ಯ ಕೇಳಿ ಹಣದ ಪೆಟ್ಗೆ ಹೂತಿಟ್ಟ ಸ್ಥಳದಲ್ಲಿ ನೋಡಿದ್ರೆ . . . ದೇವರ ಮಾಯೆ ನೋಡು . . . ಅದೂ ಅಲ್ಲಿರ್ಲಿಲ್ಲವಂತೆ. ಅವ್ಳು ನಾನ್ಸಂದ್ಮೇಲೂ ಎಷ್ಟೋ ದಿನ ಬತ್ತ ಕುಟ್ಟೋದಕ್ಕೆ ಬರ್ತ್ತಿದ್ದಳು." ಎಂದು ಅಜ್ಜಿ ಕಥೆಯನ್ನು ಮುಗಿಸಿದಳು.

—ಬಿ. ಟಿ. **ಅಶ್ವತ್ಥನಾರಾಯಣರಾವ್.**

[ಇದರೊಳಗಿನ ಅಜ್ಜಿ ಕಥೆ ಚಿಕ್ಕಬಳ್ಳಾಪುರದ ಕಡೆಯದು.]

---

## ದಿನದಿನದ ಗರಡಿ

ಎನಿತು ನೀಂ ಗೆಲಿದೆಯೆಂದೆನರು ಬಲ್ಲವರೆಂದು-
ಮೆನಿತು ನೀಂ ಪೋರ್ದೆಯೆನಿತು ಪೊತ್ತೆಯೆನುವರ್
ಗಣನೆ ಸಲುವುದು ತೋರ್ದ ಪೌರುಷಕೆ, ಜಯಕಲ್ಲ
ದಿನದಿನದ ಗರಡಿಯಿದು – ಮಂಕುತಿಮ್ಮ

ಜಟ್ಟಿ ಕಾಳಗದಿ ಗೆಲ್ಲದೊಡೆ ಗರಡಿಯ ಸಾಮು
ಪಟ್ಟು ವರಿಸೆಗಳೆಲ್ಲ ವಿಫಲವೆನ್ನುವೆಯೇಂ ?
ಮುಟ್ಟಿ ನೋಡವನ ಮೈಕಟ್ಟು ಕಬ್ಬಿಣ ಗಟ್ಟಿ
ಗಟ್ಟಿತನ ಗರಡಿಫಲ—ಮಂಕುತಿಮ್ಮ

# ಚಂದ್ರಕುಮಾರಿ

ಆದಿನ ಹಿಡಿದ ಮಳೆ ಬಿಟ್ಟಿರಲಿಲ್ಲ. ಹೊರಗೆ ಹೋಗುವಂತೆಯೆ ಇರಲಿಲ್ಲ. ಆದರೆ ಒಳಗೆ ಕುಳಿತು ಮಾಡುವುದೇನು? ಬಹಳ ಬೇಸರಕ್ಕಿಟ್ಟುಕೊಂಡಿತು. ಅಮ್ಮನ ಬಳಿ ಹೋಗಿ ಏನಾದರೂ ತಿನ್ನಲು ಕೊಡೆಂದು ಕಾಡತೊಡಗಿದೆವು. ಅಮ್ಮ ಎಲ್ಲರಿಗೂ ಚೂರು ಚೂರು ಬೆಲ್ಲ ಕೊಟ್ಟು, "ಅಜ್ಜನಮ್ಮನ್ನ ಕತೆ ಏಳು ಅನ್ನಿ, ಓಗ್ರಿ" ಎಂದಳು. ಸಮಯ ಕಳೆಯಲು ಬಹಳ ಒಳ್ಳೆಯ ಉಪಾಯ ಹುಡುಕಿಕೊಟ್ಟಳು ಅಮ್ಮ. ಅಜ್ಜಿ ಅಂಗಳದಲ್ಲಿ ಕುಳಿತು ಸೊಪ್ಪು ಸೋಸುತ್ತಿದ್ದಳು. ಆಕೆಯನ್ನು ನಾವೆಲ್ಲರೂ ಮುತ್ತಿ ಕಾಡತೊಡಗಿದೆವು. ಅಜ್ಜಿ ಸಿಟ್ಟಾಗಿ "ಓಗ್ರಾ, ನಿಮಿಗೆ ಕತೆ ಬ್ಯಾರೆ ದಂಡಕೆ" ಎಂದು ಗದರಿಸಿದಳು. ಆದರೆ ನಾವು ಬಿಟ್ಟೇವೆ ಘಟಿಂಗರು! ಒಂದೇ ಸಮನೆ ಕಾಡಿದೆವು. ಸ್ವಲ್ಪ ಹೊತ್ತಿನ ಮೇಲೆ ಆಕೆ ಒಪ್ಪಿ "ಹಂಗಾರೆ, ನಾ ಹೇಳ್ದಂಗ ಕೇಳ್ತೀರಾ? ಆತು, ನಡಿವಿ ಯಾರೂ ಬಾಯ್ಹಾಕದಂಗ ಸುಮ್ಮಗ ಕುಂತರಾ ನಾ ಹೇಳೋದು" ಎಂದಳು. ನಾವೆಲ್ಲ ಸಂತೋಷದಿಂದ ಒಪ್ಪಿ 'ಹೂಂ' ಎಂದೆವು.

ಅಜ್ಜಿ ಗಂಟಲು ಸರಿಮಾಡಿಕೊಂಡು, "ಹುಂ, ಮತ್ತೆ, ಬೆಂಗಳೂರಂತ ಒಂದು ದೊಡ್ಡ ಪಟ್ಣಂತೇ. ಅಲ್ಲಿ ಒಬ್ಬ ದೊರೆ, ಒಬ್ಬ ಪರದಾನಿ ಇದ್ರಂತೇ. ದೊರೀಗೆ ಸತ್ಯವಂತ, ದೇವಕೊಮಾರ ಅಂತ ಇಬ್ರು ಗಂಡುಮಕ್ಕಳುನೂವೇ, ಪರದಾನಿಗೆ ದುರ್ಬುದ್ದಿ ಅಂತಾ ಒಬ್ಬೇ ಒಬ್ಬ ಮಗನೂವೇ ಇದ್ರಂತೆ . . ."

"ದೊರೆ, ಪ್ರದಾನಿ ಎಸರು ಏನಜ್ಜಿ?" ತಮ್ಮ ಕೃಷ್ಣ ಬಾಯಿ ಹಾಕಿದ.

"ಹೋಗ್ಲಾ, ಹಂಗ ನಡುವಿ ಬಾಯಿ ಹಾಕಿದ್ರಂದ್ರ ನಾ ಹೇಳಾಕಿಲ್ಲಾ."

"ಇಲ್ಲಾ ಕಣಜ್ಜಿ. ಇನ್ನ ಬಾಯಿ ಬಿಟ್ರೆ ನಿನ್ನಾಣೆ" ಅಂದ್ರು ಎಲ್ಲರೂ.

"ಹೂಂ, ಸಂಪಿಗಿರಾಯನ ಪಟ್ನಾ, ಸಂಪಿಗಿರಾಯನ ಪಟ್ನಾ ಅಂತ ಇನ್ನೊಂದು ದೇಸ ಇತ್ತಂತೆ. ಅಲ್ಲಿಯ ರಾಜಗೆ ಮಕ್ಳೇ ಇರಲಿಲ್ಲಂತೆ. ಒಮ್ಮೆ ಯಾರೋ ಸನ್ಯಾಸಪ್ಪ 'ರಾತ್ರಿ ಒತ್ನಾಗೆ, ರಾಜ ರಾಣಿ ಇಬ್ಬರೂ ಓಗಿ ಈಸ್ವರಗೆ ಪೂಜೆ ಮಾಡಿದರೆ, ಅದ್ನೈದು ದಿನದಾಗೆ ದೇವರು ಪಲ ಕೊಡ್ತಾನೆ' ಅಂತ ಏಳಿದ್ನಂತೆ. ಅದಕ್ಕೆ ಆ ರಾಜರಾಣಿ ಅಂಗೇ ಮಾಡಿದ್ರಂತೆ. ಒಂದೀಸ ದೇವರು ಪ್ರತ್ಯಕ್ಸಾಗಿ 'ರಾಜಾ, ನೀನು ಬಾಳಾ ದೊಡ್ಡ ಬಕ್ತ. ನಿಂಗೆ ಒಂದು ಯೆಣ್ಣು

ಪಲ ಕೊಟ್ಟಿದೀನಿ, ಓಗಿ ಸುಕವಾಗಿ ಇರು' ಅಂತ ವರ ಕೊಟ್ನಂತೆ. ಅಂಗೇ ಅವರಿಗೆ ಒಂದು ಎಣ್ಣು ಕೂಸು ಉಟ್ಟಿತಂತೆ.

ಇತ್ಲಾಗೆ ಬೆಂಗಳೂರಿನಂತ ಪಟ್ಣ ಇತ್ತಲ್ಲ,—ಮಲ್ಲಿಗರಾಯನ ಪಟ್ಣ—ಅಲ್ಲಿ ರಾಜಕೊಮಾರರೂ ಮಂತ್ರಿಕೊಮಾರನೂ ಇದ್ಯಾಬುದ್ದಿ ಕಲ್ತು ಪ್ರಬುದ್ದ ಮಾನಕ್ಕೆ ಬಂದ್ರು. ಇಲ್ಲಿ ರಾಜಕೊಮಾರಿ ಶಂದ್ರಕೊಮಾರೀನೂವೇ ಓದು ಬರಾ ಎಲ್ಲಾ ಕಲ್ತು ಪ್ರಬುದ್ದಮಾನಕ್ಕೆ ಬಂದ್ಲು.

ಸಂಪಿಗಿರಾಯನ ಪಟ್ಣದ ಅರಸ 'ಒಬ್ಬೇ ಮಗಳು, ಆಕೀಗೆ ಯಾರು ಪ್ರೀತಿ ಆಗ್ತಾರೋ ಅವರ್ನೇ ಮದ್ವಿ ಆಗಲಿ' ಅಂತ, ಐವತ್ತಾರು ದೇಸದ ರಾಜ ಕೊಮಾರರ್ನೂ ಕರಸಿ ಸಯಂರ ಮಾಡಿಸಿದನಂತೆ. ಮಲ್ಲಿಗರಾಯನ ಪಟ್ಣದ ರಾಜಕೊಮಾರರೂ ಬಂದಿದ್ರಂತೆ, ಜೊತೇಲಿ ಮಂತ್ರಿಕೊಮಾರನೂವೇ ಬಂದಿದ್ದ. ಸಯಂರದಾಗೆ ರಾಜಕೊಮಾರಿ ಮಾಲಿ ಕೈಯಾಗೆ ಇಡಕಂಡು ಬಂದ್ಲಂತೆ; ಬಂದಿದ್ದೇ ಎಲ್ಲಾರ್ನೂ ಬಿಟ್ಟು ಸತ್ಯವಂತನ ಕೊಳ್ಳಿಗೆ ಆಕಿಬಿಟ್ಟಳಂತೆ. ಆಕೀನ ನೋಡಿದ ಲಾಗಾಯ್ತು ದುರ್ಬುದ್ದಿ ಬಾಯಾಗೆ ನೀರೂರ್ತಿರೋವಂತೆ.

ಇನ್ನೇನು ಶಂದ್ರಕೊಮಾರಿಗೂ ಸತ್ಯವಂತಗೂ ಬಾಳಾ ವೈಬೋಗದಿಂದ ಲಗ್ನ ಮಾಡಿದ್ರು. ದುರ್ಬುದ್ದಿ ಒಟ್ಟೊಟ್ಟಿ ಉರುಕಂಬ್ತಿದ್ದನಂತೆ, 'ಎಲಾ ಇವನಾ! ಎಂತಾ ಚಲೋದ ಎಣ್ಣು ಇವಂಗೆ ಸಿಕ್ಕೋಯಿತಲ್ಲಾ' ಅಂತ.

ಶಂದ್ರಕೊಮಾರಿ ಗಂಡನ ಮನೀಗೆ ಬಂದ್ಲು. ನಾಕು ದಿನ ಎಲ್ರೂ ಸುಕ್ವಾಗಿದ್ರು. ಇಂಗೇ ಇರ್ತಾ ಶಂದ್ರಕೊಮಾರಿ ಗರ್ಬಿಣಿ ಆದ್ಲು. ಅದೇ ಸಮಯದಾಗೆ ಒಂದು ಕೀಲುಕುದುರೆ ಮಾರಾಕೆ ಬಂತು. ಮನುಸಾ ಅದರ ಮ್ಯಾಲೆ ಕುಂತು, ಅದರ ಸೂತ್ರಾ ತಿರುವಿದಾಂದರೆ ಇಮಾನದಂಗೆ ಆಕಾಸದಾಗೆ ಆರೋ ಕುದ್ರೆ ಅದು, ಕಬ್ಬಿಣದ್ದು. ಅದನ್ನ ಒಂದು ಸಾವಿರ ವರಾ ಕೊಟ್ಟು ಸತ್ಯವಂತ ಕೊಂಡುಕಂಡು ಇಟ್ಕಕಂಡ. ಆಮ್ಯಾಲೆ, ಹೆರಿಗೇಗಂತ ಶಂದ್ರ ಕೊಮಾರೀನ ತೌರುಮನೀಗೆ ಕರಕಂಡು ಓದ್ರು. ಅಲ್ಲಿ ಶಂದ್ರಕೊಮಾರೀಗೆ ಗಂಡು ಮಗ ಜನನಾದ್ನಂತೆ. ಆಮ್ಯಾಲೆ ಆಕೀನ ಗಂಡನ ಮನೀಗೆ ಕರಕಂಡು ಬರಬೇಕಲ್ಲಾ, ಸತ್ಯವಂತಗೇನೋ ಬಲು ಕೆಲಸಾ ಇತ್ತಂತೆ—ಅದಕಾಗಿ, ದುರ್ಬುದ್ದಿ ಕೂಟೆ ದಂಡು ದಳ ಕಳಿಶಿ, ಶಂದ್ರಕೊಮಾರೀನ ಆಕಿ ಮಗನ್ನ ಕರಕಂಡು ಬಾ ಅಂತ ಏಳಿದರಂತೆ.

ಮಂತ್ರಿಕೊಮಾರ ಓಗಿ, ಅವರ್ನ ಕರಕಂಡು, ರಾಜ ಕೊಟ್ಟ ಉಡಗೊರಿ ನೆಲ್ಲಾ ತಗಂಡು, ಒಳ್ಳೋ ವ್ಯಾಳೀಗೆ ಮದ್ಯಾನ ಆತಂತೆ. ಮದ್ಯಾನ್ನದಾಗೆ ಶಂದ್ರಕೊಮಾರೀನ, ಆಕಿ ಮಗನ್ನ, ಇಬ್ಬರು ಗೌಡೀರ್ನ, ಪಟ್ಟದ ಆನೆಮ್ಯಾಲೆ ಕುಂಡರಿಸಿಕೊಂಡು ಒಂಟ್ನಂತೆ. ಆನೆ ಮುಂದೆ ಮುಂದೆ, ದಂಡು ದಳ ಇಂದೆ ಇಂದೆ. ಸಂಜಿ ಆಗ್ತಾ ಆಗ್ತಾ, ಆನೇನ ಜೋರಾಗಿ ಬಿಡಾಕ ಹತ್ತಿದ್ನಂತೆ. ಶಂದ್ರಕೊಮಾರಿ ಬಲು ವಿದವಾಗಿ ಬ್ಯಾಡಿದಳಂತೆ: 'ಮಂತ್ರೀ, ಬ್ಯಾಡ ಕಣಪ್ಪ, ನಿದಾನಿಸು. ನಮ್ಮ ದಂಡು ದಳ ಎಲ್ಲಾ ಇಂದೆ ಬಿದ್ದೋತು. ಯಾಕ ಹೀಂಗೆ ಓಡಿಸ್ತೀ?' ಅಂತ. ಅವನು ಕೇಳ್ಯಾನೇ? ಇನ್ನಾ ಜೋರಾಗಿ ಬಿಟ್ಟನಂತೆ. ಆಮ್ಯಾಲೆ ಇನ್ನೇನೂ, ಚನ್ನಾಗಿ ಕತ್ತಲಾತು. ದಂಡು ದಳ ಎಲ್ಲಾ ಬಲು ಇಂದೆ ಬಿದ್ದೋತು. ಆವಾಗಾ ಅಲ್ಲೊಂದು ಬಾವಿ ಕಾಣಿಸ್ತಂತೇ, ದಾರಿ ಮಗ್ಗುಲಾಗೆ. ಅದಕ್ಕೆ ತುಸು ದೂರದಾಗೇನೇ ಒಂದು ಸಣ್ಣ ಗುಡ್ಡ ಇತ್ತಂತೆ. ದುರ್ಬುದ್ದಿ ಆನೀನ ಅದರ ಮ್ಯಾಕೆ ಅತ್ತಿಸಿಬಿಟ್ನಂತೆ. ಅಲ್ಲಿ ಸಣ್ಣದೊಂದು ಬನ್ನಿಮಂಕಾಳಮ್ಮನ ಗುಡಿ ಇತ್ತಂತೆ. ಅಲ್ಲಿ ಎಲ್ಲಾರ್ನೂ ಇಳಿಶಿ, 'ಶಂದ್ರಕೊಮಾರಿ, ಇನ್ನ ನೀನು ನಿನ್ನ ಗಂಡನ ಆಸಿ ಬಿಟ್ಬಿಡು. ನಾನೇ ನಿನ್ನ ಗಂಡಾ ಅಂತಂದು ತಿಳ್ಕೋ' ಅಂತ ಏಳಿದನಂತೆ. ಆದಕ್ಕೆ ಆಕಿ, 'ಮಂತ್ರೀ, ನನ್ನ ಗಂಡನ ಮನ್ಯಾಗೆ ನಿನ್ನ ನೋಡಿದಾಗಿನಿಂದ ನಿನ್ನ ಜತೆ ಮಾಡ್ಕಾಬೇಕು ಅಂಬ್ಕಂತ ಬಾಳಾ ಆಸಿ ಇತ್ತು. ನನ್ನ ಆಸಿ ಪೂರೈಸೋ ಯಾಳ್ಯಾವು ಇವತ್ತು ಬಂತು. ಸರಿ, ನಮ್ಮ ರಾಜ್ಯಕ್ಕ ಓಗಾನ ನಡಿ, ಅಲ್ಲೇ ಯಾರ್ಗೂ ಕಾಣ್ದಂಗ ಜತೀ ಮಾಡ್ಕಂಡು ಇರಾನಾ' ಅಂದ್ಲಂತೆ. ಆಕೀ, ಏನಾರೆ ಮಾಡಿ ರಾಜ್ಯ ಸೇರಬೇಕು ಅಂದ್ಕಂಡು ಇಂಗೆ ಉಪಾಯವಾಗಿ ಹೇಳಿದ್ಲು. ಅದಕವನು 'ಇಲ್ಲಾ, ನಾವಿಬ್ಬರೇ ಬ್ಯಾರೇ ರಾಜ್ಯಕ್ಕೆ ಓಗಿ ಅಲ್ಲಿ ಸುಕವಾಗಿ ಇರಾನಾ. ಆತು, ನೀವಿಲ್ಲೇ ಇರ್ರಿ, ನಾ ನೀರು ತರ್ತೇನಿ, ಪಲಾರ ಮಾಡೋನಂತೆ" ಅಂತ ಅಂದು, ನೀರು ತರಾಕೇ ಅಂತ ಗುಡ್ಡ ಇಳ್ದು ಓದ್ನಂತೆ. ಅವನು ಅತ್ಲಾಗೆ ಓಗತ್ಲು, ಶಂದ್ರಕೊಮಾರಿ ಕುಂತಿದ್ದೋಳು ಸರಲ್ ಅಂತ ಎದ್ದಿದ್ದೆ, 'ಗುಡೀ ಒಳೀಕೆ ಓಗಿ, ದೇವಿಪಾದದ ಮ್ಯಾಲೆ ಬಿದ್ದು, 'ತಾಯಿ, ನೀನೇ ನನ್ನ ಮಾನ ಕಾಪಾಡಮ್ಮ' ಅಂತ ಬೇಡಿಕೊಂಡಳಂತೆ. ಆಕೀ ಅಂಗ ಅಂದದ್ದೆ ತಡ, ಬಾಗಿಲು 'ಧಡಾರ್' ಅಂತ ಮುಂದಕ್ಕೆ ಬಿದ್ಬಿಟ್ಟತಂತೆ. ಆ ಎಳೇ ಮಗಾನೂ ಗೌಡೀರೂ ಒರಗೇ ಇದ್ರಂತೆ.

ದುರ್ಬುದ್ಧಿ ನೀರು ತಗಂಡು ಸರಸರ ಬಂದ. ಬಂದೋನೆ ಆಕಿ ಇಲ್ಲದ್ನ ಕಂಡು 'ಆಕಿ ಎಲ್ಲಿ?' ಅಂತ ಗೌಡೀರ್ನ ಕೇಳಿದ. ಅವರು ನಡೆದದ್ದನ್ನ ಏಳಿದ್ರು. ಆ ಬಾಗಿಲು ದಬ್ಬಬೇಕು ಅಂತಂದು ಏನೇನೋ ಮಾಡಿನೋಡ್ದ, ಆಗ್ಲಿಲ್ಲ. ದೇವಿ ಆಕಿರೋ ಬಾಗ್ಲು ತಗ್ಯಾಕೆ ಇವನಿಂದಾದಾತಾ? ಕೊನೀಗೆ ಅವನು, ಆಕೀನ ಕೂಗದ, ಗದರಿಸಿದ, ಬೈದ. ಏನು ಮಾಡಿದರೂ ಆಕಿ ಮಾತಾಡ್ಲಿಲ್ಲ. ಅವನಿಗೆ ಸಿಟ್ಟು ಅತ್ತಿ 'ನಿನ್ನ ಗೌಡೀರ್ನ ಸಾಯಿಸ್ತೀನೀ' ಅಂತ ಕತ್ತಿ ತಕೆಂಡು ಅವರ್ನ ಕಡಿದ. ಆಕಿ ಮಾತಾಡಲಿಲ್ಲ. "ನಿನ್ನ ಮಗನ್ನ ಸಾಯಿಸ್ತೀನಿ" ಅಂದ. ಆಕಿ ಮಾತಾಡ್ಲಿಲ್ಲ. ಆ ಎಳೆ ಕೂಸ್ನ ಕಡಿದು ತುಂಡುತುಂಡು ಮಾಡಿ ಕಂಡಿಇಂದ ಆಕಿ ಮುಂದಕ್ಕೆ ಎಸೆದ. ಆಕಿ ಮಿಸುಗಲಿಲ್ಲ. ಇನ್ನೇನು ಮಾಡ್ತಾನೆ ಅವನು? ಆನಿಮ್ಯಾಲೆ ಅತ್ಕಂಡು, ದೇಸದ ಮೇಲೆ ಒಂಟ್ಬಟ್ಟ.

ಇತ್ಲಾಗೆ ದೇವಿಪಾದದ ಮ್ಯಾಲೆ ಬಿದ್ದೇಟಿಗೆ ಆಕಿ ಪ್ರಗ್ನಿ ತಪ್ಪೋಗಿತ್ತು. ಪ್ರಗ್ನಿ ಬಂದ ಮ್ಯಾಲೆ ಎದ್ದು ನೋಡ್ತಾಳೆ: ಮಗ ಚೂರು ಚೂರು ತುಂಡಾಗಿ ಪಕ್ಕದಾಗೆ ಬಿದ್ದಾನೆ. ಆಕಿ ಗೋಳೋ ಅಂತ ಬಾಳಾ ಹೊತ್ತು ಅತ್ಲು. ಕೊನೀಗೆ ದೇವಿ ಪ್ರತ್ಯಕ್ಸಾಗಿ, 'ಅಮ್ಮ, ನೀನು ಸುಮ್ಮುಕ ಯಾಕಳ್ತೀ? ಈಗ ನಿನಗೆ ಸನಿ ಕಾಟ. ಇನ್ನೂ ಅನ್ನೆರಡು ವರ್ಸ ಇದು ನಿಲ್ಲಲ್ಲ. ಅಲ್ಲಿವರೆಗೆ ದೇಸದ ಮ್ಯಾಲೆ ತಿರುಗಿಕಂಡಿರು. ಕಸ್ಟ ಬಂದಾಗ ನನ್ನ ನೆನಸು. ಆಮ್ಯಾಲೆ ನಿನ್ನ ಗಂಡ, ಮಗ ಎಲ್ಲಾ ನಿಂಗೆ ಸಿಕ್ತಾರೆ. ಓಗು' ಅಂತ ಏಳಿಬಿಟ್ಟು ಮಾಯ ಆದಳು.

ಇತ್ಲಾಗೆ ದಂಡು ದಳ ಎಲ್ಲ ತಿರಗದಿನ ರಾಜ್ಯಕ್ಕೆ ಓಯಿತು. ಮಂತ್ರೀನೂ ಇಲ್ಲ, ರಾಜಕೊಮಾರೀನೂ ಇಲ್ಲ. 'ಎಲ್ಲಿ?' ಅಂತ ಎಲ್ರೂ ಕೇಳಿದ್ರು. 'ಅವರಾಗ್ಲೇ ರಾತ್ರೀನೇ ಆನೀಮ್ಯಾಲ ಬಂದ್ರಲ್ಲಾ?' ಅಂತ ಏಳಿದ್ರು. 'ರಾಜಕೊಮಾರೀನ ಕರಕಂಡು ಮಂತ್ರಿ ಮಗ ಓಡೋದ' ಅಂತ ಎಲ್ರೂ ಗೋಳಾಡಿದ್ರು. ಮಂತ್ರಿ ಮ್ಯಾಲೆ ಸಿಟ್ಟಗೆದ್ದರು. ಸತ್ಯವಂತ, "ನಾನವನ್ನ ಉಡುಕಿ, ಸಿಗುದು ತ್ವಾರಣ ಕಟ್ತೀನಿ" ಅಂದಿಟ್ಟು ಒಂಟ್ಬಟ್ಟ.

ಇತ್ಲಾಗೆ ಚಂದ್ರಕೊಮಾರಿ, ಮನಸು ಎತ್ಲಾಗೆ ಎಳದ್ರೆ ಅತ್ಲಾಗೆ ಓಗಕ್ಕ ಹತ್ತಿದಲು. ಇಂಗೇ ಕಾಡುಮೇಡು, ಎಲ್ಲಂದರಲ್ಲಿ ಅಲಿಯೂದು, ಅಣ್ಣು ಅಂಪಲು ಏನು ಸಿಕ್ಕಿದ್ರೆ ಅದು ತಿನ್ನೋದು, ರಾತ್ರಿ ಆದಮ್ಯಾಲೆ ಮರದ ಕೆಳಗೆ ಓಗಿ ಮಲಗೋದು, ಇಂಗೇ ದಿನ ಕಳೀತಾಇದ್ಲು.

ಇಂಗೆ ಇರ್‍ತಾ, ಒಂದಿನ ಆಕಿ ಅಂಗೇ ಓಗ್ತಾ ಇರ್ವಾಗ ದಾರ್‍ಯಾಗೆ ನಾಕು ಜನ ಕಳ್ಳರು ಸಿಕ್ಕಿದರು. ಆಕಿ ಒಬ್ಬಂಟಿಗಳಾಗಿ ಓಗ್ತಿರೋದು ಕಂಡು, ಅವರು ಯಾರು ಏನು ಅಂತ ಇಚಾರಿಸಿದ್ರೆ, 'ನಾನು ಪರದೇಸಿ, ನಂಗೆ ಯಾರೂ ಗತಿ ಇಲ್ಲ' ಅಂತ ಆಕಿ ಏಳಿದ್ಲು. ಆಕೀನ ತಮ್ಮ ಗುಡ್ಲಿಗೆ ಕರಕಂಡು ಒಯ್ದರು. ಅವ್ರ ಗುಡ್ಲುಗಳು ಒಂದು ವನಾಂತರದ ನಡುವಿ ಇದ್ವು. ಅಲ್ಲಿಗೆ ಓದವ್ಯಾಲೆ ಆಕಿ 'ಒಳ್ಳೇದು, ನಿಮ್ಮಲ್ಲಿ ಯಾರನಾರೇ ಒಬ್ಬನ್ನ ಮದ್ವಿಆಗಿ ಇಲ್ಲೇ ಇರ್ತೀನಿ. ನಾ ಬೆಳಗಿಂದ ಉಪಾಸಾ, ನಂಗೀಗ ಬೆಳ್ಳೂರು ಅಕ್ಕಿ ತಂದುಕೊಟ್ರೆ, ನಾ ಅಡಿಗಿ ಮಾಡಿಕಂಡು ಉಣ್ಣತೀನಿ' ಅಂತ ಅಂದ್ಲು. ಅವರು ನಾಲ್ವೋರು, ನೀ ಓಗು ಅಂತ ಒಬ್ಬ, ನೀನೇ ಓಗು ಅಂತ ಇನ್ನೊಬ್ಬ, ಇಂಗೇ ಜಗಳಾ. ಕೊನೀಗೆ ಎಲ್ರೂನೂವೆ ಒಂದೊಂದು ದಿಕ್ಕಿಗೆ ಒಂಟ್ರು. ಅವರೆಲ್ಲಾರೂ ಅತ್ಲಾಗೆ ಓಗುತ್ಲು, ಇತ್ಲಾಗೆ ಈಕಿ ಅಲ್ಲಿಂದ ಕಾಡು ಒಕ್ಕು ಬ್ಯಾಗಬ್ಯಾಗನೆ ಮುಂದಮುಂದಕೆ ಓಗಿಬುಟ್ಳು.

ಇಂಗೇ ಮುಂದಕ್ಕೆ ಓಗ್ತಾ ಇರುವಾಗ ಒಂದು ದಿನ ಒಬ್ಬ ಸಿಪಾಯಿ ಕುದಿರೆವ್ಯಾಲೆ ಕುಂತ್ಕಂಡು ಇದ್ರಿಗೆ ಬಂದ. ಆಕಿ ಒಬ್ಳೇ ಓಗೋದು ಕಂಡು, ಯಾರು ಎತ್ತ ಅಂತಂದು ಇಚಾರಣಿ ಮಾಡಿದ. ಆಕಿ ಪರದೇಸಿ ಅಂತಂದು ತಿಳಿಯುತ್ಲು 'ನನ್ನ ಕೂಟ ಬಾ, ಇಬ್ರೂನೂವೆ ಮದ್ವ್ಯಾಗಿ ಸುಕ್ವಾಗಿ ಇರೂಣಂತ' ಅಂತ ಅಂದು ಆಕೀನ ಕುದ್ರೀವ್ಯಾಲೆ ಕುಂದ್ರಿಸಿಕೆಂಡು ಒಂಟ್ನಂತೇ. ಆಕೀಗೆ ಈವಾಗ ಯಂಗೆ ಪಾರಾಗಬೇಕು ಅಂಬೂದೇ ತಿಳೀಲಿಲ್ಲಂತೆ. ಕೊನೀಗೆ ಒಂದುಪಾಯ ಮಾಡಿದ್ಲಂತೆ. ಎಸ್ಟೇ ಆಗಲಿ, ಇದ್ಯಾಬುದ್ಧಿ ಕಲ್ತ ಎಣ್ಣು. ಕಾಡಲ್ಲ ಏನಲ್ಲ. ಇನ್ನೇನೂ, ಕುದ್ರೀವ್ಯಾಲಿಂದ ಕೆಳಗಿಳದು, ಅಲ್ಲೇ ಹೊಳ್ಳಾಡಿಕಂಡು 'ಲಬ ಲಬ' ಅಂತ ಹೊಯ್ಕಂಬಾಕ ಸುರುಮಾಡಿದಲಂತೆ. 'ಇದ್ಯಾಕ ಹಿಂಗೆ ಮಾಡ್ತೀ? ಏನಾತು?' ಅಂತ ಸಿಪಾಯಿ ಕೇಳಿದ್ದಕೇ, 'ಅಯ್ಯೋ, ಒಟ್ಟೆಸೂಲಿ ಎದ್ದದೆ. ಮೂರು ತಿಂಗ್ಳಿಗೆ ಒಂದು ಪಟ್ಟು ನಂಗೆ ಬತ್ತದೆ. ಈಗ ಬ್ಯಾಗನೆ ಓಗಿ ಎಲ್ಲಾರೆ ಒಂದಿಸ್ಟು ಕೋತೀ ನರಕ ತರ್‍ರಿ. ಇಲ್ದಿದ್ರೆ ನಾ ಉಳಿಯಾಕಿಲ್ಲ' ಅಂತ ಅಂದ್ಲು. ಆ ಸಿಪಾಯಿ ಆಕೀನ ಅಲ್ಲೇ ಒಂದು ಮರದ ಕೆಳಗೆ ಮಲಗಿಸಿದ, ಕುದ್ರೀನ ಒಂದು ಬುಡಕ್ಕೆ ಕಟ್ದ, ಬಟ್ಟೇ ನೆಲ್ಲಾ ಕಳಚಿ ಗಂಟುಕಟ್ಟಿ ಅಲ್ಲೇ ಆಕಿ ಪಕ್ಕದಾಗ ಇಟ್ಟು, ಒಂಟೋದ

ಕೋತೀನರಕ ತರಾಕೆ. ಅವನತ್ಲಾಗೆ ಓಗೂತ಼್ಲ ಈಕಿ ಎದ್ದು, ಅವನ ಬಟ್ಟೇನೆಲ್ಲಾ ತೊಟ್ಕಂಡು, ಕುದ್ರೀ ವ್ಯಾಲೆ ಕುಂತು, ಒಂದೇ ಓಟ ಕಿತ್ತಿಟ್ಳು.

ಓಗ್ತಾ ಓಗ್ತಾ ಓಗ್ತಾ ಒಂದು ದೊಡ್ಡ ವನಾಂತರಕ್ಕೆ ಓದ್ಳು. ಅಲ್ಲಿ ನಡೂ ನಡುವೆ ಒಂದು ದೊಡ್ಡ ಆಲದ ಮರ ಇತ್ತಂತೆ. ಅದ್ರಾಗೆ ಒಂದು ಮನಸಾ ಕುಂತು ಮನಗೋಸ್ಟು ದೊಡ್ಡ ಪೊಟರೆ ಇತ್ತಂತೆ. ಅಲ್ಲೇ ಅರ್ದ ಮೈಲು ದೂರದಾಗೆ ಒಂದು ಸಣ್ಣ ನದಿ ಇತ್ತಂತೆ. ಆ ಕಾಡಿನಾಗೆ ಬೇಕಾದಂಗೆ ಅಣ್ಣು ಅಂಪಲು ಸಿಕ್ಕೋವಂತೆ. ಆಕಿ ಏನು ಮಾಡಿದ್ಳು : ಆ ಕುದ್ರೀನ ಬಿಟ್ಟು ಅತ್ಲಾಗೆ ಓಡ್ಸಿ, ಅಲ್ಲೇ ಇರಾಕಹತ್ತಿದಲಂತೆ. ಅಲ್ಲೇ ಇರ್ತಾ ಎಸ್ಟೋದಿನ ಕಳೆದೋದುವಂತೆ.

ಇತ್ಲಾಗೆ ಚಿಕ್ಕರಾಜಕೊಮಾರ ದೇವಕೊಮಾರ ಇದ್ನಲ್ಲ, ಅವ್ನು, ತಂದೆ ಕೂಟೆ 'ಅಪ್ಪ, ಅಣ್ಣ ಓಗಿ ಬಾಳ ದಿನಾತು. ಅವ್ನೂ ಬರ್ಲಿಲ್ಲ, ಅತ್ಗೆ ಪತ್ತೇನೂ ಆಗ್ಲಿಲ್ಲ. ಆ ಕೀಲುಕುದುರೀನ ಕೊಡು, ನಾನು ಓಗಿ, ಅವರೆಲ್ಲಿದ್ರೂನೂ ಪತ್ತೆ ಮಾಡಿ ತರತೇನೆ' ಅಂತ ಅಂದು, ಕೀಲುಕುದುರೀನ ತಗಂಡು ಒಂಟ್ನಂತೆ. ಓಗ್ತಾ ಓಗ್ತಾ, ಶನ್ನಿಗರಾಯನಪಟ್ನಾ ಶನ್ನಿಗರಾಯನಪಟ್ನಾ ಅಂತ ಒಂದು ದೇಸ, ಅಲ್ಲಿಗೆ ಓದ್ನಂತೆ. ಒಂದಿನ ಆ ಪಟ್ಣದ ವ್ಯಾಲೆ ಕೀಲುಕುದುರಿ ಆಕ್ಕಂಡು ಓಗ್ತಾ ಇರುವಾಗ, ಆ ದೇಸದ ರಾಜಕೊಮಾರಿ ಕಾಮಾಕ್ಸಿ, ಮಾಳಿಗೆವ್ಯಾಲೆ ಕುಂತಿದ್ದೋಳು ಇವನ್ನ ನೋಡಿ, 'ಯಾರೋ ಅಂಗೆ ಆಕಾಸ ದಾಗ ಆರ್ತಾ ಅವರೇ' ಅಂತ ಕೈಆಕಿ ಅವನ್ನ ಕರದ್ಲಂತೆ. ದೇವಕೊಮಾರ ಸರ್ ಅಂತ ಅಲ್ಲಿ ಇಳ್ದುಬಿಟ್ಟ. ಅವನ ರೂಪ ನೋಡಿ ಆಕಿ ಮರುಳಾಗಿಬಿಟ್ಟು, ಆಮೇಲೆ ಅವನ ಇಸಾರ ಎಲ್ಲಾ ತಿಳಕೆಂಡು, ಅವನ್ನ 'ದಿನಾ ರಾತ್ರಿನಾಗೆ ಇಲ್ಲಿಗೆ ಬಾ' ಅಂತ ಏಳಿಕಳಿಸಿದಳಂತೆ. ಇಂಗೇ ಅವ್ರಿಬ್ರೂ ಇರ್ತಾ ಆಕಿ ಬಸರಾದ್ಳು. ಆವ್ಯಾಗೆ ಒಂದಿನ ಅವನ್ತಾವ "ನೋಡು, ನಾ ಬಸರಾಗಿರೋದು ನಮ್ಮ ಅಪ್ಪಗ ತಿಳಿದ್ರೆ, ನಂಗೂ ನಿಂಗೂ ಇಬ್ರಿಗೂ ಒಳ್ಳೇದಲ್ಲ. ನಡೀ, ಎತ್ಲಾ ಗಾನಾ ಬ್ಯಾರೆ ದೇಸಕೆ ಓಗಾನಾ" ಅಂತ ಏಳಿ, ತನ್ನ ಒಡ್ವೆ ವಸ್ತ ಎಲ್ಲಾ ಗಂಟು ಕಟ್ಟಕಂಡು, ಅವನ ಜತೆ ಕುದ್ರಿವ್ಯಾಲೆ ಕುಂತ್ಕಂಡು ಒಂಟುಬಿಟ್ಲಂತೆ. ಇಂಗೇ ಬಾಳಾದೂರಾ ಓದ್ರಂತೆ. ಓಗ್ತಾ ಓಗ್ತಾ ಆಕಿ "ನಂಗೆ ಬಲು ಬಾಯಾ ರಿಸ್ತದ. ಇಲ್ಲೇ ಕುದ್ರೀ ಇಳ್ಸು, ನೀರು ಕುಡ್ದು ಮುಂದಕ್ಕೆ ಓಗಾನ" ಅಂದ್ಲಂತೆ.

ಇಬ್ರೂ ಇಳುದ್ರು. ಅವನು ಹೆಂಡ್ತೀನ ಅಲ್ಲೇ ಕುಂಡ್ರಿಸಿ, ನೀರು ತರ್‍ತೀನಿ ಅಂತ ಅಂದು ಓಡಿ, ಓದಾ ಓದಾ. ಎಸ್ಟು ದೂರ ಓದ್ರೂ ನೀರು ಸಿಕ್ಲಿಲ್ಲ. ದಾರೀನೇ ಮುಂದಕ್ಕೆ ತಿಳಿಯದಂಗೆ ಆತು. 'ನೀರಿಲ್ಲದಿದ್ದರೆ ಅಸ್ಟೇ ಓಯ್ತು. ಆಕಿ ಕುಂತಿದ್ದ ತಾವಕೆ ಓಗಾನಾ' ಅಂತ ಒಂಟರೆ, ಎಸ್ಟು ಉಡಿಕಿದರೂ ದಾರಿ ತಿಳೀದೋಯ್ತು. ಉಡಿಕೀ ಉಡಿಕೀ ಸಾಕಾತು. ಅಸ್ಟೊತ್ತಿಗೆ ಕತ್ತಲಾಗಿ ಓಯ್ತು. ಇನ್ನೇನು ಮಾಡ್ತಾನೆ ಅವನು? 'ಅಯ್ಯೋ ಪಾಪ, ಒಬ್ಬೋಳು. ಇಂತಾ ಕಾಡಿನಾಗೆ ಎಸ್ಟು ಬೆದರಿದಳೋ ಏನೋ?' ಅಂತಂದು ಸುಮ್ಮಕ ಒಂದು ಮರದ ಬುಡದಾಗೆ ಬಿದ್ಕಂಡ.

ಇತ್ಲಾಗೆ ರಾಜಕೊಮಾರಿ 'ಈಗ ಬತ್ತಾನೆ, ಆಗ ಬತ್ತಾನೆ' ಅಂತ ಕಾದು ಕುಂತ್ಲು. ಕತ್ತಲಾದ್ರೂ ಬರ್ಲೇ ಇಲ್ಲ. ಇನ್ನೇನು, ಆಕಿ ಅತ್ಕೊಂಡು ಅವತ್ತು ರಾತ್ರಿ ಎಲ್ಲಾ ಅಲ್ಲೇ ಕುಂತಿದ್ಲು. ತಿರಿಗಿ ಬೆಳಗಾಗ ಎದ್ದು, 'ಎಲ್ಲೋದ್ನೋ ಏನೋ, ಬರ್‍ಲೇ ಇಲ್ಲ' ಅಂತಂದು, ಆ ಕೀಲು ಕುದುರಿ ಮ್ಯಾಲೆ ಅತ್ತಿಕಂಡು ಒಂಟುಬಿಟ್ಲು.

ಓಗ್ತಾ ಇರ್‍ಬ್ಯಾಗ, ಕಾಡಿನಾಗೆ ಯಾರೋ ಕೈಲಾಕಿ ಕರದಂಗೆ ಆಯ್ತು. ಕರದೋರು ಇನ್ಯಾರೂ ಅಲ್ಲ, ಶಂದ್ರಕೊಮಾರಿ. ಆಕೀಗೆ ಗೊತ್ತಾತು: 'ಈ ಕುದ್ರಿ ನಮ್ಮದು. ಇದರ ಮ್ಯಾಲೆ, ನನ್ನ ಗಂಡನೋ, ಇಲ್ಲ ವೈದನೋ ಓಗ್ತಾ ಅವರೆ' ಅಂತ. ಅದ್ಕೇ ಕೈಬೀಸಿ ಕರೆದದ್ದು. ಇಳಿದ ಮ್ಯಾಲೆ ನೋಡ್ತಾಳೆ— ಎಣ್ಣು ಎಂಗಸು! ಯಾರು, ಎತ್ತಾ ಅಂತ ಇಚಾರಿಸಿದ್ಲು. ಆಕಿ ಎಲ್ಲಾನೂವೆ ಮೊದ್ಲಿಂದ ಏಳಿದ್ಲು. ಶಂದ್ರಕೊಮಾರಿಗೆ ಎಲ್ಲಾ ಗೊತ್ತಾತು. ಆಕಿ ಏಳಿದ್ಲು 'ಅಂಗಾರೆ ನಾವಿಬ್ಬೋರು ಅಕ್ಕತಂಗೇರಾದ್ವಮ್ಮ. ಬಾ, ಎಂಗೂ ನಂತಾಗು ಈಸು ಒಡ್ವೇ ಐತೆ, ನಿಂತಾಗೂ ಐತೆ. ಇಬ್ರೂ ಜತೇಲಿ ಓಗಿ ಒಂದು ಪಟ್ಣಾ ಸೇರಾನ. ನಾ ಗಂಡ ಆಗ್ತೀನಿ, ನೀ ಎಂಡ್ತಿ ಆಗು' ಅಂತಂದು ಇಬ್ರೂನೂ ಕುದ್ರೀ ಅತ್ತಿ, ಓಗಿ, ಬೆಂಕಿರಾಯನ ಪಟ್ಣ ಅನ್ನೋ ಊರು ಸೇರಿದರಂತೆ. ಅಲ್ಲಿಗೆ ಓಗಿ ಒಂದು ಮನ್ಯಾಗೆ ಇದ್ರಂತೆ. ಇಂಗೇ ಇರತಾ ಕಾಮಾಕ್ಸಿ ಒಂದು ಗಂಡು ಉಡಗನ್ನ ಜನನ ಆದ್ಲಂತೆ.

ಅದೇ ಸಮೇದಾಗೆ ಆ ಊರಿನ ರಾಜಗೆ ಒಂದು ದೊಡ್ಡ ಕಸ್ಟಬಂತಂತೆ. ಆಗದ ರಾಜರು ಯಾರೋ ಬಾಳಾಸ್ಟು ದಂಡು ದಳ ತಗಂಡು ಬಂದು, ಈ

ಬೆಂಕಿರಾಯನ ಪಟ್ಣದ ಮ್ಯಾಲೆ ಮುತ್ತಿಗಿ ಆಕಿದರಂತೆ. ಈ ರಾಜಗೆ ಯಾರೂ ಗಂಡು ಮಕ್ಕಳಿರಲಿಲ್ಲಂತೆ. ರಾಜ ಆಗ್ಲೇ ಮುದುಕ ಆಗಿದ್ನಂತೆ. ಅವನು ಆ ರಾಜನ ಕೂಟೆ ಯುದ್ದ ಆಡಲಾರದೆ ಊರನಾಗೆಲ್ಲಾ ಡಂಗುರ ಆಕಿಸಿದನಂತೆ: 'ಯಾರು ಈಗ ಯುದ್ದ ಆಡಿ ಗೆಲ್ತಾರೋ ಅವರಿಗೆ ನನ್ನ ರಾಜ್ಯದ ಪಟ್ಟಕಟ್ಟಿ, ಮಗಳ್ನ ಕೊಟ್ಟು ಮದ್ವಿ ಮಾಡ್ತೀನಿ' ಅಂತ.

ಇದನ್ನ ಶಂದ್ರಕೊಮಾರಿ ಕೇಳಿ, "ಬನ್ನಿಮಂಕಾಳಮ್ಮ ನಂಗೆ ಸಾಯ ಮಾಡ್ತ್ರೀ ನಾ ಯಾಕ ಯುದ್ದ ಆಡಬಾರ್ದು?" ಅಂತ ಅಂದ್ಕಂಡು, ಗಂಡು ಉಡಿಗಿ ಉಟ್ಕಂಡು, ರಾಜನ ತಾಕೆ ಓಗಿ, 'ನಾ ರಾಜ್ಯ ಗೆದ್ದು ಬತ್ತೀನಿ' ಅಂತ ಏಳಿ, ಇಸ್ಟು ದಂಡು ಪಂಡು ತಗಂಡು ಯುದ್ದಕ್ಕೆ ಒಂಟುಬಿಟ್ಲಂತೆ. ದಾರ್‍ಯಾಗೆ ಓಗ್ತಾ 'ಅಮ್ಮಾ, ತಾಯಿ, ಬನ್ನಿಮಂಕಾಳಮ್ಮ! ಈಗ ನಂಗೆ ಸಾಯಮಾಡು' ಅಂತ ದ್ಯಾನಾ ಮಾಡಿದಲಂತೆ. ಈಕಿ ಅಂಗೆ ದ್ಯಾನಮಾಡುತ್ಲೂ ಆಕಡೆ ರಾಜನ ಸೈನ್ಯ ಎಲ್ಲಾ ಮಂಕು ಬಡದಂತೆ, ಎಲ್ಲೋರ್‍ಯೇರಲ್ಲೇ ನಿಂತ್ಬಿಟ್ರಂತೆ. ಇನ್ನೇನೂ, ಶಂದ್ರಕೊಮಾರೀನೂ ಆ ದಂಡಿನೋರನೆಲ್ಲಾ ಕಡಿದು, ಈಡಾಗಿ ಗೆದ್ದು ರಾಜ್ಯಕ್ಕೆ ಬಂದಳಂತೆ. ರಾಜಗೆ ಇದರಿಂದ ಬಲೇ ಸಂತೋಸ ಆಯ್ತಂತೆ. ಅವನು 'ಇನ್ನು ನಾನು ಮುದ್ಕ ಆದೆ, ನಿಂಗೇ ಪಟ್ಟ ಕಟ್ತೀನಿ. ನನ್ನ ಮಗಳ್ನ ಮದ್ವಿ ಮಾಡ್ಕೊ' ಅಂತ ಅಂದ್ನಂತೆ. ಅದಕ್ಕೆ ಈಕಿ 'ಇಲ್ಲಾ, ಇನ್ನೊಂದು ವರ್ಸ ನಂದು ವ್ರತ ಐತೆ. ಅಲ್ಲೀವರೆಗೆ ನಾನು ಮದ್ವೀ ಆಗಾಕಿಲ್ಲ. ಈಗ ಬೇಕಾದ್ರೆ, ನನ್ನ ಶಂದ್ರಾಯುದಕ ಪಟ್ಟಕಟ್ಟ' ಅಂದ್ಲಂತೆ.

ಪಟ್ಟ ಆದಮ್ಯಾಲೆ, ಊರ ಬಾಗಿಲಾಗೆ ಒಂದು ಅನ್ನಶತ್ರ ಕಟ್ಟಿಶಿ, ಅದರ ಬಾಗಿಲ ಮ್ಯಾಲೆ, ಆಕಿ ಗಂಡು ಉಡುಗಿ ಇಕ್ಕಿರೋ ಪೋಟಾನೇ ಆಕಿಸಿ, "ಇಲ್ಲಿಗೆ ಯಾರಾರೂ ಬಂದು, ಈ ಪೋಟಾನ ನೋಡಿ, ಏನೇನು ಅಂತಾರೆ ಅಂಬೋದ್ನ ನಂಗೆ ತಿಳಿಸ್ತಾ ಇರಬೇಕು" ಅಂತ ಆಗ್ನೀ ಮಾಡಿದಲಂತೆ.

ಇತ್ಲಾಗೆ ದೇವಕೊಮಾರ ಕುದ್ರಿನೂ ಕಳಕಂಡು ಎಂಡ್ತಿನೂ ಕಳಕಂಡು ಅಲ್ಲೀ ಇಲ್ಲೀ ತಿರಗ್ತಾ ಒಂದು ಪಟ್ಣ ಸೇರಿದನಂತೆ. ಅದೇ ಪಟ್ಣದಾಗೇ ಸತ್ಯವಂತನೂನೂ ಬಿಕಾರಿ ಅಂಗೆ ತಿರುಗ್ತಾ ಇದ್ನಂತೆ. ಒಂದಿನ ಇಬ್ರೂ ಒಬ್ಬರನ್ನೊಬ್ಬರು ನೋಡಿ ಗುರುತು ಇಡಿದರಂತೆ. ಇನ್ನೇನು, ಆವತ್ತಿನಿಂದ ಇಬ್ರೂನೂ ಜೊತೇಲೇ ಆ ಪಟ್ಣ ಈ ಪಟ್ಣ ತಿರುಕ್ಕೊಂಡು ಇರ್ತಿದ್ರಂತೆ.

ಇನ್ನೇನು, ಇಲ್ಲಿ ಆ ಶತ್ರಕ್ಕೆ ಅಂತೋರು ಇಂತೋರು ಎಲ್ರೂ ಬರ್ತಿದ್ರಂತೆ. ಎಲ್ಲಾರ ಸುದ್ದೀನೂ ಶಂದ್ರಕೊಮಾರೀಗೆ ತಿಳೀತಿತ್ತಂತೆ. ಇಂಗೇ ಇರ್ತಾ ಒಂದಿನ ಆ ನಾಕು ಜನ ಕಳ್ಳರೂನೂ ಬಂದು ಆ ಪೋಟಾನ ನೋಡಿ 'ಈತನ ಅಂಗೆ ಇರೋ ಎಣ್ಣೇನೆ, ನಮ್ಮ ಕೈಗೆ ಸಿಕ್ಕಿ ಗಸ್ತುಕೊಟ್ಟು ಓದ್ಲು' ಅಂತ ಮಾತಾಡಿಕೊಂಡರಂತೆ. ಶಂದ್ರಕೊಮಾರಿ ಅದನ್ನ ಕೇಳಿ, ಅವರ್ನ ಒಂದು ತಾವ ಸೆರೀಗೆ ಆಕಿಸಿದಲಂತೆ. ಇನ್ನಾ ಒಂದಿನ ಆ ಸಿಪಾಯಿ ಬಂದು, ಅಂಗೇ ಅಂದುಕೊಂಡ್ನಂತೆ, ಆ ಪೋಟಾನ ನೋಡಿ. ಅವನ್ನೂನೂ ಒಂದು ಕಡೆ ಸೆರೀಗೆ ಆಕಿಸಿದಲಂತೆ. ಇನ್ನೊಂದು ದಿನ ಆ ದುರ್ಬುದ್ದಿ ಅಲ್ತಿರಿಗಿ ಇಲ್ತಿರಿಗಿ ಅಲ್ಲಿಗೆ ಬಂದ್ನಂತೆ. ಬಂದು ಅವ್ನೂನೂ ಅಂಗೇ ಮಾತಾಡಿಕೊಂಡನಂತೆ. ಅವನ್ನೂನೂ ಒಂದು ಕಡೆ ಸೆರೀ ಆಕಿಸಿದ್ಲಂತೆ.

ಇಂಗೇ ಇರ್ತಾ, ಒಂದಿನ ಸತ್ಯವಂತನೂ ದೇವಕೊಮಾರನೂ ಬಂದು, ಆ ಪೋಟಾ ನೋಡಿ ಗೋಳಾಡ್ತಿದ್ದರಂತೆ. ಆಳುಗಳು ಓಗಿ ಏಳುತ್ಲು ಶಂದ್ರ ಕೊಮಾರಿ ಅವರ್ನ ಮನೀಗೆ ಕರಶಿಕೆಂಡು, ಅವರಿಗೆ ನೀರು ಆಕಿ, ಉಣ್ಣಾಕ ಇಟ್ಟು, ನಡದ ಕತೀನೆಲ್ಲ ಗೋಳಾಡತಾ ಏಳಿಕಂಡಳಂತೆ. ಆ ವ್ಯಾಳಿಗೆ ಆಕಿ ಮನಿ ಬಿಟ್ಟು ಅನ್ನೆರಡು ವರ್ಸ ಆಗಿತ್ತಂತೆ. ಇನ್ನೇನು—ಆ ಊರು ರಾಜನ ತಾಕೆ ಓಗಿ, 'ನಾನು ಎಂಗ್ಸು, ಗಂಡ್ಸಲ್ಲ' ಅಂತ ಏಳಿ, ಗಂಡಗ ಪಟ್ಟಕಟ್ಟಿಸಿ, ಆ ಊರು ರಾಜಕೊಮಾರ್ತೀನ ಮದ್ವೀಮಾಡ್ಸಿ, ಕಳ್ರುನ್ನೂನೂ ಸಿಪಾಯಿನೂನು ಬಿಟ್ಟು ಓಡಿಸಿ, ದುರ್ಬುದ್ದೀನ ಜೊತ್ಯಾಗೆ ಕರಕಂಡು, ಊರಿಗೊಂಟ್ರಂತೆ.

ಬರ್ತಾ ದಾರ್‍ಯಾಗೆ ಎಲ್ರೂ ಆ ಬನ್ನಿಮಂಕಾಳಮ್ಮನ ಗುಡಿ ತಾವ ಇಳ್ದು, ಪೂಜಿಮಾಡಿಶಿ, ಆ ದುರ್ಬುದ್ದೀನ ತಾಯೀಗೆ ಬಲಿಕೊಟ್ಟರಂತೆ. ಬನ್ನಿ ಮಂಕಾಳಮ್ಮ ಪ್ರತ್ಯಕ್ಸಾಗಿ, ಆಕಿ ಮಗನ್ನೂನೂ ಆ ಗೌಡೀರ್‍ನೂನೂ ಬದುಕಿಶಿ ಕೊಟ್ಟಳಂತೆ. ಹಿಂಗೆಲ್ರೂನೂ ಸಂತೋಸದಿಂದ ಪಟ್ಣ ಸೇರಿ, ಸುಕವಾಗಿ ವೈಬೋಗದಿಂದ ಇದ್ರಂತೆ.

ಅಜ್ಜಿ ಹೀಗೆ ಕತೆ ಮುಗಿಸಿ 'ಹೂಂ, ಇನ್ನು ಆತಲ್ಲ ಕತಿ. ಓಗ್ರಿ, ಉಂಡು ಮಲಗು ಓಗ್ರಿ. ಬಿಸಿಬಿಸಿ ಮುದ್ದಿ ಆಗ್ಯಾದೇನೋ, ನೋಡ್ರಿ' ಅಂದಳು.

**—ಬಿ. ಆರ್. ಸಂಜೀವ ರೆಡ್ಡಿ.**

[ಇದು ಚಿತ್ರದುರ್ಗ ಡಿಸ್ಟ್ರಿಕ್ಟಿನ ಕಡೆಯ ಕತೆ.]

# ತೂಕಡಿಸುವ ಬ್ಯಾಟರನಿಗೆ

[ಶ್ರೀ ಪು. ತಿ. ನ. ಅವರ ಕ್ಷಮೆ ಬೇಡಿ]

ಎಚ್ಚರೆಚ್ಚರು ವೀರ, ಪ್ರೇಕ್ಷಕರ ಶೃಂಗಾರ,
ಜನಜನದ ಬಂಗಾರ, ಎಚ್ಚರೈ, ಏಳೈ;
ಬ್ಯಾಟರಸೆ, ಬಾಲರಸೆ, ಸಕಲ ಸ್ಕೋರಿನ ಅರಸೆ,
ಸ್ಕೋರ ಬೇಗನೆ ಏರಿಸೆಚ್ಚರೈ, ಏಳೈ.

ಫೀಳ್ಡಿನಾಚೆಯ ಜನರ ಮುಖವದುವೆ ಗೆಲುವಾಯ್ತು
ಪೌಡರನು ಬಳಿದಂತೆ, ಎಚ್ಚರೈ ಏಳೈ;
ಬ್ಯಾಟು ಬಾಲ್‌ಗಳಿಗಾಗಿ ಕಾದು ಕುಳಿತಿಹುದಲ್ಲಿ
ಆಟ ಮುಗಿಯುವ ಹೊತ್ತು ಬಂದಿತೈ, ಏಳೈ.

ದೋಸೆ ಇಡ್ಡಲಿ ವಡೆಯ ವಾಸನೆಯ ಪರಿಮಳದಿ
ಈಸಿ ಕೈ ಬೀಸಿರುವ ಬ್ಯಾಟರನೆ ಏಳೈ.
ಹೋಟಲಿನ ಮನೆಯಿಂದ ಬಂದ ಕೂಲ್ ಡ್ರಿಂಕುಗಳು
ನಿನಗಾಗಿ ಕಾದಿಹವು, ಎಚ್ಚರೈ, ಏಳೈ.

ತೆಂಗುನಾರಿಂಗ್ಸೈಯ್ದ ರಗ್ಗಿನಾ ಕೊನೆಯಲ್ಲಿ
ನಿನಗಾಗಿ ಕಾದಿಹನು ಬೌಲರನು, ಏಳೈ;
ಕ್ಯಾಪ್ಟನ್ನ ನಿಟ್ಟುಸಿರು ಸನ್ನೆಯನು ಗೈಯುತಿದೆ
ನೀ ಬಿಜಯಗೈಯಲೆಂದೆಚ್ಚರಿಕೆ, ಏಳೈ.

ಪ್ರೇಕ್ಷಕರ ಕಂಗಳಿಂಗಾಟವನು ತೋರ್ ಬಾರ;
ಇಳಿದ ಸ್ಕೋರನು ಬೇಗ ಏರಿಸಲು ಬಾರ;
ಸುಮ್ಮನೆಯೆ ನಿಂತಿರುವ ಫೀಲ್ಡರ್ ಓಡಲಿ ಬಾರ;
ಸೆಂಚುರಿಯ ಹೊಡೆ, ಹೆಸರ ಗಳಿಸು, ಬಾ ಬಾರ.

—ಎಂ. ಆರ್. ಸಿ. ನಾಗರಾಜನ್.

# ಸ್ನೇಹದ ಬೆಲೆ

ರಘು, ರಾಮು ಇಬ್ಬರೂ ಅಚ್ಚುಮೆಚ್ಚಿನ ಸ್ನೇಹಿತರು. ಒಡಹುಟ್ಟಿದ ಅಣ್ಣತಮ್ಮಂದಿರಂತಿದ್ದರು. ಇಬ್ಬರ ಸ್ನೇಹವು ನೀರಿಗೂ ಮೀನಿಗೂ ಇರುವ ಸಂಬಂಧದಂತಿತ್ತು.

ಇಬ್ಬರೂ ಒಂದೇ ತರಗತಿಯವರು. ರಾಮು ಕೊಂಚ ಮುಂಗೋಪಿ. ಕೆಲವು ವೇಳೆ ರಘುವನ್ನು ಚುಚ್ಚುಮಾತುಗಳಿಂದ ಹಿಂಸಿಸುತ್ತಿದ್ದ. ಆದರೆ ರಘು ಅವನ ಸ್ವಭಾವವನ್ನು ತಿಳಿದವನಾದ್ದರಿಂದ ಆ ಮಾತುಗಳಿಗೆ ಅಷ್ಟು ಗಮನ ಕೊಡುತ್ತಿರಲಿಲ್ಲ.

ರಘು ರಾಮುವಿಗಿಂತ ಸ್ವಲ್ಪ ಉತ್ತಮ ಸ್ಥಿತಿಯವನು. ಇದರಿಂದ ಅವನಿಗೇನೂ ಜಂಭವಿರಲಿಲ್ಲ. ಅವನು ಸ್ನೇಹಕ್ಕೆ ಬೆಲೆ ಕೊಡುತ್ತಿದ್ದನೆ ಹೊರತು ಅಂತಸ್ತಿಗೆ ಬೆಲೆ ಕೊಡುತ್ತಿರಲಿಲ್ಲ. ಆದರೆ ರಾಮುವಿಗೆ ಇದು ಗೊತ್ತಿಲ್ಲ. ಹೀಗೇ ಮಾತಿಗೆ ಮಾತು ಬಂದು ಒಂದು ದಿನ "ನಮಗಿಂತ ಸ್ವಲ್ಪ ಉತ್ತಮ ಸ್ಥಿತಿಯಲ್ಲಿರುವವರ ಹತ್ತಿರ ನಾವು ಯಾವಾಗಲೂ ಎಚ್ಚರಿಕೆಯಿಂದ ಇರಬೇಕು. ಯಾವಾಗ ಯಾವ ಮಾತನ್ನಾಡುತ್ತಾರೋ ಗೊತ್ತಾಗುವುದಿಲ್ಲ. ಅವರ ಬುದ್ಧಿ ಚಂಚಲವಾಗಿರುತ್ತದೆ. ನಾವು ಒಂದು ಸಮಯ ಅವರನ್ನು ಸಹಾಯ ಕೇಳಲು ಹೋದಾಗ, ಅವರ ಬುದ್ಧಿ ಚೆನ್ನಾಗಿದ್ದರೆ ಮಾಡುತ್ತಾರೆ, ಇಲ್ಲದಿದ್ದರೆ ಹೀಯಾಳಿಸಿ ಕಳುಹಿಸುವುದಕ್ಕೂ ಹಿಂದೆಗೆಯುವುದಿಲ್ಲ" ಎಂದ. ಇದು ರಘುವನ್ನು ಉದ್ದೇಶಿಸಿ ಹೇಳಿದ್ದೋ, ಅಥವಾ ಎಲ್ಲರಿಗೂ ಅನ್ವಯಿಸುವಂತೆ ಹೇಳಿದ್ದೋ— ಅಂತೂ ರಘುವಿಗೆ ಈ ಮಾತಿನಿಂದ ನೋವಾಯಿತು.

"ಎಲ್ಲರೂ ಹಾಗೆಯೇ ಇರುವುದಿಲ್ಲ, ರಾಮು" ಎಂದ, ರಘು.

"ಏನೋ, ನನ್ನ ಅಭಿಪ್ರಾಯ ಹಾಗೇ ಇದೆಯಪ್ಪ" ಅಂದ ರಾಮು. ಅಲ್ಲಿಗೂ ರಘು ನೊಂದಿದ್ದಾನೆಂಬುದು ರಾಮುವಿಗೆ ತಿಳಿಯದೆ ಹೋಯಿತು. ಅವನು ಯಾವುದೋ ಆವೇಶ ಬಂದವನಂತೆ ಮಾತಾಡುತ್ತಲೇ ಇದ್ದ. ರಘು "ಮಾತನಾಡಿ ಪ್ರಯೋಜನವಿಲ್ಲ, ಇದನ್ನು ಕಾರ್ಯತಃ ತೋರಿದಾಗಲೇ ರಾಮುವಿಗೆ ತಿಳಿವಳಿಕೆ ಬರುತ್ತೆ" ಎಂದು ಸುಮ್ಮನಾದ.

ಕೆಲವು ಕಾಲ ಕಳೆಯಿತು.

ಅಂದು ರಘುವಿಗೆ ಯಾವುದರಲ್ಲೂ ಮನಸ್ಸಿಲ್ಲ. ಮನಸ್ಸಿನಲ್ಲಿ ಏನೋ ಕಳವಳ. ಯಾವಾಗಲೂ ರಾಮು ತನಗೆ ಹೇಳದೆ ತರಗತಿಗೆ ಬರುವುದನ್ನು ನಿಲ್ಲಿಸುತ್ತಿರಲಿಲ್ಲ, ಆದರೆ ಇಂದೇಕೋ ರಾಮು ಕಾಣದಾಗಿದ್ದಾನೆ. ಅವನನ್ನು ನೋಡುವವರೆಗೂ ಮನಸ್ಸಿಗೆ ನೆಮ್ಮದಿಯಿಲ್ಲ. ಮೊದಲನೆಯ ಪೀರಿಯಡ್ ಮುಗಿದದ್ದೇ ತಡ, ರಘು ಮಿಕ್ಕುದು ಯಾವುದನ್ನೂ ಯೋಚಿಸದೆ, ನೇರವಾಗಿ ರಾಮುವಿನ ಮನೆಗೆ ಓಡಿದ.

ಮನೆಯ ಹತ್ತಿರ ಹೋದರೆ, ರಾಮುವಿನ ಮನೆಗೆ ಬೀಗ ಹಾಕಿದೆ. ಏತಕ್ಕೆಂದು ಪಕ್ಕದ ಮನೆಯವರನ್ನು ವಿಚಾರಿಸಿದ. ಅವರು "ಬೆಳಗ್ಗೆ ರಾಮು ಕಾರಿಗೆ ಸಿಕ್ಕಿದ್ದಾನೆ. ಅವನ ಸ್ಥಿತಿ ಚಿಂತಾಜನಕವಾಗಿದೆಯಂತೆ. ಆಸ್ಪತ್ರೆಯಲ್ಲಿ ಹಾಕಿದ್ದಾರೆ, ಅವರ ಮನೆಯವರೆಲ್ಲಾ ಆಸ್ಪತ್ರೆಯಲ್ಲೇ ಇದ್ದಾರೆ" ಎಂದುದನ್ನು ಕೇಳಿದ್ದೇ, ರಘುವಿಗೆ ಜಂಘಾಬಲ ಉಡುಗಿತು. ಆದರೂ ಚೇತರಿಸಿಕೊಂಡು ಆಸ್ಪತ್ರೆಯ ಕಡೆಗೆ ಓಡಿದ.

ಅಲ್ಲಿ ರಾಮುವಿನ ತಾಯಿ ದುಃಖಿಸುತ್ತಾ ಕುಳಿತಿದ್ದರು. ರಘು ರಾಮುವಿನ ತಂದೆಯ ಹತ್ತಿರ ಹೋಗಿ, "ರಾಮುವೆಲ್ಲಿ?" ಎಂದ. ಅವರು ತಲೆ ಎತ್ತಿ ನೋಡಿ, "ಡ್ರೆಸಿಂಗ್ ರೂಮಿಗೆ ತೆಗೆದುಕೊಂಡು ಹೋಗಿದ್ದಾರಪ್ಪಾ" ಎಂದರು.

ಅಷ್ಟು ಹೊತ್ತಿಗೆ ಡಾಕ್ಟರು, ರಾಮುವಿನ ತಂದೆಯ ಹತ್ತಿರ ಬಂದು, "ನಿಮ್ಮ ಹುಡುಗನಿಗೆ ರಕ್ತ ಬಹಳ ಕಡಿಮೆಯಾಗಿದೆ. ಅದಕ್ಕೆ Blood Transfusion ಆಗಬೇಕಾಗಿದೆ." ಎಂದರು.

ಅಲ್ಲೇ ನಿಂತಿದ್ದ ರಘು "ಡಾಕ್ಟರ್, ನನ್ನ ರಕ್ತ ತೆಗೆದುಕೊಳ್ಳಿ. ನನ್ನ ಸ್ನೇಹಿತನ ಪ್ರಾಣ ಕಾಪಾಡಿ." ಎಂದು ಅಂಗಲಾಚಿದ.

ಆ ಮಾತು ಕೇಳಿದ್ದೇ, ಡಾಕ್ಟರಿಗೆ ಒಂದುಕಡೆ ಆಶ್ಚರ್ಯ, ಒಂದುಕಡೆ ಮೆಚ್ಚಿಕೆ, ಒಂದುಕಡೆ ಸಂತೋಷ. ಅವರು "ನೀನೆಲ್ಲಪ್ಪ ಇರೋದು? ನಿಮ್ಮ ತಂದೆ ತಾಯಿಗಳ ಅಪ್ಪಣೆ ಪಡೆಯಬೇಕಪ್ಪ" ಎಂದರು. "ಅಯ್ಯೋ ಡಾಕ್ಟರ್! ಮೊದಲು ನನ್ನ ಸ್ನೇಹಿತನ ಪ್ರಾಣ ಉಳಿಸಿ. ಅನಂತರ ನೀವು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತೇನೆ. ನಮ್ಮ ತಾಯಿ ತಂದೆ ಇದಕ್ಕೆ ಖಂಡಿತ ಒಪ್ಪುತ್ತಾರೆ. ಮೊದಲು ನನ್ನ ರಕ್ತ ತೆಗೆದುಕೊಂಡು ನನ್ನ ಸ್ನೇಹಿತನ ಪ್ರಾಣ ಉಳಿಸಿ." ಎಂದು ಬೇಡಿದ.

ಡಾಕ್ಟರು ಅವನನ್ನು ಒಳಗೆ ಕರೆದುಕೊಂಡು ಹೋಗಿ ಅವನ ರಕ್ತವನ್ನು ಪರೀಕ್ಷಿಸಿದರು. ಅದು ಹೊಂದಿಕೆಯಾಗುವ ರಕ್ತವೆಂದು ಕಂಡುಬಂದದ್ದರಿಂದ, "ಇಂತಹ ಸ್ನೇಹಿತನನ್ನು ಪಡೆದ ರಾಮು ಧನ್ಯ" ಎಂದುಕೊಂಡು, ಅವನಿಂದ ರಕ್ತವನ್ನು ತೆಗೆದು ರಾಮುವಿಗೆ ಕೊಟ್ಟು, ಹೊರಗೆ ಬಂದು "ಇನ್ನು ನಿಮ್ಮ ಹುಡುಗನಿಗೆ ಪ್ರಾಣಾಪಾಯವೇನೂ ಇಲ್ಲ. ಮೊದಲು ಅವನ ಸ್ನೇಹಿತನ ಮನೆಯವರಿಗೆ ವಿಷಯವನ್ನು ಹೇಳಿಕಳಿಸಿ. ಆ ಹುಡುಗನೂ ಎರಡು ದಿನ ಇಲ್ಲೇ ಇರಬೇಕಾಗುತ್ತದೆ." ಎಂದರು.

ವಿಷಯವನ್ನು ತಿಳಿದಕೂಡಲೆ ರಘುವಿನ ತಾಯಿ ತಂದೆ ಮಗನನ್ನು ನೋಡಲು ಧಾವಿಸಿ ಬಂದರು. ಇಬ್ಬರು ಸ್ನೇಹಿತರನ್ನೂ ಅಕ್ಕ ಪಕ್ಕದ ಮಂಚಗಳಲ್ಲಿ ಮಲಗಿಸಿದ್ದರು. ರಾಮು ಎಚ್ಚರವಾಗಿರಲಿಲ್ಲ. ರಘು ಎಚ್ಚರದಿಂದಿದ್ದ.

ರಾಮುವಿನ ತಾಯಿ, ರಘುವಿನ ತಾಯಿಯ ಹತ್ತಿರ ಬಂದು, "ಇಂತಹ ಮಗನನ್ನು ಪಡೆಯಲು ಎಷ್ಟು ಜನ್ಮಗಳ ಪುಣ್ಯ ಮಾಡಿದ್ದಿರೋಮ್ಮ! ನಿಮ್ಮ ಮಗುವಿನಿಂದ ನಮ್ಮ ಹುಡುಗನ ಪ್ರಾಣ ಉಳಿಯಿತು. ಇಂಥ ಸ್ನೇಹಿತನನ್ನು ಪಡೆದ ನಮ್ಮ ರಾಮು ಪುಣ್ಯಶಾಲಿ!" ಎಂದರು.

ಅದನ್ನು ಕೇಳಿದ ರಘು "ಇದು ಸ್ನೇಹದ ಬೆಲೆ" ಎಂದುಕೊಂಡ.

—ಎಚ್. ಕೃಷ್ಣಮೂರ್ತಿ.

---

## ಕವಿ—ರಾಜ್ಯಕ

ಪಾರಿಜಾತವ ಕಂಡು ನಿಡುಸುಯ್ದು, ಪದಗಳಿಂ
ಶೌರಿಕಥೆಯನು ಹೆಣೆದು ತೃಪ್ತನಹನು ಕವಿ;
ಊರಿನುದ್ಯಾನಕದ ತರಿಸಿ ಬೆಳಸುವ ಕಾರ್ಯ-
ಧೀರನಲ ರಾಜ್ಯಕನು—ಮಂಕುತಿಮ್ಮ

## ಕಲ್ಪಿಸಿದ ಕನಸು

"ಪ್ರಭೂಊಊ!" ತಂದೆಯವರು ನೀಳ್ಕೊರಳಿಂದ ಕೂಗಿದರು.

"ಬಂದೇೞ . . . " ಒಳಗಣಿಂದ ನಾನು ಉತ್ತರಿಸಿದೆ.

ಬಿಸಿ ಬಿಸಿ ಕಾಫಿ ನಾಲಗೆ ಸುಟ್ಟರೂ ಗೇಣುದ್ದದ ಕಪ್ಪನ್ನು ಸಂಪೂರ್ಣ ಬರಿದುಮಾಡಿ ಹೊರಕ್ಕೆ ಧಾವಿಸಿದೆ. 'ಲಚ್ಚಿ', 'ವದನ್', 'ಗೋಪಿ', 'ಮಲ್ಲಿಗೆ', 'ಅಜ್ಜ'—ಈ ಗೆಳೆಯರ ತಂಡ ಕಾದಿತ್ತು.

"ಒರೆಸಿಕೊಳ್ಳೊ ಬಾಯಿ" ಎಂದರು ಅಪ್ಪ.

"ಓ, ಮರೆತಿದ್ದೆ" ಎಂದೆ.

ಕೆಳೆಯರ ಕೂಟದ ಮಧ್ಯೆ ಬಂದು ಸೇರಿಕೊಂಡಾಯಿತು. ಮನೆಯನ್ನು ಬಿಟ್ಟು ಸ್ವಲ್ಪ ದೂರ ಸಾರಿದನಂತರ ಪ್ರಾರಂಭವಾಯಿತು ನಮ್ಮ ಲಲ್ಲೆ.

"ಪೆಟ್ರೋಲ್ ಎಷ್ಟು ಬಿತ್ತು ಹೊಟ್ಟೆಗೆ?!" 'ಅಜ್ಜ'ನ ಪ್ರಶ್ನೆಯ ದಾಳ ಉರುಳಿತು.

"ಕೇಳೋದೇನೂ, ಆ ಪ್ರಾಣೀನಾ. ಇಷ್ಟುಹೊತ್ತಿಗೆ ಹತ್ತುಬಾರಿಯಾಗಿ ರುತ್ತೆ. ಅದಿರಲಿ, ಇವನು ಪೆಟ್ರೋಲ್ ತೆಗೆದುಕೊಳ್ಳೋವರೆಗೂ ಇವರ ಮನೆ ಕಾಯಬೇಕಲ್ಲಪ್ಪಾ" ಎಂದು 'ಲಚ್ಚಿ' ಅಪಹಾಸ್ಯದ ನಂಜು ತುಂಬಿ ಬಾಣ ಬಿಟ್ಟ.

"ನಮ್ಮ ಮನೆ ಕಾಯೋದಕ್ಕೆ ಪುಣ್ಯ ಪಡೆದಿರಬೇಕು—ಪುಣ್ಯ" ಎಂದು ನಾನು ಹಾಸ್ಯ ಮಾಡಿದೆ.

"ಹ್ಹೊಹ್ಹೊಹ್ಹೊ . . . ಪುಣ್ಯ . . . ಹ್ಹೊಹ್ಹೊಹ್ಹೊ . . . ಪುಣ್ಯ . . . ಹ್ಹಹ್ಹಹ್ಹ" 'ಲಚ್ಚಿ' ಲೇವಡಿ ಮಾಡತೊಡಗಿದ. ನನಗೆ ತುಂಬಾ ರೇಗಿತು.

"ಹೋಗಲಿ ಬಿಡೊ. ಅವನ್ನ್ಯಾಕೆ ಗೋಳು ಹುಯ್ಕೋತೀಯಾ" ಎಂದು 'ಗೋಪಿ' ಸಹಾನುಭೂತಿ ಪ್ರಕಟಿಸಿದ.

"ನಿಮ್ಮ ತಲೆ. ಬರೀ ಇನ್ನೊಬ್ಬರನ್ನು ಹುರಿದು ಮುಕ್ಕೋದೇ ಹೊರತು ಬೇರೆ ಕೆಲಸವೇ ಇಲ್ಲ. ಅಲ್ಲವೇನೊ ಲಚ್ಚಿ? ಹೋಗಲಿ. ಈಗ ಯಾವ ಕಡೆಗೆ ವಾಕ್ ಹೋಗೋಣ?" ಎಂದು ವದನ್ ಪ್ರಶ್ನಿಸಿದ.

'ಅಜ್ಜ'—ನಿಜಕ್ಕೂ ಯಾವ ಮುದಿ ಜೀವವೂ ನಮ್ಮೊಡನೆ ವಾಯು ವಿಹಾರಕ್ಕೆ ಬರುತ್ತಿರಲಿಲ್ಲ. ಅದು ನಮ್ಮ ಗೆಳೆಯನಿಗಿತ್ತ ಮಮತೆಯ ಮಾತಿನ

ರೂಪಾಂತರ ಅಥವಾ ಆದರದ ರೂಢನಾಮ. ಆದರೆ ಆತನ ತಾರುಣ್ಯಕ್ಕೆ ಸಹಜ ವಾದ ವಿಲಕ್ಷಣ ಚೇಷ್ಟೆಗಳು ನಮ್ಮ ಸುತ್ತ ಬಳಸುತ್ತಿದ್ದರೂ 'ಅಜ್ಜ'ನೆಂದು ಹೇಗೆ ಕರೆಯುತ್ತಿದ್ದೆವೊ ನನಗೇ ಆಶ್ಚರ್ಯ. ಅಂತೆಯೇ 'ಮಲ್ಲಿಗೆ'—ಇದೂ ನಮ್ಮ ಬಳಕೆಯ ಹೆಸರು. ನಿಜವೇ ಬೇರೆ. ಮಿತ್ರ 'ವದನ್'ನ ಪ್ರಶ್ನೆಗೆ 'ಅಜ್ಜ' "ಜೋಗೀಮರಡಿ ಕಡೆ ಹೋಗೋಣ" ಎಂದು ಸೂಚಿಸಿದ.

"ಉಹುಂ, ಬೇಡಜ್ಜಾ. ಆಕಡೆ ಹುಲಿಕಾಟ ಜಾಸ್ತಿಯಾಗಿದೆ" ಎಂದೆ.

"ನಮ್ಮನ್ನು ಕಂಡು ತಾನೇ ಹೆದರಿ ಹೋಗುತ್ತೆ, ಬಿಡೊ". ಗಂಡುಗಲಿ ಲಚ್ಚಿ ಹುಸಿಗುಂಡು ಹಾರಿಸಿದ.

"ನೀವೆ ಹೋಗ್ರಪ್ಪಾ. ನಾನು ಬರೋಲ್ಲ"—ಹಟ ಹಿಡಿದೆ ನಾನು.

"ಥೂ ಎಲ್ಲೋ—ಹೇಳೋ ನೀನೆ. ಎಲ್ಲಿಗೆ ಹೋಗೋಣ?"

"ಬೆಟ್ಟಕ್ಕೆ ಹೋಗೋಣ"—ನನ್ನ ಸೂಚನೆ.

ಎಲ್ಲರೂ ಒಪ್ಪಿಕೊಂಡು ಚಕ್ಕಂದವಾಡುತ್ತಾ, ಕೆಲವು ಬಾರಿ ಗುರಿಕಾಣದ ವಿಷಯಗಳ ಮೇಲೆ ಮನಬಂದಂತೆ ಚರ್ಚೆಯನ್ನು ನಡಸುತ್ತಾ ಹೊರಟೆವು. ಅವರ ಬಿರುಸಿನ ಚರ್ಚೆಯಲ್ಲಿ ನನ್ನನ್ನಂತೂ ಅಳಿಸಿಬಿಡುತ್ತಿದ್ದರು.

ಬೆಟ್ಟದ ಮೇಲಕ್ಕೆ ಹತ್ತುತ್ತಿದ್ದೆವು. ಅತ್ತು ನೊಂದು ಬಳಲಿದ ನಾನು ನಿಸರ್ಗದೆಡೆಗೆ ದಿಟ್ಟಿಯನ್ನಟ್ಟಿದೆ. ಬೈಗುಬಾಲೆ ಪಡುವಣ ದಿಗಂತದಿಂದ ಆಗಸದ ಮೇಲಕ್ಕೇರಿ ಬರುತ್ತಿದ್ದಳು. ರವಿ ಕಡಲ ತಡಿಯ ಬಳಿಗೆ ಮೆಲ್ಲಡಿ ಯಿಡುತ್ತಾ ಸಾರುತ್ತಿದ್ದ. ನಮ್ಮೂರಿನ ಬೆಟ್ಟಗಳ ಸಾಲು ಪಶ್ಚಿಮದೆಡೆಗೆ ಹಬ್ಬಿ ಆಗಸವನ್ನಪ್ಪಲು ಪ್ರಯತ್ನಿಸುವಂತೆ ತೋರುತ್ತಿದೆ. ಮೇಲುದುರ್ಗದ ಮೆಟ್ಟಲು ಗಳನ್ನು ನವೋತ್ಸಾಹದಿಂದ ಹತ್ತುತ್ತಾ, ಕೋಟೆಗಳನ್ನು ನಿಬ್ಬೆರಗಾಗಿ ವೀಕ್ಷಿ ಸುತ್ತಾ, ಒಡನೆ ಅಲ್ಲಲ್ಲಿ ಕುಣಿದು ಕುಪ್ಪಳಿಸಿ 'ಏಕನಾಥೇಶ್ವರೀ' ದೇಗುಲದ ಬಳಿಗೈತಂದೆವು. ಅಲ್ಲಿ ನಿಂತು ವೀಕ್ಷಿಸಬೇಕು ಸೂರ್ಯಾಸ್ತವನ್ನು. ಅನುಭವಿ ಸುವವನೇ ಅರಿಯಲು ಸಾಧ್ಯ ಆ ಅನುಪಮ ಸೊಬಗನ್ನು. ಆ ಮನಮೋಹಕ ಸುಂದರ ದೃಶ್ಯವನ್ನು ಕಾಣುವಾಗ, ಸನಿಹದ 'ಸಂಪಿಗೆ ಸಿದ್ಧೇಶ್ವರನ' ದೇವಾ ಗಾರದಿಂದ ಮಂಜುಳವಾಗಿ, ಸಂಧ್ಯಾಪೂಜೆಯ ಘಂಟಾನಾದವು ನಮ್ಮನ್ನು ಆನಂದದ ಕೊಳದಲ್ಲಿ ಮಿಾಯಿಸುತ್ತದೆ. ಆಗ ನಿಸರ್ಗ ನಮ್ಮ ಕಣ್ಗೆ ಸಮ್ಮೋಹದ ಬಲೆ ಕಟ್ಟುತ್ತದೆ. ಘಂಟಾನಾದ 'ಸಂಪಿಗೆ ಸಿದ್ಧೇಶ್ವರನ' ಪೂಜೆಯಿಂದಾದರೂ

ನಾವು ತಿಳಿವ ಬಗೆ ಬೇರೆ—ಹೊಂಬಣ್ಣದ ಉಡುಗೆಯುಟ್ಟು, ನಸುಗೆಂಪು ಬಣ್ಣದ ರಥದಲ್ಲಿ ಕುಳ್ಳಿರ್ದು ಆಸ್ಥಾನದಿಂದ ಅರಮನೆಗೆ ಸೂರ್ಯದೇವ ಸಾರುವ ಮುನ್ನಿನ ಪೂಜೆಯ ಘಂಟಾನಾದ ಅದು ಎಂದು.

ನಾವೆಲ್ಲರೂ ಆ ಹೃದಯಂಗಮವಾದ ಪ್ರಕೃತಿಯನ್ನು ನೋಡುತ್ತಾ ನಮಗರಿವಿಲ್ಲದಂತೆಯೆ ಗೋಪಾಲಸ್ವಾಮಿ ಬೆಟ್ಟದೆಡೆಗೆ ಬಂದಿದ್ದೆವು. ದಾರಿಯ ಇಕ್ಕೆಲದಲ್ಲಿ 'ಅಕ್ಕ', 'ತಂಗಿ'ಯರ ಹೊಂಡಗಳು ಕಂಗೊಳಿಸುತ್ತಿದ್ದುವು.

'ತಂಗಿ'ಯ ಹೊಂಡ ಚಚ್ಚೌಕವಾದ ಕೊಳ. ಸುತ್ತ ನಾಯಕ ಕಟ್ಟಿಸಿದ ಹಾಲುಗಲ್ಲ ದಂಡೆ ಕೊಳದ ತಿಳಿನೀರನ್ನು ರಕ್ಷಿಸುತ್ತಿದೆ. ಕೊಳದ ತೆಂಕಣದಲ್ಲಿ ಸುಂದರವಾದ ಪಾವಟಿಗೆಗಳು ಕೊಳದ ಸೌಂದರ್ಯವನ್ನು ರಮಣೀಯತೆಯನ್ನು ಹೆಚ್ಚಿಸಿವೆ. ಒಂದು ಬದಿಯಲ್ಲಿ ಮರಕಣಿಗಿಲೆ ಮರವೊಂದು ಪುಷ್ಪಗುಚ್ಛಗಳಿಂದ ಜನರ ಮನರಂಜಿಸುವುದಲ್ಲದೆ, ಕೊಳವನ್ನು ಆಶೀರ್ವದಿಸುವ ಬಿಂಕದಿಂದ ಬಾಗಿ ಬೆಳೆದಿದೆ. ಕೊಳದಲ್ಲಿ ಪಾಚಿ, ಕಮಲ, ತಾವರೆ, ಜೊಂಡು ಮುಂತಾದ ನೀರ ನುಂಡು ಬೆಳೆವ ಸಸ್ಯಗಳಿಲ್ಲ. ಅದರಿಂದಾಗಿ ಕೊಳದ ನೀರು ಸ್ವಚ್ಛ, ಸುಂದರ, ಸುಮಧುರವೂ ಹೌದು. ತೆಂಕಣದ ಪಾವಟಿಗೆಗಳ ಒಂದು ಬದಿಯಲ್ಲಿ ಕೊಳ ತುಂಬಿದನಂತರ ಮೇಲ್ವರಿವ ನೀರನ್ನು ಹೊರದೂಡಲೊಂದು ಪುಟ್ಟ ಕಿಂಡಿ. ಅಂದು ಕಿಂಡಿಯಿಂದ ನೀರು ಹರಿದು ಅನತಿದೂರದ 'ವಿಶ್ವನಾಥ' ದೇಗುಲದ ಗರ್ಭಾಂಗಣದೊಳಕ್ಕೂ ನುಗ್ಗಿತ್ತು. ದೇವದೇವನ ಪೀಠಲಿಂಗದವರೆಗೆ ನೀರು ನಿಂತಿತ್ತು. ಮಹಾದೇವ ಜಲಪೂಜೆಯಲ್ಲಿ ಮಗ್ನನಾಗಿಬಿಟ್ಟದ್ದಂತೆ ಅನಿಸು ತ್ತಿತ್ತು. ನಾವೂ ಆ ಜಲಸಮೃದ್ಧಿಯನ್ನು ಕಂಡು ತನ್ಮಯರಾದೆವು. ನಾನು (ಭಾವನಾಜೀವಿ!) ಭಾವನೆಯ ಬಗೆಗಣ್ಣು ಮುಚ್ಚಿಕೊಂಡೆ. ವಿಶ್ವನಾಥನ ಸಂದರ್ಶನದ ಬಳಿಕ ಪುನಃ ಕೊಳದ ಮೇಲೆ ಬರುತ್ತಿದ್ದೆ. ಸಂಧ್ಯಾಸನ್ನಿವೇಶದ ಹಿನ್ನೆಲೆಯಲ್ಲಿ ಆ ಕೊಳ ರಮ್ಯತೆಯನ್ನು ಇಮ್ಮಡಿ ಮುಮ್ಮಡಿ ಮಾಡಿಕೊಂಡಿತ್ತು. ಅದರ ನೀರಿನ ಮೇಲೆ ಮರಕಣಿಗಿಲೆ ಹೂವು ಉದುರಿದ್ದುವು. ಆ ದೃಶ್ಯ ನಿರ್ಮಲವಾದ ಆಗಸದಲ್ಲಿ ತಾರೆಗಳು ಮೂಡಿದಂತೆ ಮನಸ್ಸನ್ನು ತಣಿಸಿತು.

'ತಂಗಿ'ಯ (ಕೊಳದ) ಸೌಂದರ್ಯದ ನಿಲುವು ಇದಾದರೆ 'ಅಕ್ಕ'ನದು ಮತ್ತೊಂದು ವಿಧದ ರಮ್ಯತೆ. ಒಂದೆಡೆ ವಿನಾ ಉಳಿದಕಡೆ ನಿಸರ್ಗ ಕಟ್ಟಿದ ದಂಡೆ ಎತ್ತರವಾಗಿ ನಿಂತಿದೆ. ಕೊಳದ ನೀರು ತಿಳಿಯಾಗಿದ್ದರೂ, ತಾವರೆ ಮತ್ತು

ಕಮಲದ ಗಿಡ ಬಳ್ಳಿಗಳು ಬೆಳೆದು ನೀರ ಮೇಲಿನ ಹಸಿರು ಹೊದಿಕೆಯಿಂದಾಗಿ ನೀರು ಕಾಣಿಸದು. ಅಲ್ಲ, ಹೊದಿಕೆಯಡಿಯಲ್ಲಿ ತಿಳಿನೀರು ನಿದ್ರೈಸ್ಯುತ್ತಿರ ಬೇಕು. ಕೊಳದ ಮಧ್ಯೆ ಎತ್ತರವಾದ ದಿನ್ನೆ. ದಿನ್ನೆಯ ಮೇಲೊಂದು ಪುಟ್ಟ ಗುಡಿ. ದೇವನಿಲ್ಲದ ದೇವಾಲಯ. ಸುತ್ತಲಿನ ಜಲಸಮೃದ್ಧಿ ಮತ್ತು ಲತಾ ವ್ಯೂಹವನ್ನು ದಾಟಿ, ಸುರಕ್ಷಿತವಾಗಿ ಗುಡಿಗೆ ಸಾಗುವವರಿಲ್ಲ. ಗುಡಿಗೆ ನಾಲ್ಕೈದು ಅಡಿಯಡಿಯಲ್ಲಿ ನೀರು ಬಳಸಿದೆ.

ನಮ್ಮೂರಿನಲ್ಲಿ ಕಮಲಪುಷ್ಪ ಬಿಡುವುದು ಒಂದೇ ಕಡೆ. ಅದು ಈ ಕೊಳ ದಲ್ಲಿ. ಆದರೆ ಕಮಲವನ್ನು ಬಿಡಿಸಿ ತರುವುದು ಶ್ರಮಸಾಧ್ಯ. ನನಗೆ ಒಂದು ಬಯಕೆ ಬೆಂಬತ್ತಿ ಪೀಡಿಸುತ್ತಿತ್ತು—ಕೊಳದಲ್ಲಿ ಅರಳಿದ ಹೂವನ್ನು ತಂದು ಮೂಸಿ ಹಿಗ್ಗಬೇಕೆಂದು. ಅದು ಸರಿಯೆ. ಆದರೆ ತರುವ ವಿಧಾನ? ನನ್ನಿಂದಾಗುವ ಮಾತಲ್ಲ ಅದು—ಎಂದುಕೊಂಡು ಸುಮ್ಮನಿದ್ದೆ.

ಇಂದು ನಾನೂ ನನ್ನ ಗೆಳೆಯರೂ ಅಕ್ಕನ ಕೊಳದ ಬದಿಯಲ್ಲಿ ಕುಳಿತು ನಮ್ಮ ಕೋಟಿ ಕೊತ್ತಲಗಳ ಹಿರಿಸಿರಿಯನ್ನು ಕಾಣುತ್ತಿದ್ದೆವು. ಕೊಳದಲ್ಲಿ ಏಕೈಕ ಕಮಲ, ಅಗಲವಾದ ಎಲೆಗಳ ಮಧ್ಯೆ, ನೀಳವಾಗಿ ಕತ್ತು ಚಾಚಿ ಪಡುವಣ ಬಾನಿನೆಡೆಗೆ ತನ್ನ ಮುಖ ತಿರುಗಿಸಿ ಅಣ್ಣನ ನಿರ್ಗಮನವನ್ನು ದುಃಖ ಪೂರ್ಣ ದೃಷ್ಟಿಯಿಂದ ನೋಡುತ್ತಿದ್ದಳು. ಇನಿಯ ಮರಳಿಯಾನೆ ಎಂದು ಕಾದಿದ್ದಳು. ಆ ಕಮಲವನ್ನು ಕಂಡು ನನಗೆ ಭಾವಾವೇಶ ಬಂದಂತಾಯಿತು.

"ಎಷ್ಟು ಮನೋಹರವಾಗಿದೆಯೋ ಈ ದೃಶ್ಯ! ಆ ಕಮಲ 'ಏಕಾಗಿ ನಲ್ಲ ತೊರೆದು ನಡೆದನೋ?' ಎಂದುಕೊಳುತ್ತ ನಿಂತಹಾಗಿದೆ ನೋಡ್ರೊ" ನನಗರಿವಿಲ್ಲದಂತೆ ನನ್ನ ಬಾಯಿಂದ ಉದ್ಗಾರ ಹೊರಬಂದಿತು.

"ಹ್ಹಹ್ಹಹ್ಹ . . . ಹ್ಹಹ್ಹಹ್ಹ . . . ಆ ಕಮಲ ಹಾಗಿರಲಿ. ಇಂದು ನಿನ್ನ ಮುಖಕಮಲ ಅದನ್ನು ಮೀರಿಸುತ್ತೆ . . . ಹ್ಹಹ್ಹಹ್ಹ" ಎಂದು ಕುಚೇಷ್ಟೆಗಾಗಿ 'ಅಜ್ಜ' ನುಡಿದ.

ಉಳಿದವರೆಲ್ಲರೂ ಬೆಟ್ಟ ಬಿರಿಯುವಂತೆ ನಕ್ಕರು. ನಂಜುನಗೆಯದು, ಅಪ ಹಾಸ್ಯದ ಅತಿರೇಕದ್ದು. ಅದರಿಂದ ಕೋಪದ ಕಾರ್ಮೋಡ ನನ್ನಲ್ಲಿ ಸೃಷ್ಟಿ ಯಾಗಿ ಕಟುಟೀಕೆಯ ವರ್ಷಧಾರೆಗೆಡೆಕೊಟ್ಟಿತು.

"ಹೌದ್ರೋ. ಇದ್ದಿದ್ದರಲ್ಲಿ ನನ್ನ ಮುಖಾನೆ ಚೆನ್ನಾಗಿರೋದು. ಅಲ್ಲ,

ನನ್ನ ಮೇಲೆ ಈ ವ್ಯಂಗ್ಯೋಕ್ತಿಗಳನ್ನು ಪ್ರಯೋಗಿಸುತ್ತೀರಲ್ಲಾ—ನೀವು ಹೇಗಿದ್ದೀರಿ ಯೋಚಿಸಿದ್ದೀರಾ? ಒಬ್ಬೊಬ್ಬರದಾಗಿ ಅವರವರ ಬಂಡವಾಳ ಹೇಳ್ತೀನಿ, ಕೇಳಿ. 'ಲಚ್ಚೀ'ದು, ತಿಗಣೆ ಮುಖ (ಮುಖದ ತುಂಬಾ ಗುಳ್ಳೆ ಎದ್ದಿತ್ತು). 'ವದನ್'ದು ಹುಳುಕು ಮುಖ (ಸಿಡುಬೆದ್ದು ಕಲೆಯುಳಿದಿತ್ತು.) 'ಅಜ್ಜ'ನ ಮುಖವೋ—ಉಬ್ಬು ಹಲ್ಲುಗಳು ಇಣಿಕಿ ನೋಡುತ್ತಾ ಇವೆ. ಇನ್ನು ಉಳಿದವರನ್ನು ಸೃಷ್ಟಿಸುವಾಗ ಎಲ್ಲಾ ಮುಗಿದು ಮುಖದ ಕೆಲಸ ಉಳಿದಿತ್ತಂತೆ, ಆಗ ಶಾರದಾ ಅಮ್ಮನವರು ಒಳಗಣಿಂದ 'ಎಲೆ ಹಾಕಿದೆ' ಎಂದು ಕೂಗಿದರಂತೆ, ಆದ್ದರಿಂದ ಸೃಷ್ಟಿದೇವ ಮುಖಗಳನ್ನು ಹೇಗೆ ಹೇಗೋ ಮಾಡಿ ಊಟಕ್ಕೆ ಳಿದು ಬಿಟ್ಟನಂತೆ!" ನನ್ನ ಪ್ರತಿಹಾಸ್ಯ ಕೇಳಿ ಎಲ್ಲರೂ, ಜೊತೆಗೆ ನಾನೂ, ಹೊಟ್ಟೆ ಬಿರಿಯುವಂತೆ ನಕ್ಕೆವು.

'ಲಚ್ಚಿ' ತನ್ನ ಮನೋಭಾವದ ದಿಗ್ದರ್ಶನಕ್ಕೆ ತಕ್ಕ ಸನ್ನಿವೇಶದ ನಿರ್ಮಾಣವಾಗಲು, ನನ್ನ ಬಳಿ ಬಂದು "ಹೌದೌದು. ನಮ್ಮವೆಲ್ಲವೂ ವಕ್ರ—ಅಷ್ಟಾವಕ್ರ. ನಿನ್ನ ಮುಖಕಮಲ ಅಖಂಡ ಸೌಂದರ್ಯದ ಖಣಿ!" ಎನ್ನುತ್ತಾ ನನ್ನ ಕೆನ್ನೆ ಸವರಿ ತನ್ನ ಕೈಗಳನ್ನೇ ಮುತ್ತಿಟ್ಟುಕೊಂಡ. ಅವನ ಕೆನ್ನೆಗೆ ನನ್ನ ಏಟು ಬಿತ್ತು—ಈ ಕುಚೇಷ್ಟೆ ನನಗೆ ಸಹ್ಯವಾಗದೆ ಹೋಯಿತು. ಏಟಿಗೆ ಪ್ರತಿಯಾಗಿ 'ಲಚ್ಚಿ' ನನ್ನ ಕೆನ್ನೆ ಹಿಂಡುವುದಕ್ಕೆ ಆರಂಭಿಸಿದ. 'ಅಜ್ಜ' ಮಧ್ಯಸ್ಥಿಕೆ ವಹಿಸಿ ನಮ್ಮ ಕಲಹ ನಿಲ್ಲಿಸಬೇಕಾಯಿತು. ನಾನು ಕೋಪದಿಂದ—

"ಇಂಥಾದ್ದಕ್ಕೆ ಮಾತ್ರ ಒಬ್ಬರಿಗಿಂತ ಒಬ್ಬರು ಧೀರರು. ಒಬ್ಬರನ್ನು ಗೋಳುಹುಯ್ಯಬೇಕು ಎಂದರೆ ನಾನು ತಾನು ಎಂದು ಬರ್‍ತೀರಲ್ಲಾ—ಧೀರರು—ಎಲ್ಲಿ? ಕೊಳದಲ್ಲಿರೋ ಆ ಹೂವು ಕಿತ್ಕೊಂಬಾರೋ ನೋಡೋಣ ನಿನ್ನ ಶಕ್ತಿ?" ಎಂದೆ.

'ಲಚ್ಚಿ' ಸೋತಾನೆ? "ತಂದುಕೊಡ್ತೀನಿ, ಏನು ಕೊಡ್ತಿಯೋ? ಹೋಗಲಿ. ನೀನು ತಂದುಕೊಡು, ನೀನು ಕೇಳಿದ್ದು ಕೊಡ್ತೇನೆ. ಹೂಂ, ಹೇಳು ಮತ್ತೆ, ಯಾವುದಕ್ಕೆ ಸಿದ್ಧವಿದ್ದೀ?" ಎಂದು ಮೂದಲಿಸಿದ.

ನಾನು ತೆಪ್ಪಗಾಗಬೇಕಾಯಿತು. ಏಕೆಂದರೆ ನನಗೆ ಈಜು ಬರುತ್ತಿರಲಿಲ್ಲ. ಉಳಿದವರೆಲ್ಲ ಈಜಿನಲ್ಲಿ ಪ್ರವೀಣರು. ನನಗೇ ನನ್ನ ಮೂದಲಿಕೆಯಲ್ಲಿ

ಶೈಥಿಲ್ಯ ಕಾಣಬಂದಿತು. ಸೋಲೂ ಒಪ್ಪೆ. ಗೆಲ್ಲಲೂ ಆರೆ. ಮುಟ್ಟಿದರೆ ಮಿಡಿಯುವ ಜೀವ ನನ್ನದು.

ನಾನು ತೆಪ್ಪಗಾದುದನ್ನು ಕಂಡು ಗೆಳೆಯರು ನಂಜುನಗೆ ಬೀರಿದರು. ಕೇಕೆಹಾಕಿಕೊಂಡು ನಕ್ಕರು. ಸಂಚಾರಕ್ಕೆ ಹೊರಟಾಗಿನಿಂದ, ಹಾಸ್ಯ, ವಂಗ್ಯ, ಕುಚೇಷ್ಟೆ, ಲೇವಡಿಗಳಿಂದ ಭಾರವಾಗಿದ್ದ ನನ್ನ ಹೃದಯ ಸೋಲು ಒಪ್ಪಲಾರದೆ, ಖಿನ್ನವಾಯಿತು. ನನ್ನ ಕಣ್ಣು ತುಂಬಿದವು—ಅದರ ಹೊರತು ಬೇರೆ ದಾರಿಯೆ ಇರಲಿಲ್ಲ.

ನನ್ನ ಕಣ್ಣೀರು ಕಂಡು 'ಅಜ್ಜ' ಸಮಾಧಾನ ಮಾಡಲು ತೊಡಗಿದ. ನಿಜಕ್ಕೂ ಆ 'ಅಜ್ಜ'ನಿಂದಲೇ ನನ್ನ ಇನಿ ಹೃದಯ ತುಂಬುತ್ತಿದ್ದಿತು. ಅವನೆದೆಯ ಆಡುಂಬೊಲದಲ್ಲಿ ನಾನು ಆಟಗಾರನಾದರೆ ನನ್ನ ಹೃತ್ಪೀಠದ ಅಧಿಕಾರ ಅವನಿಗೆ. ಅಷ್ಟರಮಟ್ಟಿಗೆ ನಮ್ಮಿಬ್ಬರಲ್ಲಿ ನೇಹದ ಬಿತ್ತು ಬೆಳೆಗೊಂಡಿತ್ತು. ನಮ್ಮಿಬ್ಬರ ಸ್ನೇಹ ಇತರರು ಕರುಬುವಷ್ಟು ಪ್ರಖರವಾಗಿತ್ತು, ಪ್ರಜ್ವಲಿತವಾಗಿತ್ತು. ನನ್ನ ಸುಖ ದುಃಖ, ಕೋಪ ತಾಪ, ಆದರ ಅನಾದರ, ಮಾನ ಅವಮಾನಗಳ ಅರ್ಧ ಪಾಲು ಅವನದು. ಆತನ ಮಮತೆ— ನನ್ನ ಮೇಲೆ; ತಾಯಿಯ ವಾತ್ಸಲ್ಯಕ್ಕಿಂತ ಹಿರಿದು. ಅಂತಲೇ ಅವನನ್ನು 'ಅಜ್ಜ'ನೆಂದು ಕರೆಯುತ್ತಿದ್ದುದು. ಪ್ರಕೃತ ಸಮಯದಲ್ಲಿ, ಅವನ ಆದರದ ಅಮೃತದಲ್ಲಿ ನನ್ನ ಕೋಪ, ನೋವು, ತಾಪ, ದುಃಖ ಮಾಯವಾದುವು.

ಆದರೂ ನನಗೆ ಈಜು ಬಾರದ್ದರಿಂದ ಸೋಲಾದ ಪ್ರಸಂಗ ನನ್ನ ಎಳೆ ಹೃದಯದ ಮೇಲೆ ತುಂಬಾ ಪರಿಣಾಮವನ್ನುಂಟುಮಾಡಿತು. ಈಜು ಕಲಿತು ಒಂದು ದಿನ ಆ ಪದ್ಮವನ್ನು ಕಿತ್ತು ತಂದು ಲಚ್ಚಿಗೆ ಕೊಟ್ಟು, ಅವನನ್ನು ಗೆಲ್ಲಬೇಕೆಂಬ ಆಸೆ ಮೊಳೆತು ಆಗಲೇ ಮರವಾಯಿತು. ಈಜು ಕಲಿಯಬೇಕೆಂಬ ಆಸೆಯನ್ನು ನನ್ನಾತ್ಮದ ಪಡಿಯಚ್ಚಾದ 'ಅಜ್ಜ'ನಿಗರುಹಿದೆ. ಸಮ್ಮತಿ ದೊರೆತು ಮಾರನೆಯ ದಿನದಿಂದ ಆರಂಭಿಸಲು ನಿರ್ಧರಿಸಿದೆವು.

ಅನಂತರ 'ಲಚ್ಚಿ'ಯ ಕಡೆಗೆ ಮೋಕ್ಷಹೊಂದದ ಮುನಿಸಿನಿಂದರಳಿದ ಬಿರುಗಣ್ಣುಗಳಿಂದ ನೋಡಿದೆ. ಅವನು ಪ್ರತಿಯಾಗಿ ತಾನೂ ಕೋಪವನ್ನೇ ವ್ಯಕ್ತಪಡಿಸದೆ ನಸುನಕ್ಕ. ನಾನೂ ನಗಬೇಕಾಯಿತು. ಪುನಃ ಗೆಳೆಯರಾದೆವು.

ಆಗ ಸಂಜೆವೆಣ್ಣು ಮೆಲುನಡಿಗೆಯಲ್ಲಿ ಜಗವನ್ನೆಲ್ಲ ತನ್ನ ಸೊಬಗಿನಿಂದ ಕಟ್ಟುತ್ತಿದ್ದಳು. ಅಲ್ಲೊಂದು ಇಲ್ಲೊಂದು ತಾರೆ ಮಿರುಗುತ್ತಿದ್ದುವು. ಬಾನು ಸಿಂಗಾರವಾಗಿತ್ತು. ಭುವಿ ನೆಮ್ಮದಿಯ ತೊಡೆದಿತ್ತು. ಆಗಸದಲ್ಲಿ ಚಂದ್ರಮನು ಈ ಕಿರುವಯಸಿನ ಕೆಳೆಯರ ಹುಸಿಕಲಹಗಳನ್ನು ಕಂಡು ಬೆಳ್ದಿಂಗಳ ನಗೆ ಬೀರುತ್ತಿದ್ದ—ಅಲ್ಲ, ನನ್ನನ್ನು ಹಾಸ್ಯಮಾಡುತ್ತಿದ್ದ! ಇಕ್ಕೆಲದ ಕೊಳಗಳ ತಿಳಿನೀರ ಮೇಲೆ ಬೆಳ್ದಿಂಗಳು ಪಸರಿಸಿ ಪ್ರತಿ ಬಾನನ್ನೆ ಸೃಷ್ಟಿಸಿಕೊಂಡಂತಿತ್ತು. ಇವೆಲ್ಲಕ್ಕೂ ಮಿಗಿಲಾಗಿ ಬೆಟ್ಟದ ಮೇಲಕ್ಕೆ ನನ್ನ ಮನದ ಕಿವಿಗೆ ನಮ್ಮ ಮನೆಯಿಂದ ಊಟದ ಕರೆ ಕೇಳಿಬಂದಿತು.

ಬೆಟ್ಟವಿಳಿದು ಮನೆ ಸೇರಿ, ಊಟ, ಓದು ಮುಗಿಸಿ ಮಲಗಿದೆ. ನಿದ್ರೆ ಆವರಿಸಿ ಅದಾವುದೋ ಒಂದು ಲೋಕಕ್ಕೆ ನನ್ನನ್ನು ಸೆಳೆದೊಯ್ದಿತು.

* * * *

ಕಾಫಿ ತಿಂಡಿ ಆಗಿತ್ತು. ಎಲ್ಲ ಗೆಳೆಯರೂ ಈಜಿಗಾಗಿ ಹೊರಟೆವು. ದಾರಿಯಲ್ಲಿ ನಾನು ಯೋಚನಾಮಗ್ನನಾಗಿಯೇ ಇದ್ದೆ. ಉಯ್ಯಾಲೆಯಲ್ಲಿ ನನ್ನ ಮನಸ್ಸನ್ನಿಟ್ಟು ತೂಗುತ್ತಿದ್ದೆ.

"ನೀರಿಗಿಳಿಯಲೆ? ಅಥವಾ ಬೇಡವೆ?" ಎಂಬುದು ನನ್ನ ಪ್ರಶ್ನೆ.

ನನ್ನ ಮನದ ಒಂದು ಮುಖ ಉತ್ತರಿಸಿತು: "ನಿನ್ನ ಗೆಳೆಯರಿಂದ ಈಜು ಬಾರದ್ದಕ್ಕಾಗಿ ಸೋಲು ಅನುಭವಿಸಬೇಕಾಯಿತು, ಅಪಹಾಸ್ಯಕ್ಕೀಡಾಗಬೇಕಾಯಿತು. ಆದುದರಿಂದ ಈಜು ಕಲಿತು ಮೇಲ್ಮೆ ಸಂಪಾದಿಸುವುದೇ ಒಳ್ಳಿತು."

ಮನದ ಇನ್ನೊಂದು ಮುಖ ಮೂಡಿಬಂದೊದರಿತು: "ಅಯ್ಯಯ್ಯೊ, ಎಲ್ಲಾದರೂ ಏನಾದರೂ ಆದರೆ?! . . . ಸೋತರೇನಾಯಿತು? . . . ಅಲ್ಲ, ನೀನೇನಾದರೂ ಕೊಳದಲ್ಲಿ ಇಳಿದರೆ, ಕೂಡಲೆ ಈ ಪುಂಡಗೆಳೆಯರು, ಕೊಳದ ಮಧ್ಯಕ್ಕೆ ನಿನ್ನನ್ನು ಸೆಳೆದೊಯ್ದು ನೀರಿನೊಳಕ್ಕೆ ಅಮುಕಿ ಬಿಡುತ್ತಾರೆ ನೋಡು . . .!"

"ಛೆ ಛೆ. ಏನು ಅಳ್ಳೆದೆಯಪ್ಪ ನಿನ್ನದು? ಯಾರೂ ಈಜು ಕಲಿಯೋದೆ ಇಲ್ಲವೆ, ಕಲಿತಿಲ್ಲವೆ! ಈಜುಬುರುಡೆ ಬೇರೆ ಕಟ್ಟಿರುತ್ತಾರೆ, ನಿನ್ನನ್ನು ಮುಳುಗಿಸಿದರೂ ನೀನು ಮೇಲಕ್ಕೆ ಬರುತ್ತಿ. ಅದೇಕೆ ಭಯ?"

"ಈಜುಬುರುಡೆಯೇನೋ ಇರುತ್ತೆ, ನಿಜ. ಆದರೆ ಅಕಸ್ಮಾತ್ ಬಿಟ್ಟು ಕೊಂಡುಬಿಟ್ಟಿತೆನ್ನು, ಅಥವಾ ಒಡೆದು ನೀರು ತುಂಬಿಕೊಂಡಿತೆನ್ನು. ಅನಂತರ ನಿನಗೆ ಕೊಳದ ತಳವೇ ಹಾಸಿಗೆ, ಮೇಲಿನ ನೀರೇ ಹೊದಿಕೆ . . . ಪರಲೋಕದ ಬಾಗಿಲು ನಿನಗೆ ಅಲ್ಲಿಯೇ ತೆರೆಯೋದು. ಹೋಗಲಿ, ಒಳ್ಳೆಯ ಸಾವಾದರೂ ಬರುತ್ತೆಯೆ! ದುರ್ಮರಣ!"

"ದುರ್ಮರಣ!!!" ಎಂಬ ಮಾತು ನನ್ನ ಮೈ ನಡುಗಿಸಿತು.

"ಥೂ ಥೂ. ಚಂಚಲ ಹೃದಯಿಗಳಲ್ಲಿ, ಅಲ್ಲ, ಹೇಡಿಗಳಲ್ಲಿ ನೀನೇ ಮೊತ್ತಮೊದಲಿಗ. ಇಷ್ಟು ಜನ ಇದ್ದುಕೊಂಡು ನಿನ್ನ ಬಾಳು ಕೊನೆಗಾಣಿಸು ತ್ತಾರೆಯೆ? ನಿನ್ನನ್ನೆ 'ಪಂಚಪ್ರಾಣ' ಎಂದು ಭಾವಿಸಿರುವ 'ಅಜ್ಜ' ಇದ್ದಾನೆ. ಅವನೂ ನಿನಗೆ ಹಾಗಾಗಲು ಎಡೆ ಕೊಡುತ್ತಾನೆಯೆ?"

"ಹೌದು ಹೌದು. ಈ ಸನ್ಮಿತ್ರ ಜೊತೆಗಿದ್ದಾನೆ. ಭಯ ಅನವಶ್ಯಕ." ನಾನೆಂದುಕೊಂಡೆ. ಮನದ ಎರಡು ಮುಖಗಳೂ ಒಕ್ಕೊಡಿದುವು. ನಿರ್ಭೀತಿ ನನ್ನ ಮೈಯಲ್ಲಿ ಪ್ರವಹಿಸಿ ಹೊಸ ಹುರುಪನ್ನು ತಂದೂಡಿತು.

'ಗೋಪಾಲಸ್ವಾಮಿ' ಹೊಂಡದಲ್ಲಿ ನನ್ನ ಅಭ್ಯಾಸ ಜರುಗಬೇಕೆಂದು ನಿರ್ಧರಿಸಿ ಬೆಟ್ಟ ಹತ್ತಿದೆವು. ನಾಲ್ಕನೆ ಸುತ್ತಿನ ಕೋಟೆಯ ಹೆಬ್ಬಾಗಿಲು ಎದುರಿಗೆ ಕಾಣುತ್ತಿತ್ತು. ಹೆಬ್ಬಾಗಿಲ ಮುಂಭಾಗದಲ್ಲಿನ ವಿಶಾಲವಾದ ಪಾವಟಿಗೆಗಳನ್ನೇರು ವಾಗ ನಿಡಿದಾದ ಹಾವೊಂದು ಸರ್ರನೆ ಹರಿದುಹೋಯಿತು. ನನ್ನ ಕೈಯಲ್ಲಿದ್ದ ಈಜುಬುರುಡೆ ಕೆಳಕ್ಕೆ ಬಿದ್ದು ಒಡೆದುಹೋಯಿತು. ಸನಿಹದ ಮಿತ್ರನ ತೋಳನ್ನು ಭದ್ರವಾಗಿ ಹಿಡಿದುಕೊಂಡು ಸಭಯನೇತ್ರಗಳಿಂದ ಹಾವನ್ನೆ ನೋಡುತ್ತಿದ್ದೆ. ಹಾವು ತನ್ನ ಬಿಲದೊಳಕ್ಕೆ ಹೋಯಿತು. ಗೆಳೆಯರು ಹಾವನ್ನು ಕೊಲ್ಲಲು ಯತ್ನಿಸಿ ವಿಫಲರಾದರು. ಪುನಃ ಮುಂದುವರಿದೆವು. ನನ್ನ ಮನಸ್ಸಿಗೆ ಇದು 'ಅಪಶಕುನ' ಎನ್ನಿಸಿತು.

ಹೊಂಡದ ತಾಣಕ್ಕೆ ತಲಪಿದೆವು. ನನ್ನನ್ನು ಸಿದ್ಧವಾಗಲು ಹೇಳಿ ಉಳಿ ದವರು ನೀರಿಗೆ ಧುಮುಕಿದರು, ಬಿಸಿಲ ಬೇಗೆಗೆ ಬೆಂದು ಬಸವಳಿದು, ನೀರಿಗಾಗಿ ಕಾತರಿಸಿದ ಎಮ್ಮೆಗಳಂತೆ! 'ಅಜ್ಜ' ತನ್ನ ಬೆರಳಿಗೆ ಸಡಿಲವಾಗಿದ್ದ ಉಂಗುರವನ್ನು ನನ್ನ ಕೈಗಿತ್ತು ಈಜಲು ಹೋಗಿದ್ದ. ಉಂಗುರದ ಮಾಟವನ್ನು ತಿರುಗಿಸಿ ತಿರುಗಿಸಿ ನೋಡುತ್ತಿದ್ದೆ. ಕೈಯಿಂದ ಪುಳಕ್ಕನೆ ಬಿದ್ದುಹೋಯಿತು

ಉಂಗುರ. ಮರುಕ್ಷಣವೇ ನನ್ನೆದೆವಕ್ಕಿಯೂ ಪುಕ್ಕನೆ ಹಾರಿದಂತಾಯಿತು. ನಡುಕ ಹುಟ್ಟಿತು, ಮೈ ಬೆವರಿತು. ಉಂಗುರ ಹೊಂಡಕ್ಕೆ ಬಿದ್ದುದಾಗಿ ಕೂಗಿದೆ. 'ಅಜ್ಜ' ವೇಗವಾಗಿ ಬಂದು ನನ್ನ ಮೇಲೆ ಅಸಮಾಧಾನಗೊಂಡ. ಅವನ ಮುಖವೂ ಪೆಚ್ಚಾಯಿತು. ಅವನಿಗೂ ಮಿಡುಕು, ಮನೆಯವರು ನಿಂದಿಸಿ ಯಾರೆಂದು. ಇಬ್ಬರಿಗೂ ಏನೂ ತೋರದೆಹೋಯಿತು. ದಂಡೆಯೆಲ್ಲವನ್ನೂ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದೆವು. ಉಂಗುರ ಸಿಕ್ಕಲಿಲ್ಲ.

ಸಧ್ಯ, ಹೊಸದಾಗಿ ಹಾರಲು ಶಕ್ತಿ ಬಂದ ಹಕ್ಕಿಯಂತೆ ಹಾರದೆ, ಬೇಟೆಯಾಡಲು ಕಲಿತ ಹುಲಿಮರಿ ತನ್ನ ಬಂಧುವಾದ ಇನ್ನೊಂದು ಹುಲಿ ಮರಿಯ ಮೇಲೆ ಹಾರಿ ಪರಚುವಂತೆ ಪರಚದೆ, ನನ್ನ ಮೇಲೆ ಪ್ರತೀಕಾರ ವನ್ನು 'ಅಜ್ಜ' ತೋರದಿದ್ದುದೇ ನನ್ನ ಅದೃಷ್ಟ. "ಎಂತಹ ಕೆಲಸ ಮಾಡಿದೆ ಯಪ್ಪ!" ಎಂದು ನೊಂದು ನುಡಿದ ಅಷ್ಟೆ. ಅಷ್ಟು ಸ್ನೇಹ ನಮ್ಮಿಬ್ಬರಲ್ಲಿ ಬೆಳೆಗೊಂಡಿತ್ತು. ಪರಿಪಕ್ವವೂ ಆಗಿತ್ತು. ಆದರೇನು, ಬೆಲೆಯ ವಸ್ತುವಲ್ಲವೆ ಅದು? ನಿರಾಶೆ ಪ್ರಖರವಾಗಿ ಹರಡಿಕೊಂಡಿತು. ಮನೆಯಲ್ಲಿ ನನ್ನ ಅಪರಾಧ ವನ್ನು ತಿಳಿಸಿ ಒಂದು ಉಂಗುರ ಮಾಡಿಸಿಕೊಡಬೇಕೆಂದು ಆಲೋಚಿಸಿದೆ. ಆದರೆ ಅದು ಎಷ್ಟರ ಮಟ್ಟಿಗೆ ಸಾಧ್ಯ? ಈ ಸಂದೇಹವೂ ಇತ್ತು. ಕೊನೆಗೆ ದೇವರ ನೆನಪು ಬಂದಿತು! ಮುಂಬರಿವ ದಾರಿ ಕಾಣದವರಿಗೆ ದೇವರಲ್ಲದೆ ಇನ್ನಾರು ಮಾರ್ಗದರ್ಶಿಗಳಾಗಬಲ್ಲರು? ಅಂತೂ ಆ 'ಮಾರ್ಗದರ್ಶಿ'ಯನ್ನು ಅನನ್ಯ ಭಕ್ತಿಯಿಂದ ನೆರವು ನೀಡಲು ಪ್ರಾರ್ಥಿಸಿದೆ.

ಪ್ರಾರ್ಥನೆಯ ಫಲವಾಗಿ— ಜೇಬಿನಲ್ಲೇನಾದರೂ ಬಿದ್ದಿದೆಯೇನೋ ನೋಡೋಣವೆಂದು ಹುಡುಕಿದೆ. ಅಮಿತಾನಂದ ಉಕ್ಕಿಬಂತು. ದೇವರಿಗೆ ಕೃತಜ್ಞತೆಯನ್ನರ್ಪಿಸಿದೆವು. ಗಾಬರಿಯಿಂದ ಉಂಗುರ ಹೊಂಡಕ್ಕೆ ಬಿದ್ದಿತೆಂದು ಬಗೆದಿದ್ದೆ. ಆದರೆ ಅದು ಜೇಬಿಗೆ ಉರುಳಿತ್ತು. ಉಂಗುರದ ಪ್ರಕರಣ ಮುಗಿದು ನನ್ನ ಅಭ್ಯಾಸದ ಕಡೆಗೆ ಗಮನ ಹೋಯಿತು.

ಈಜುಬುರುಡೆಯೊಂದನ್ನು ಕಟ್ಟಿದರು. ಗೆಳೆಯರಿಗೆ ನಾನು ನೀರಿಗಿಳಿ ಯುವುದೇ ಸಂಭ್ರಮವೆನಿಸಿದಂತಿತ್ತು. ಅವರ ಕೋಲಾಹಲ, ನನಗೆ ಉತ್ಸಾಹ ತುಂಬುವುದರ ಬದಲು ಭೀತಿಯನ್ನು ತುಂಬಿತು. ಮನಸ್ಸಿಲ್ಲದ ಮನಸ್ಸಿನಿಂದ ನೀರಿಗೆ ಜಾರಿದೆ. ಜಾರಿದೆನೋ ಇಲ್ಲವೋ "ಹಂ . . . ಹಾಂ . . . ಹಂ . . .

ಹಾಂ . . .” ಎಂದು ಕಿರುಚತೊಡಗಿದೆ. ದಂಡೆಗೆ ಕರೆದೊಯ್ಯಲು ಇತರರನ್ನು ಕೂಗಿ ಕರೆದೆ. ಆದರೆ ಅವರು ಕರೆದೊಯ್ದುದ್ದು ದಂಡೆಗಲ್ಲ, ಹೊಂಡದ ಮಧ್ಯಕ್ಕೆ. ನನ್ನ ದಿಗ್ಭ್ರಮೆ, ಪೇಚಾಟ, ಹೆದರಿಕೆ ಕಂಡು ಸುತ್ತಲಿನವರ ಕೋಲಾಹಲ ಮತ್ತೂ ಹೆಚ್ಚಾಯಿತು. ಅನನುಭವ ನನ್ನ ಹೆದರಿಕೆಯನ್ನು ನೂರ್ಮಡಿ ಮಾಡಿತ್ತು. ನೀರ ಮೇಲಿದ್ದರೂ ಮುಳುಗಿದೆನೆಂದೇ ಭಾವಿಸಿಕೊಂಡಿದ್ದೆ. ಏನೋ ದುರ್ಘಟನೆ ನನಗಾಗುವುದೆಂದು ಭಯಗೊಂಡಿದ್ದೆ.

ಈ ಮಧ್ಯೆ ‘ಲಚ್ಚಿ’ ನನ್ನನ್ನು ಹಿಡಿದು ನೀರಿನೊಳಕ್ಕೆ ಅಮುಕಲು ಪ್ರಯತ್ನಪಟ್ಟ. ಅವನ ಹಿಡಿತ ತಪ್ಪಿಸಿಕೊಂಡು ದಡ ಸೇರಬೇಕೆಂಬ ನನ್ನ ಹಂಬಲ ಮಣ್ಣಾಯಿತು. ನಾಲ್ಕಾರು ಸಾರಿ ಮುಳುಗಿಸಿದ. ನೀರು ಕುಡಿದು ಕಿರುಚತೊಡಗಿದೆ. ಲಚ್ಚಿಗೆ ಇದೇ ಒಂದು ತಮಾಷೆಯಂತೆ ಕಂಡಿತು. ಹೌದು, ನಾನು ಪೇಚಾಡುವುದನ್ನು ಕಂಡರೆ ಅವನಿಗೆ ಸಂತಸ. ಇನ್ನೊಮ್ಮೆ ಆಳವಾಗಿ ಮುಳುಗಿಸಲು ನನ್ನನ್ನು ಅಮುಕಬಂದ. ಹಸಿದ ಹುಲಿ ಹಸುವಿನ ಮೇಲೆ ಬೀಳುವಂತೆ ಲಚ್ಚಿಯ ಮೇಲೆ ನೆಗೆದು ಅವನನ್ನೆ ಭದ್ರವಾಗಿ ಹಿಡಿದುಕೊಂಡೆ. ಲಚ್ಚಿ ನನ್ನ ಹಿಡಿತ ಬಿಡಿಸಿಕೊಳ್ಳಲು ಒದ್ದಾಡಿದ, ಹೆಣಗಾಡಿದ. ನಿಷ್ಫಲ ವಾಯಿತು ಅವನ ಶ್ರಮ. ಅದರ ಫಲವಾಗಿ ಇಬ್ಬರೂ ನೀರಿನಲ್ಲಿ ಮುಳುಗಿ ಹೋದೆವು. ಲಚ್ಚಿಗೆ ನನ್ನ ಹಿಡಿತ ಅಪರಿಮಿತ ಗಾಬರಿ ಮಾಡಿತ್ತು. ಅವನಿಗೆ ತುಂಬಾ ಭಯವೂ ಆಗಿತ್ತು. ಮುಳುಗಿದವರಲ್ಲಿ ನಾನೊಬ್ಬನೇ ಮೇಲೆ ಬಂದೆ. ಲಚ್ಚಿ ತಳ ಕಂಡಿದ್ದ. ನನ್ನನ್ನು ಅಜ್ಜ ದಂಡೆಗೆ ಕರೆದೊಯ್ದ. ಲಚ್ಚಿ ಮೇಲೇಳ ಲಿಲ್ಲ. ತುಂಬ ಹೊತ್ತು ನೀರಿನಲ್ಲಿ ಮುಳುಗುವುದನ್ನು ಅಭ್ಯಾಸ ಮಾಡು ತ್ತಿದ್ದಾನೆಂದು ಎಲ್ಲರೂ ಬಗೆದರು. ಆದರೆ ವಿಧಿ ಮತ್ತೊಂದನ್ನು ಬಗೆದಿತ್ತು !!

ಗೆಳೆಯರು ‘ಲಚ್ಚಿ’ಗಾಗಿ ನೀರಿನಲ್ಲಿ ಮುಳುಗಿ, ಲಚ್ಚಿಯನ್ನೂ ದಂಡೆಗೆ ತಂದರು. ಲಚ್ಚಿ ತುಂಬಾ ನೀರು ಕುಡಿದಿದ್ದ. ನೀರು ಅವನ ಉದರ ವನ್ನು ಆಕ್ರಮಿಸಿಕೊಂಡದ್ದಲ್ಲದೆ ಅವನ ‘ಜೀವ’ದ ತಾಣವನ್ನೆ ಅತಿಕ್ರಮಿಸಿ ಕೊಂಡಿತ್ತು. ನಾವು ಗೆಳೆಯರು ಕಂಡದ್ದು ಲಚ್ಚಿಯ ದೇಹವನ್ನು ಮಾತ್ರ, ಜೀವವನ್ನಲ್ಲ.

ಗೆಳೆಯನ ಸಾವಿಗಾಗಿ ಎಲ್ಲರೂ ಮಮ್ಮಲ ಮರುಗಿದರು. ನಾನಂತೂ ದಿಙ್ಮೂಢನಾದೆ. ಈ ದುರ್ಘಟನೆಗೆ ಸಾರಥಿ, ಕಾರಣಭೂತ, ಸೂತ್ರಧಾರಿ,

ನಾನಾದೆನಲ್ಲಾ ಎಂದು ಬಣ್ಣಿಸಲಸದಳವಾದ ನೋವನ್ನುಂಡೆ. ಗೆಳೆಯನ ಬಾಳ ಕೊನೆಗೆ ನನ್ನ ಅಪಾರ ಅಶ್ರುವಾಹಿನಿಯ ತರ್ಪಣವನ್ನಿತ್ತೆ.

ಇನ್ನು ಲಚ್ಚಿಯ ಮನೆಯವರ ಗೋಳು ಬಣ್ಣಿಸಲು ಬಂದೀತೆ? ನಮ್ಮ ಮನೆಯಲ್ಲಂತೂ ರಾದ್ಧಾಂತಕ್ಕಿಟ್ಟುಕೊಂಡಿತು. ಎಲ್ಲರೂ ನನ್ನನ್ನು ನಿಂದಿಸುವವರೆ. ಎಲ್ಲರೂ ನನ್ನ ಕಡೆಗೆ ವಕ್ರದೃಷ್ಟಿ ಬೀರುವವರೆ. ಕೈ ತೋರಿಸುವವರೆ. ಛೀಮಾರಿ ಮಾಡುವವರೆ. ಏನಾದರೇನು, ದೇಹಪಂಜರದಿಂದ ತಪ್ಪಿಸಿಕೊಂಡ ಪ್ರಾಣಪಕ್ಷಿ ಪುನಃ ಮರಳೀತೆ?

ದಹನಕ್ರಿಯೆ ನಡೆದಾಗ ನನ್ನ ಕಣ್ಣೀರ್ದೊರೆಯೇ ಹರಿಯಿತು. ಅಜ್ಜನೊಬ್ಬನ ವಿನಾ ಇನ್ನಾವ ಗೆಳೆಯನೂ ನನ್ನ ಮೇಲೆ ಸಹಾನುಭೂತಿ ತೋರಿಸಿ, ಸೌಜನ್ಯತೆಯನ್ನು ವ್ಯಕ್ತಪಡಿಸಿ, ಸಮಾಧಾನ ಹೇಳಲಿಲ್ಲ. ಅಜ್ಜನದೊಂದು ಜೀವ ಮಾತ್ರ ನನಗಾಗಿ ಮರುಕದಿಂದ ಮಿಡಿಯುತ್ತಿತ್ತು.

"ಈ ಕಿರುವಯಸ್ಸಿಗೇ ಒಂದು ಜೀವವನ್ನು ನುಂಗಿತು. ಇನ್ನೂ ಎಷ್ಟು ಜೀವಗಳನ್ನು ಬಲಿಕೊಳ್ಳಬೇಕೆಂದಿದೆಯೋ ಏನೋ?" ಕೋಪದಿಂದ ಯಾರೋ ಒಬ್ಬರು ಅನ್ನುತ್ತಿದ್ದರು. ಅದು ನನ್ನನ್ನು ಕುರಿತಾಗಿತ್ತು. ಕೇಳಲಾರದೆ ಕಿವಿ ಮುಚ್ಚಿಕೊಂಡೆ. ಕಣ್‌ಪನಿ ಎಡೆತಡೆಯಿಲ್ಲದೆ ಉರುಳುತ್ತಿದ್ದುವು. ಅಜ್ಜ ನನ್ನ ಮುಂಗುರುಳು ನೇವರಿಸುತ್ತಿದ್ದ.

ಸ್ಮಶಾನದ ಒಂದೆಡೆಯಲ್ಲಿ ನನ್ನ ತಂದೆ ಲಚ್ಚಿಯ ತಂದೆಯವರನ್ನು ನನ್ನ ತಪ್ಪಿಗಾಗಿ, ನನ್ನ ಹೊಣೆಗಾರಿಕೆಗಾಗಿ ಕ್ಷಮಾಯಾಚನೆ ಮಾಡುತ್ತಿದ್ದರು. ಮಧ್ಯೆ ಮಧ್ಯೆ ನನ್ನನ್ನು "ಈ ಚಂಡಾಲ ನನ್ನ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತು ನೋಡಿ. ಎಲ್ಲಾ ನನ್ನ ಕರ್ಮ" ಎಂದು ಬೈಯುತ್ತಿದ್ದರು.

ಲಚ್ಚಿಯ ತಂದೆ, ಕರುಣಾಹೃದಯಿ; ಮನೋದಾರ್ಢ್ಯ ಅಖಂಡವಾಗಿತ್ತು ಅವರಲ್ಲಿ. "ಪಾಪ, ನಿಮ್ಮ ಹುಡುಗ ಏನು ಮಾಡ್ತಾನೆ ಹೇಳಿ. ಹೊಸದು; ಭಯವಾಗಿದೆ; ತಬ್ಬಿಕೊಂಡಿದ್ದಾನೆ, ಸಹಜವೆ. ಗಾಬರಿಗೊಂಡು ಮುಳುಗಿದ ತಪ್ಪು ನಮ್ಮ ಲಚ್ಚೀದಲ್ಲವೆ? ಲಚ್ಚಿ ಬೇರೆ ಅಲ್ಲ, ನಿಮ್ಮ ಮಗ ಬೇರೆ ಅಲ್ಲ. ಆ ದೇವರು ಕೊಟ್ಟದ್ದಾಗಲಿ" ಎನ್ನುತ್ತಿದ್ದರು. ಅವರ ಆ ಸೌಜನ್ಯವಾಣಿ ನನ್ನ ದುಃಖಿತ ಹೃದಯಕ್ಕೆ ಚೇತನವನ್ನುಂಟುಮಾಡುತ್ತಿತ್ತು.

ಮತ್ತೊಂದೆಡೆಯಲ್ಲಿ, 'ವದನ್' ಬಿಕ್ಕುತ್ತಿದ್ದ; 'ಮಲ್ಲಿಗೆ'ಯ ಮೊಗ

ಬಾಡಿತ್ತು; 'ಗೋಪಿ' ಗಂಭೀರವಾಗಿದ್ದ. ತನ್ಮಧ್ಯೆ ಅಗ್ನಿದೇವ ತನ್ನ ಕೆನ್ನಾಲಗೆಗಳನ್ನು ಗಾಳಿಯ ನೆರವು ಕೊಂಡು ನಿಡಿದಾಗಿ ಚಾಚಿದನು. ಸಂಸ್ಕಾರವೆಲ್ಲ ಮುಗಿದ ಬಳಿಕ, ಅತ್ತೂ ಅತ್ತೂ ಅಳಲೂ ಚೈತನ್ಯ ಸಾಲದಾದಾಗ ಮನೆಗಳಿಗೆ ಹಿಂತಿರುಗಿದೆವು.

ಮುನ್ನಿನಂತೆ ನನ್ನೊಡನೆ ಗೆಳೆಯರು ಸಹಕರಿಸುತ್ತಿರಲಿಲ್ಲ—ಅಜ್ಜನೊಬ್ಬನ ವಿನಾ. ಗೆಳೆಯನ ವಿಯೋಗ, ಗೆಳೆಯರ ದೌರ್ಜನ್ಯ, ಅಸಹಕಾರ, ಜನನಿಂದೆ, ಪಾಪ ಭೀತಿ, ನನ್ನ ಹೃದಯವನ್ನು ಮಥನಮಾಡಿದವು. ಪ್ರಪಂಚವೇ ನವರೂಪ ತಾಳಿದಂತಾಯಿತು. ಬಾಳು ಬೇಸರವಾಯಿತು, ಬೇಡವಾಯಿತು. ಎಳೆವಯಸ್ಸು, ಮುಗ್ಧತೆ, ಅನನುಭವ, ನನ್ನಿಂದ ಒಂದು ಅಭೂತಪೂರ್ವ ಪ್ರತಿಜ್ಞೆಗೈಸಿದವು—ಅದೇ ಆತ್ಮಬಲಿ! ಗೆಳೆಯನ ಜೀವದಂತ್ಯಕ್ಕಾಗಿ ನನ್ನ ಜೀವದರ್ಪಣೆ. ಈ ಮನೋಭಾವ ನನ್ನಲ್ಲಿ ಸುಭದ್ರವಾಗಿ ನೆಲಸಿತು.

ಅಂತೆಯೇ ಒಂದಿರುಳು ಊಟವಾದನಂತರ ನಮ್ಮೂರ ಮುಂದಣ ಉದ್ಯಾನವನದೆಡೆಗೆ ಹೊರಟೆ. ಯಾರೋ ಚಪ್ಪಾಳೆ ತಟ್ಟಿದರು. ಹಿಂತಿರುಗಿ ನೋಡಲಿಲ್ಲ ನಾನು. ಮನಸ್ಸು ಅಷ್ಟು ಖಿನ್ನವಾಗಿತ್ತು. ನನ್ನ ನಿರ್ಲಕ್ಷ್ಯವನ್ನು ಕಂಡು ಚಪ್ಪಾಳೆ ತಟ್ಟಿದ ವ್ಯಕ್ತಿ ಹಿಂಬಾಲಿಸಿದಂತಾಯಿತು. ಅಷ್ಟರಲ್ಲಿ ಉದ್ಯಾನದೊಳಕ್ಕೆ ಹೊಕ್ಕು ವಿದ್ಯುದ್ದೀಪದಿಂದ ರಾಗರಂಜಿತವಾಗಿದ್ದ ಪುಷ್ಪ ಲತಾ ಸಸ್ಯ ಸಮೂಹವನ್ನು ನೋಡುತ್ತಿದ್ದೆ. ಹಿಂಬಾಲಿಸಿದ ವ್ಯಕ್ತಿ ನನ್ನ ಕಣ್ಣನ್ನು ಭದ್ರವಾಗಿ ಮುಚ್ಚಿತು. 'ಅಜ್ಜ' ಎಂದೆ, 'ಗೋಪಿ' ಎಂದೆ, ತೆಗೆಯಲಿಲ್ಲ. 'ಲಚ್ಚಿ' ಎನ್ನಲೇ ಎನ್ನಿಸಿತು. ಅವ್ಯಕ್ತ ಧ್ವನಿ ಪ್ರಶ್ನಿಸಿತು: "ಅದೆಂತು ಸಾಧ್ಯ?" ಎಂದು. ಆದ್ದರಿಂದ ಹೆಸರು ಕೂಗದೆ ಕೈ ಕಿತ್ತುಹಾಕಿ ಹಿಂತಿರುಗಿದೆ. ಲಚ್ಚಿ ನಗುತ್ತಾ ನಿಂತಿದ್ದ! ಮೈ ಬೆವರಿತು, ಮನಸ್ಸು ನಡುಗಿತು. ಸನಿಹದ ಮರದಲ್ಲಿ ವಾಸಮಾಡಿಕೊಂಡಿದ್ದ ಹಕ್ಕಿಗಳು ಭಯದಿಂದ ಹಾರುವಂತೆ ಚೀರಿ ಕೆಳಕ್ಕುರುಳಿದೆ.

* * * *

ಮನೆಯ ಬೆಕ್ಕು 'ರಮಾ' ತಲೆದಿಂಬಿನ ಬಳಿಗೆ ಬಂದು "ಮ್ಯಾಂವ್, ಮ್ಯಾಂವ್" ಎಂದು ಅರಚಿತು. "ಥುತ್" ಎನ್ನುತ್ತ ಸ್ವಿಚ್ ಹಾಕಿ ಬೆಕ್ಕನ್ನು ಓಡಿಸಿ ಬಂದು, ಪುನಃ ರಗ್ಗು ಹೊದ್ದೆ.

"ನೀರು ಕಾದಿದೆ ಏಳೋ" ಎಂದು ತಾಯಿ ಕೂಗಿದರು.

ಸ್ನಾನ, ಉಪಾಹಾರ, ಕಾಫಿ ಮುಗಿಸಿ 'ಲಚ್ಚಿ'ಯ ಮನೆಗೆ ಹೊರಟೆ. ಮನೆಯ ಆವರಣ ದಾಟಿದಾಗ ದೇವರ ಪೂಜೆಗೆ, ಹಚ್ಚ ಹಸುರಿನ ಚಪ್ಪರದಲ್ಲಿ ವಿಕಾಸಗೊಂಡು ಪರಿಮಳ ಬೀರುತ್ತಿದ್ದ ಮಲ್ಲಿಗೆ ಹೂವನ್ನು ಬಿಡಿಸುತ್ತಿದ್ದ. ನನ್ನ ನಗೆಹೂವು ಅಲ್ಲಿ ಆಗಲೇ ವಿಕಾಸಗೊಂಡು ಪರಿಮಳ ಬೀರಿತು. ಅಷ್ಟರಲ್ಲಿ ಎಲ್ಲ ಗೆಳೆಯರೂ ಬಂದು ಸೇರಿದರು. ನನ್ನ ಕನಸನ್ನು ಅರುಹಿದೆ. ಲಚ್ಚಿಯ ತಾಯಿ ಸಿಡಿಮಿಡಿಗೊಂಡು ಒಳಕ್ಕೆ ಹೋದರು. ನಾವೆಲ್ಲರೂ . . . ನಕ್ಕೂ ನಕ್ಕೂ . . .

"ನಿಮಗಿನ್ನೇನು ಕೆಲಸ? ಇಂಥಾ ಕನಸುಗಳನ್ನೆಲ್ಲಾ ಕಲ್ಪಿಸೋದು ಬಿಟ್ಟರೆ?" ಲಚ್ಚಿಯ ತಾಯಿ ಹುಸಿ ಮುನಿಸಿನಿಂದ ಕಾಫಿ ತೋರಿಸಿದರು.

ಅವರ ತಾಯಿ ನನಗೇ ಹೆಚ್ಚು ಕಾಫಿ ಕೊಟ್ಟಿದ್ದರು!

—ಬಿ. ಗುರುಶಾಂತ.

---

## ಮೇರುಗುರಿ

ಧಾರುಣಿಯ ನಡಿಗೆಯಲಿ ಮೇರುವಿನ ಗುರಿಯಿರಲಿ
ಮೇರುವನು ಮರೆತಂದೆ ನಾರಕಕೆ ದಾರಿ;
ದೂರವಾದೊಡದೇನು? ಕಾಲು ಕುಂಟಿರಲೇನು?
ಊರ ನೆನಪೇ ಬಲವೊ—ಮಂಕುತಿಮ್ಮ

ಮೇರು ಪರ್ವತಕಿಹುವು ನೂರೆಂಟು ಶಿಖರಗಳು
ದಾರಿ ನೂರಿರಬಹುದು, ನಿಲುವ ಕಡೆ ನೂರು;
ಸಾರು ನೀಂ ಯಾತ್ರಿಕರಿಗೆಲ್ಲ ಕೆಳೆಯಾಗಿರುತೆ;
ಮೇರು ಸಂಸ್ಕೃತಿಯೆ ಬಲ— ಮಂಕುತಿಮ್ಮ

# ಬಹುಮಾನ

(ಶ್ರೀಮತಿ ಸರೋಜಿನಿ ನಾಯಿಡು ಅವರ 'Guerdon' ಎಂಬುದು ಆಧಾರ)

ಬಯಲಿಗೆ ಬನಕೆ ನಿನ್ನಯ ಹಿರಿದಾನ
ಮಧುಮಾಸದ ಎಲೆ, ಹೂ ಚಿಗುರಿನ ಸನ್ಮಾನ;
ಕೊಕ್ಕರೆ ಗಿಡುಗಂಗಳಿಗೆ ಇತ್ತಿಹೆ ನೀ
ಹೆಮ್ಮೆಗೆ ಹರಡುವ ರೆಕ್ಕೆಗಳ;
ಸರುವರು ಮೆಚ್ಚುವ ಲಾವಣ್ಯವ ಕಿರುಬಗೆ
ಮುದ್ದು ಪಾರಿವಕೆ ಎಳವಣ್ಣದ ಚೆಲುವ;
ಎನಗೋ ಎನ್ನಯ ಪ್ರಿಯಗುರುವೇ
ದಯೆಪಾಲಿಸು ಪ್ರೇಮದ ಸೌಖ್ಯವನು.

ನೀರೊಳು ಆಳಕೆ ಮುಳುಗುವಾತನಿಗೆ
ನೀನೀಯುವೆ ಕಡಲಿನ ರತ್ನಗಳ;
ಮದುವಣಿಗನ ತೆರೆ ಚಂಚಲ ನೇತ್ರಕೆ
ವಧುವಿನ ಮೊಗದಿನಿನೋಟವನು;
ಕನಸುಗಾರನಿಗೆ ನಿನ್ನಯ ಉಡುಗೊರೆ
ತಾರುಣ್ಯದ ಸವಿಗನಸುಗಳು;
ಎನಗೋ ಎನ್ನಯ ಪ್ರಿಯಗುರುವೇ
ದಯೆಪಾಲಿಸು ಸತ್ಯದ ಸೌಖ್ಯವನು.

ಮತಬೋಧಕರಿಗೆ ಪ್ರವಾದಿಗಳಿಗೆ
ಅವರವೆ ಶ್ರದ್ಧೆಯ ಹರುಷವನು;
ದೊರೆಗೆ, ಸುತ್ತಲಿನ ಪರಿವಾರಕ್ಕೆ
ಎಸಕಕೆ ಸಲ್ಲುವ ಕೀರ್ತಿಯನು;
ಸೋತವನಿಗೆ ನೀ ಶಾಂತಿಯನೀಯುವೆ
ಬಲವಂತಗೆ ಅತಿಶಯ ಭರವಸೆಯ;
ಎನಗೋ ಎನ್ನಯ ಪ್ರಿಯಗುರುವೇ
ದಯೆಪಾಲಿಸು ಗಾನದ ಸೌಖ್ಯವನು.

—ಎಂ. ಆರ್. ಸಿ. ನಾಗರಾಜನ್.

# "ಹಾಳು ಬಿದ್ದ ಹಳ್ಳಿ"

## 'The Deserted Village'

ಈ ಕವನದ ಕವಿ "ಆಲಿವರ್ ಗೋಲ್ಡ್ ಸ್ಮಿತ್" ಎಂಬವನು. ಈತನು ಇಂಗ್ಲಿಷ್ ಭಾಷೆಯ ಹಿರಿಯ ಕವಿ. ಈತನ ಕವನಗಳು ಬಹಳ ಸ್ವಾರಸ್ಯವಾಗಿವೆ. ಜನತೆಯ ಮೇಲೆ ಬಹಳ ಪರಿಣಾಮವನ್ನು ಉಂಟುಮಾಡುತ್ತವೆ. ಈತ ಕಾದಂಬರಿಕಾರನೂ ಅಹುದು.

ಈ ಕವಿಯ ಕಾಲದಲ್ಲಿ, ಅಂದರೆ ಸುಮಾರು ಕ್ರಿ. ಶ. ೧೭೦೦ರಲ್ಲಿ ಐರ್ಲಂಡ್ ದೇಶದ ಪರಿಸ್ಥಿತಿಯನ್ನೂ, ಅದಕ್ಕೆ ಕಾರಣಗಳನ್ನೂ, ಜೊತೆಗೆ ಸಮಾಜದಲ್ಲಿ ಇರುವ ಹುಳುಕು ತಳುಕುಗಳನ್ನೂ ಜನತೆಯ ಕಣ್ಣುಮುಂದೆ ಎದ್ದು ಕಾಣುವಂತೆ ಈ ಕವನವನ್ನು ರಚಿಸಿದ್ದಾನೆ. ಮುಖ್ಯವಾಗಿ ಆಗಿನ ಸಾಮಾಜಿಕ ಸ್ಥಿತಿಯನ್ನು ಕುರಿತು, ಧನವಂತರಿಂದ ಬಡವರಿಗೆ ಆಗಿದ್ದ ಅನ್ಯಾಯವನ್ನು ಕುರಿತು 'ಡೆಸೆರ್‌ಟೆಡ್ ವಿಲೆಜ್' ಎಂಬ ಈ ಕವನದಲ್ಲಿ ಕವಿ ಚೆನ್ನಾಗಿ ನಿರೂಪಿಸಿದ್ದಾನೆ. ಬಡವರು ಶ್ರೀಮಂತರು ಎಂಬ ಎರಡು ಜಾತಿಗಳಿಗೆ ಸಂಬಂಧವನ್ನು ಕಲ್ಪಿಸಿ, ಧನವಂತರಿಂದ ಬಡವರು ಹಾಳಾಗದಂತೆ ನೋಡಿಕೊಳ್ಳಲು ಸಮಾಜವನ್ನು ಎಚ್ಚರಿಸಿದ್ದಾನೆ. ಸಾವಿರಾರು ಜನ ಬಡಪಾಯಿ ರೈತರ ಮೇಲೆ ಒಂದೆರಡು ಜನ ಶ್ರೀಮಂತರು ಎದ್ದು ಬಡವರನ್ನು ಬದಿಗೊತ್ತಿ ತಾವು ಸ್ವರ್ಗ ಸುಖವನ್ನು ಅನುಭವಿಸುತ್ತಾರೆ, ಎಂಬುದನ್ನು ಕವಿ ಬಹಳ ವ್ಯಸನದಿಂದ ಹೇಳಿದ್ದಾನೆ.

ಈ ಕವನದಲ್ಲಿ ಸ್ವಲ್ಪ ಹಣದಾಸೆಗೆ ಒಳಗಾದ ಹಳ್ಳಿಯ ಜನ ಸ್ವರ್ಗದಂತಿದ್ದ ತಮ್ಮ ಹಳ್ಳಿಯನ್ನು ಬಿಟ್ಟು ಓಡಿ ಹೋಗುತ್ತಾರೆ. ನೂರಾರು ಜನ ಬಡ ರೈತರನ್ನು ಓಡಿಸಿ ಅವರ ಸುಖವನ್ನು ಹಾಳುಮಾಡಿ ಕೇವಲ ಒಬ್ಬ ಶ್ರೀಮಂತ ತನ್ನ ಪ್ರಭುತ್ವವನ್ನು ನಿರ್ಮಿಸುತ್ತಾನೆ. ಬಹುಮುಂದಿಯ ಸುಖ ಸಂಪತ್ತುಗಳು ಮಣ್ಣುಪಾಲಾಗುತ್ತವೆ. ಈ ಸನ್ನಿವೇಶ ಎಂಥವರಿಗಾದರೂ ಹೃದಯ ಕರಗುವಂತಿದೆ.

ಈ ಕವಿ "ಆಬರ್ನ್" ಎಂಬ ಹಳ್ಳಿಯಲ್ಲಿ ಹುಟ್ಟಿದವನು. ಆ ಹಳ್ಳಿ ಸುಖ ಸಂಪತ್ತಿನ ಕಣಜವಾಗಿತ್ತು. ಕೃತ್ರಿಮವನ್ನು ಅರಿಯದ ಆ ಹಳ್ಳಿಯ ಜನರು

ಸ್ವರ್ಗಸುಖವನ್ನು ಕಾಣುತ್ತಿದ್ದರು. ಅಂಥ ಸುಖವನ್ನು ಅನುಭವಿಸುವುದರಲ್ಲಿ ಈ ಕವಿಯೂ ಒಬ್ಬನಾಗಿದ್ದನು. ಈ ಕವಿ ಜ್ಞಾನಸಂಪಾದನೆಗಾಗಿ ದೊಡ್ಡ, ಜನಭರಿತವಾದ ಪಟ್ಟಣಗಳಿಗೆ ಹೋಗಿ ಬಹಳ ದಿನಗಳ ಬಳಿಕ ತನ್ನ ಹಳ್ಳಿಯನ್ನು ನೋಡಲು ಬರುತ್ತಾನೆ. ಗಂಧರ್ವರ ಸೀಮೆಯಾಗಿದ್ದ ಆಬರ್ನ್ ಈಗ ಹಾಳು ಬಿದ್ದಿದೆ. ಇದರಿಂದ ಕವಿಗೆ ಬಹಳ ದುಃಖವಾಗುತ್ತದೆ.

ತನ್ನ ಬಾಲ್ಯದಲ್ಲಿ ಹಳ್ಳಿ ಹೇಗಿತ್ತು ಎಂಬುದನ್ನು ಕವಿ ಕವನದ ಪ್ರಾರಂಭದಲ್ಲಿ ಹೇಳುತ್ತಾನೆ.

ಆಗ್ಗೆ ಸುತ್ತಮುತ್ತಲೂ ಇದ್ದ ಹಳ್ಳಿಗಳೆಲ್ಲಕ್ಕಿಂತ "ಆಬರ್ನ್" ಬಹು ಸುಂದರವಾಗಿತ್ತು. ದುಡಿದು ಬಂದ ರೈತರ ಸುಖ ಸಂತೋಷಗಳ ನೆಲೆವೀಡಾಗಿತ್ತು. ಜನ ದೃಢಕಾಯರಾಗಿದ್ದರು. ವಸಂತಕಾಲದ ಒಲುಮೆ ಮೊದಲು ಈ ಹಳ್ಳಿಯ ಕಡೆಗೆ ಬಂದು ಮುಂದೆ ಹೋಗುತ್ತಿತ್ತು. ಇಂಥ ಹಳ್ಳಿಯಲ್ಲಿದ್ದ ಈ ಕವಿ ಬಾಲ್ಯದ ನೆನಪನ್ನು ತಂದುಕೊಳ್ಳುತ್ತಾನೆ. ತಾನು ಹುಡುಗನಾಗಿದ್ದಾಗ ಆಟಕ್ಕಾಗಿ ಬಂದು ಕುಳಿತುಕೊಳ್ಳುತ್ತಿದ್ದ ಸ್ಥಳವನ್ನು ನೋಡುತ್ತಾನೆ. ಸುತ್ತಲೂ ಹಸುರು ಹುಲ್ಲು ಬೆಳೆದಿರುತ್ತಿದ್ದ ಆ ವನದಲ್ಲಿ ಎಷ್ಟು ಸಲ ತಿರುಗಿದರೂ ತನಗೆ ತೃಪ್ತಿಯಾಗುತ್ತಿರಲಿಲ್ಲ. ಅಲ್ಲಿನ ಪ್ರಕೃತಿ ಸೌಂದರ್ಯವನ್ನು ನೋಡಿ ಎಷ್ಟು ನಲಿದರೂ ಮನಸ್ಸಿಗೆ ತಣಿವಿಲ್ಲ.

ಬಿತ್ತಿದ್ದ ಹೊಲ, ಹರಿಯುತ್ತಿದ್ದ ಹೊಳೆ, ಪುಟ್ಟ ಗುಡಿಸಲು, ಸುತ್ತುತ್ತಿದ್ದ ಗಿರಣಿ, ಹತ್ತಿರದ ಗಿರಿಯ ತುದಿಯಲ್ಲಿ ಕಾಣುತ್ತಿದ್ದ ಒಪ್ಪಾದ ದೇಗುಲ, ವೃದ್ಧರು ಮಾತಾಡಲಿಕ್ಕೂ ನಲ್ಲನಲ್ಲೆಯರು ಪಿಸು ಮಾತಾಡಲಿಕ್ಕೂ ಬಳ್ಳಿಗಳ ನೆರಳಿನಲ್ಲಿ ಮಾಡಿದ ವಿಹಾರಸ್ಥಳ, ದುಡಿದು ವಿಶ್ರಾಂತಿಗಾಗಿ ಜನ ಬಂದು ವಿಶ್ರಮಿಸಿಕೊಳ್ಳಲು ಕುಳಿತುಕೊಳ್ಳುತ್ತಿದ್ದ ಸ್ಥಳ—ಇವುಗಳನ್ನು ನೋಡಿ ಕವಿಗೆ ಬಹಳ ವ್ಯಸನವಾಗುತ್ತದೆ. ಆ ಸ್ಥಳ ಬಹಳ ರಮ್ಯವಾಗಿತ್ತು. ಅಲ್ಲಿಗೆ ಹುಡುಗರೂ, ಹುಡುಗಿಯರೂ, ವೃದ್ಧರೂ ಎಲ್ಲರೂ ಬರುತ್ತಿದ್ದರು. ಆ ನೋಟ ನೋಡಲು, ಅಲ್ಲಿ ಆಟವಾಡಲು ಪುಣ್ಯ ಪಡೆದು ಬಂದಿರಬೇಕು ಎನ್ನಿಸುತ್ತಿತ್ತು ಕವಿಗೆ. ಈ ರೀತಿ ರಮಣೀಯವಾಗಿದ್ದ ನಾಡು ಈದಿನ ಹಾಳು ಸುರಿಯುತ್ತಿದೆ.

ಅಲ್ಲಿದ್ದ ಗುಡಿಸಿಲು ಹಾಳಾಗಿದೆ, ಹರಿಯುತ್ತಿದ್ದ ಹೊಳೆ ಒಣಗಿದೆ, ಸಂತೋಷದಿಂದ ನಲಿಯುತ್ತಿದ್ದ ಜನ ಓಡಿ ಹೋಗಿದ್ದಾರೆ. ನೂರಾರು ಜನ

ನಲಿದು ದುಡಿದು ಸಂತೋಷವಾಗಿ ಸಂಸಾರ ಮಾಡುತ್ತಿದ್ದ ಈ ಹಳ್ಳಿಯಲ್ಲಿ ಈಗ ಒಬ್ಬ ಪ್ರಜಾವಂಚಕನ ಕೈ ಕಾಣುತ್ತಿದೆ. ಈ ಹಣವಂತ ಹಣದ ಆಸೆಯನ್ನು ತೋರಿಸಿ ಅರಿಯದ ಹಳ್ಳಿ ಜನರನ್ನು ಮೋಸಗೊಳಿಸಿ ಅಟ್ಟಿದ್ದಾನೆ. ಇದನ್ನು ಕಂಡ ಕವಿಗೆ ಹೃದಯ ಭಾರವಾಗುತ್ತದೆ. ಕಣ್ಣಲ್ಲಿ ನೀರೂರುತ್ತದೆ.

ಹೊಲಗಳಲ್ಲಿ ಬೆಳೆ ಇಲ್ಲ. ಎಲ್ಲಿ ನೋಡಿದರೂ ದಾರಿದ್ರ್ಯ ತುಂಬಿದೆ. ಈ ಒಂದೆರಡು ಕಡೆ ವಾಣಿಜ್ಯದ ಫಲವಾಗಿ ಧನ ಸೇರಿದೆ, ಆದರೆ ಜನ ಹಾಳಾಗಿದ್ದಾರೆ. ಒಂದು ಮಾತು ಒಬ್ಬನನ್ನು ರಾಜನನ್ನಾಗಿ ಮಾಡಬಹುದು, ಸಾರ್ವಭೌಮನನ್ನಾಗಿ ಮಾಡಬಹುದು. ಅದೇ ಮಾತು ಅವನನ್ನು ಪಾತಾಳಕ್ಕೆ ತುಳಿಯಬಹುದು. ಆದರೆ ದೇಶದ ಕಂಭಗಳಂತಿದ್ದ ರೈತರು ಹಾಳಾದರೆ ಹಳ್ಳಿಯನ್ನು ಉದ್ಧರಿಸಲು ಸಾಧ್ಯವಿಲ್ಲ—ಎಂದು ಕವಿ ವ್ಯಸನದಿಂದ ಹೇಳುತ್ತಾನೆ. ಆ ಜನ ಈ ಹಳ್ಳಿಯಲ್ಲಿ ಇರುವಾಗ್ಗೆ ದುಡಿದು ಬೇಕಾದಷ್ಟು ಧಾನ್ಯ ಬೆಳೆಯುತ್ತಿದ್ದರು, ಹೊಟ್ಟೆ ತುಂಬ ತಿನ್ನುತ್ತಿದ್ದರು, ಸುಖವಾಗಿರುತ್ತಿದ್ದರು. ಆಡಂಬರದ ಜೀವನವನ್ನು ಅವರು ಕಾಣರು.

ಕಾಲ ಬದಲಾಯಿಸಿದೆ. ಕೇವಲ ಸ್ವಲ್ಪ ಭಾಗದಲ್ಲಿ ಮಾತ್ರ ಧಾನ್ಯ ಬೆಳೆದಿದೆ. ಮಿಕ್ಕ ಭಾಗ ಒಣಗಿಹೋಗಿದೆ. ಎಲ್ಲೆಲ್ಲೂ ಹಾಳಾದ ಕೊಂಪೆಗಳು ಕಾಣುತ್ತಿವೆ. ಸಾವಿರಾರು ಜನ ಸುಖವಾಗಿರಬೇಕಾಗಿದ್ದ ಸ್ಥಳದಲ್ಲಿ ಕೇವಲ ಒಬ್ಬ ಶ್ರೀಮಂತ ಸುಖವಾಗಿದ್ದಾನೆ. ಈಗ ಜೀವನ ಆಡಂಬರಭರಿತವಾಗಿರಬಹುದು. ಆದರೆ ಈ ಜೀವನದಲ್ಲಿ ವೈಮನಸ್ಯ ಹೆಚ್ಚು.

ಇದನ್ನು ಯೋಚನೆಮಾಡಿದ ಕವಿಗೆ ತಡೆಯಲಾರದ ಯಾತನೆಯಾಗುತ್ತದೆ. ದೇಶ ತಿರುಗಲು ಹೋಗಿದ್ದ ಇವನು ದೊಡ್ಡ ಪಟ್ಟಣದಲ್ಲಿದ್ದ, ದೊಡ್ಡವರ ಜೊತೆಯಲ್ಲಿದ್ದ, ಜ್ಞಾನ ಸಂಪಾದಿಸಿದ್ದ. ಆದರೂ ಇವನಿಗೆ ಮನಶ್ಶಾಂತಿ ಮಾತ್ರ ದೊರೆತಿರಲಿಲ್ಲ. ತನ್ನ ಹಳ್ಳಿಯಲ್ಲಿ ತಮ್ಮ ಜನಗಳ ನಡುವೆ ತನಗೆ ಶಾಂತಿ ಸಿಕ್ಕುತ್ತದೆ, ಅಲ್ಲಿ ತನ್ನ ಕಡೆಗಾಲವನ್ನು ಕಳೆಯಬಹುದು, ತಾನು ತಿಳಿದಿರುವ ಜ್ಞಾನವನ್ನು ಜನರಿಗೆ ತಿಳಿಸಬಹುದು, ಕೃತ್ರಿಮ ಅರಿಯದ ಆ ಜನರ ಮಧ್ಯೆ ಸುಖ ಜೀವನವನ್ನು ನಡಸಬಹುದು, ಎಂದು ನಿರೀಕ್ಷಿಸಿ ತನ್ನ ಹಳ್ಳಿಗೆ ಹಿಂದಿರುಗಿದ ಈ ಮನುಷ್ಯನಿಗೆ, ಈ ಹಾಳಾದ ಕೊಂಪೆಯನ್ನು ಕಂಡು ಮನಸ್ಸು ಕಲಕಿತು. ಇಂಥ ಸ್ಥಳದಲ್ಲಿ ಶಾಂತಿಯ ಚಿಹ್ನೆ ಇಲ್ಲ. ಬಡವನೊಬ್ಬ ಭಿಕ್ಷೆ ಬೇಡಲು ಬಲಗಾರನ

ಮನೆಯತ್ತ ಹೋದರೆ ಬಾಗಿಲು ಕಾಯುವ ಚಾರ ಅವನನ್ನು ನಿರ್ದಾಕ್ಷಿಣ್ಯ ದಿಂದ ದೂಡಿಬಿಡುತ್ತಾನೆ. ಇಂಥ ಸ್ಥಳದಲ್ಲಿ ನೊಂದ ಮನಸ್ಸಿಗೆ ಶಾಂತಿಯೆಲ್ಲಿ? ಪ್ರಪಂಚ ಹಬ್ಬುತ್ತಿರುವುದು ಒಂದು ದಿನ ತಗ್ಗಲು ಎಂದುಕೊಂಡು ಕವಿ ಪುನಃ ಸಂಜೆಯ ಹೊತ್ತು ಆ ಹಳ್ಳಿಯಲ್ಲಿ ಆಗುತ್ತಿದ್ದ ನಾನಾ ವಿಧದ ಧ್ವನಿಗಳನ್ನು ಜ್ಞಾಪಿಸಿಕೊಂಡು ಹಂಬಲಿಸುತ್ತಾನೆ.

ಅಲ್ಲಿ ಸಂಜೆಯ ಮಧುರಧ್ವನಿ, ಬೆಟ್ಟಗುಡ್ಡಗಳಿಂದ ಬರುತ್ತಿದ್ದ ಜನಗಳ ಗಲಭೆ, ಕವಿ ಅಲ್ಲಲ್ಲಿ ನಿಂತು, ಈ ವಿಧದ ವರ್ಣನೆಗಳನ್ನು ಆಲಿಸುತ್ತಿದ್ದ. ಗೊಲ್ಲಿತಿಯ ಗಾನಕ್ಕೆ ಒಲಿದು ಬಹು ಮಧುರವಾಗಿ ಕೇಳುತ್ತಿದ್ದ ಹಳ್ಳಿಯ ಯುವಕನ ಧ್ವನಿ, ಸಂಜೆ ದನಗಳು ತಮ್ಮ ಕರುಗಳನ್ನು ಕೂಡಲು ಮಾಡಿಕೊಂಡು ಬರುತ್ತಿದ್ದ ಗಂಭೀರ ಧ್ವನಿ, ಕೊಳದಿಂದ ಬರುತ್ತಿದ್ದ ಬಾತುಗಳ ಕಲಕಲ ಧ್ವನಿ, ಆಗ ತಾನೆ ಶಾಲೆ ಬಿಟ್ಟ ಮಕ್ಕಳ ಕಿರಿಚು, ಕಾವಲು ನಾಯಿಯ ಬ್ಬೊ ಬ್ಬೊ ಬಗುಳಿಕೆ, ಗಾಳಿಯ ಸಿಳ್ಳು ಧ್ವನಿಯನ್ನು ಭೇದಿಸಿ ಬರುತ್ತಿತ್ತು. ಹಳ್ಳಿಯ ಜನದ ನಿಷ್ಕಲ್ಮಷವಾದ ನಗು, ಇವೆಲ್ಲದರಲ್ಲೂ ತೂರಿ ಬರುತ್ತಿದ್ದ ಬುಲ್ ಬುಲ್ ಪಕ್ಷಿಯ ಮಧುರ ಗಾನ ಇವೆಲ್ಲವೂ ತುಂಬ ಮನೋಹರವಾಗಿ ಕೇಳಿಬರುತ್ತಿದ್ದವು. ಈಗ ಆ ಯಾವ ಶಬ್ದವೂ ಇಲ್ಲ, ಸಂತೋಷದ ಸನ್ನಿವೇಶವಿಲ್ಲ, ನಿಶ್ಶಬ್ದ. ಈಗ ಉಳಿದಿರುವ ವ್ಯಕ್ತಿ ಎಂದರೆ, ಈ ಹಳೆಕಥೆಯನ್ನು ಹೇಳಲು ಒಬ್ಬ ಮುದುಕಿ ಮಾತ್ರ.

ಈ ರೀತಿ ತನ್ನ ಹಳ್ಳಿಯ ಚಿತ್ರವನ್ನು ಚಿತ್ರಿಸಿಕೊಂಡು, ಅಲ್ಲಿನ ಕೆಲವು ಗಣ್ಯ ವ್ಯಕ್ತಿಗಳ ಗುಣಶೀಲಗಳನ್ನು ಜ್ಞಾಪಿಸಿಕೊಂಡು, ಕೊಂಡಾಡುತ್ತಾನೆ, ಕವಿ. ಈ ವ್ಯಕ್ತಿಗಳ ಪೈಕಿ ಆ ಹಳ್ಳಿಯ ಗುರು (ಪ್ರೀಚರ್) ಒಬ್ಬ.

ಸ್ವಲ್ಪ ದೂರದಲ್ಲಿ ಒಂದು ತೋಟ, ಆ ತೋಟದಲ್ಲಿತ್ತು ಗುರುವಿನ ಮನೆ. ಆ ಮನೆ ಪ್ರಕೃತಿದೇವಿಯ ಮಡಿಲಲ್ಲಿ ವಾಸಮಾಡುವಂತಿತ್ತು. ಆ ಗುರು ವರ್ಷಕ್ಕೆ ಕೇವಲ ನಲವತ್ತು ಪೌಂಡ್ ವರಮಾನದಲ್ಲಿ ಸುಖಜೀವನವನ್ನು ಸಾಗಿಸುತ್ತಿದ್ದ. ಸ್ವಾರ್ಥತೆಯ ಸುಳಿವೇ ಆತನಲ್ಲಿ ಬಂದಿರಲಿಲ್ಲ. ಜನಗಳಿಗೆ ಆತನಲ್ಲಿ ಬಹಳ ಗೌರವ, ವಿಶ್ವಾಸ ಮತ್ತು ಪ್ರೀತಿ. ತಾನು ಅಧಿಕಾರ ಪಡೆಯಲು ಎಂದಿಗೂ ಸುತ್ತಿದವನಲ್ಲ. ಕಾಲಕ್ಕೆ ತಕ್ಕಂತೆ ಜನಗಳಿಗೆ ಬೇಕಾಗುವ ಬೋಧೆಯನ್ನು ಹೇಳುತ್ತಿದ್ದ ಆತನು ತುಂಬ ದಯಾಳು. ತಿರುಗಿ ಬಂದ ತಿರುಕರು

ಆತನ ಅತಿಥಿಗಳು. ಕೈಕಾಲು ಮುರಿದು ಆಸರೆ ಸಿಕ್ಕದೆ ಅರಸಿ ಬರುತ್ತಿದ್ದ ಸೈನಿಕನು ತನ್ನ ನೋವನ್ನು ಮರೆಯಲು ಬಂದು ಆ ಗುರುಮನೆಯಲ್ಲಿ ಇಳಿದುಕೊಳ್ಳುತ್ತಿದ್ದ. ಆ ಗುರುಮನೆಯಲ್ಲಿ ಅವರೆಲ್ಲರಿಗೂ ತಿನ್ನಲು ಸಿಕ್ಕುತ್ತಿತ್ತು. ಹೀಗೆ ಗುರುವಿನ ಮನೆ ನಿರ್ಭಾಗ್ಯಜನರಿಗೆ ಒಂದು ಧರ್ಮಛತ್ರದಂತೆ ಇತ್ತು. ದುಃಖ ವ್ಯಸನಗಳಿಂದ ಬಂದ ಜನರು ಗುರುವನ್ನು ಆಶ್ರಯಿಸುತ್ತಿದ್ದರು. ಗುರು ಅವರನ್ನು ಸಂತೈಸಿ, ಅವರ ದುಃಖಗಳನ್ನು ದೂರಮಾಡಿ, ಅವರು ಸಂತೋಷವಾಗಿರಲು ತಕ್ಕ ಉಪಚಾರಗಳನ್ನು ಮಾಡುವುದರಲ್ಲಿ ಹಿರಿಮೆ ಪಡೆದಿದ್ದ. ಸಾಯುತ್ತಿರುವ ಮನುಷ್ಯನ ಹಾಸಿಗೆಯ ಹತ್ತಿರ ಕುಳಿತು ಅವನಿಗೆ ಧರ್ಮಬೋಧೆಮಾಡುತ್ತಿದ್ದ. ಆತನ ಶಾಂತವಾದ ಮುಖವನ್ನೂ ಧೈರ್ಯದ ವಾಣಿಯನ್ನೂ ಕೇಳಿದ ಮನುಷ್ಯ ನಿಶ್ಚಿಂತೆಯಾಗಿ ಪ್ರಾಣ ಬಿಡುತ್ತಿದ್ದ. ಆತನ ಮುಖವನ್ನು ನೋಡಿದರೆ ದೇವರ ಮುಖವನ್ನು ಕಂಡಂತಾಗುತ್ತಿತ್ತು.

ದೇವಾಲಯದಲ್ಲಿ ಜನಗಳ ಮಧ್ಯೆ ಪ್ರಾರ್ಥನಾಸಮಯದಲ್ಲಿ ಆತನ ಮುಖ ಗಂಭೀರವಾಗಿ ಕಾಣುತ್ತಿತ್ತು. ಪರಿಹಾಸಕ್ಕಾಗಿ ಯಾರಾದರೂ ದೇವಾಲಯಕ್ಕೆ ಬಂದಿದ್ದರೆ ಅಲ್ಲಿನ ಗಂಭೀರ ದೃಶ್ಯ ಅವರನ್ನು ಪ್ರಾರ್ಥನೆಗೆ ಎಳೆಯುತ್ತಿತ್ತು. ಆ ಧರ್ಮಜೀವಿಯ ಮುಗುಳ್ನಗೆ ಮಕ್ಕಳನ್ನು ಸಹ ಆಕರ್ಷಿಸುತ್ತಿತ್ತು. ಆ ಗುರು ಬಾಹ್ಯಪ್ರಪಂಚದ ಸುಖದುಃಖಗಳನ್ನು ಕಣ್ಣಾರೆ ಕಾಣುತ್ತಿದ್ದರೂ ಆತನ ಆತ್ಮ ಮಾತ್ರ ದೇವರ ಕಡೆ ಇರುತ್ತಿತ್ತು. ಈ ಕಷ್ಟ ಸುಖಗಳು ಆತನ ಮೇಲೆ ಯಾವ ಪರಿಣಾಮವನ್ನೂ ಮಾಡುತ್ತಿರಲಿಲ್ಲ. ಆತ ಋಷಿ.

ಹೀಗೆ ತನ್ನ ಗುರುವನ್ನು ಜ್ಞಾಪಿಸಿಕೊಂಡು ವ್ಯಸನಪಟ್ಟು, ಕವಿ ತನ್ನ ಉಪಾಧ್ಯಾಯನನ್ನು ಜ್ಞಾಪಿಸಿಕೊಳ್ಳುತ್ತಾನೆ.

ಉಪಾಧ್ಯಾಯನು ಗುರುವಿನಂತೆಯೇ ದೇವರಂತಹ ಮನುಷ್ಯ. ಚಿಕ್ಕ ಪಾಠಶಾಲೆಯೊಂದರಲ್ಲಿ ಮಕ್ಕಳಿಗೆ ಪಾಠ ಹೇಳುತ್ತಿದ್ದ. ಆ ಪಾಠಶಾಲೆಯು ಸಹ ಪ್ರಕೃತಿದೇವಿಯ ಸನ್ನಿಧಿಯಲ್ಲಿ ಇದ್ದಂತೆ ಕಾಣುತ್ತಿತ್ತು. ಇವನನ್ನು ಕಂಡರೆ ಹುಡುಗರಿಗೆ ಭಯ. ಬೆಳಗ್ಗೆ ಶಾಲೆಗೆ ಬರುತ್ತಲೆ ಉಪಾಧ್ಯಾಯರ ಮುಖವನ್ನು ನೋಡಿದರೆ ಆ ದಿನದ ಪರಿಣಾಮವೆಲ್ಲವನ್ನೂ ಹುಡುಗರು ತಿಳಿದುಕೊಳ್ಳುತ್ತಿದ್ದರು. ಉಪಾಧ್ಯಾಯ ನಕ್ಕು ನಗಿಸುತ್ತಿದ್ದನಾದರೂ ಹುಡುಗರು ಮಾತ್ರ ಮನಃಪೂರ್ವಕವಾಗಿ ನಗುತ್ತಿರಲಿಲ್ಲ. ಅಷ್ಟು ಭಯ ಅವರಿಗೆ.

ಆದರೂ ವ್ಯಕ್ತಿ ದಯಾಳು. ಹೃದಯ ನಿಷ್ಕಲ್ಮಷ. ಹಳ್ಳಿಯ ಜನರಿಗೆ ಅವನನ್ನು ಕಂಡರೆ ಬಹಳ ಮರ್ಯಾದೆ, ಹಾಗೂ ಆಶ್ಚರ್ಯ. ಉಪಾಧ್ಯಾಯ ನಿಗೆ ಬರೆಯಲು ಬರುತ್ತೆ, ಓದಲು ಬರುತ್ತೆ, ಲೆಕ್ಕ ಹಾಕಲು ಬರುತ್ತೆ, ಹೊಲ ಗದ್ದೆಗಳನ್ನು ಅಳತೆ ಮಾಡಲು ಬರುತ್ತೆ, ವಾದದಲ್ಲಂತೂ ಸೋಲುವಂತೆಯೆ ಇಲ್ಲ. ದೊಡ್ಡ ದೊಡ್ಡ ಮಾತುಗಳು; ಸರಪಣಿಯಂತೆ ಉದ್ದವಾಗಿ ಹೆಣೆದ ದೊಡ್ಡ ದೊಡ್ಡ ವಾಕ್ಯಗಳು. ಇದನ್ನು ಕೇಳುತ್ತಿದ್ದ ಹಳ್ಳಿಯ ಜನರಿಗೆ ದಿಗ್ಭ್ರಮೆಯಾಗುತ್ತಿತ್ತು.

ಆ ಎಲ್ಲ ಈಗ ನಾಶವಾಗಿದೆ, ಯಾರೂ ಇಲ್ಲ. ಅಂಥ ವ್ಯಕ್ತಿಗಳಲ್ಲಿ ಒಬ್ಬ ನಾದರೂ ಬದುಕಿರುವ ಗುರುತಿಲ್ಲ. ಎಲ್ಲಾ ಪಾಳು.

ಪುನಃ ಮತ್ತೊಂದು ಕಡೆ ತಿರುಗಿ, ಅಲ್ಲಿರುತ್ತಿದ್ದ ಉಪಾಹಾರ ಗೃಹವನ್ನು ಮನಸ್ಸಿನಲ್ಲಿ ಯೋಚಿಸಿ ಚಿತ್ರಿಸಿಕೊಳ್ಳುತ್ತಾನೆ.

ಅಲ್ಲಿನ ಜನರೆಲ್ಲರೂ ದುಡಿದು ಬಂದು ದಣಿವನ್ನು ಕಳೆದುಕೊಳ್ಳಲು ತಕ್ಕ ಸ್ಥಳವಾಗಿತ್ತು ಅದು. ಅಲ್ಲಿ ಕುಡಿದು ತಿಂದು ಮೈಮರೆತುಬಿಡುತ್ತಿದ್ದರು. ಕುಳಿತು ಪುರಾತನ ಕಾಲದ ರಾಜಕೀಯ ವಿಷಯವನ್ನು ಚರ್ಚಿಸಿ ತೃಪ್ತಿಗೊಳ್ಳುತ್ತಿದ್ದರು. ಆ ಹೊಟೇಲ್ ಬಹಳ ಅಚ್ಚುಕಟ್ಟಾಗಿ ಸಜ್ಜಾಗಿರುತ್ತಿತ್ತು. ಆಟದ ಸಾಮಾನು, ಚಳಿಗಾಲದಲ್ಲಿ ಬೆಂಕಿ ಕಾಯಿಸಲು ಒಲೆ, ಅಲ್ಲಲ್ಲಿ ಹೂಗಳ ಅಲಂಕಾರಗಳು, ಪಠಗಳು, ಕೇವಲ ನೋಟಕ್ಕಾಗಿ ಇಟ್ಟಿದ್ದ ಒಡೆದ ಗಾಜಿನ ಲೋಟಗಳು ಮತ್ತು ಕುಡಿನೀರುಗಳ ಬೀರು. ಈ ರೀತಿ ಬಹಳ ಅಚ್ಚುಕಟ್ಟಾಗಿ ಇರುತ್ತಿತ್ತು ಆ ಊಟ ಉಪಚಾರಗಳ ಮನೆ.

ಈಗಲಾದರೋ ಗುರುವಿನ ಮನೆ ಇಲ್ಲ, ಪಾಠಶಾಲೆ ಇಲ್ಲ, ಹೋಟಲಿಲ್ಲ. ರೈತರ ಸುಳಿವಿಲ್ಲ. ಹಳ್ಳಿಗರ ಲಾವಣಿಯ ರಾಗವಿಲ್ಲ. ಕಥೆ ಹೇಳುವವರಿಲ್ಲ, ಕೆಲಸದಲ್ಲಿ ನಿರತರಾಗಿರುವ ಜನವಿಲ್ಲ. ಪಾಳು, ಪಾಳು. ಈ ವಿಚಿತ್ರ ಬದ ಲಾವಣೆಯನ್ನು ಕಂಡು ಕವಿಗೆ ಹೃದಯ ಭಾರವಾಗುತ್ತದೆ. ನೂರು ಜನ ಬಾಳಿ ಬದುಕುವ ಸ್ಥಳದಲ್ಲಿ ಕೇವಲ ಒಬ್ಬ ಶ್ರೀಮಂತ ಸುಖಪಟ್ಟರೆ ಸಾಕೆ? ಈತ ಒಬ್ಬ ಸುಖಿಯಾಗಿರಲು ನೂರಾರು ಜನ ರೈತರನ್ನು ಅಟ್ಟಿದ್ದಾನೆ. ಸಾಹುಕಾರ ಸುಖವಾಗಿ ತಿಂದು ಆಡಂಬರವಾಗಿ ಉಡಿಗೆ ತೊಡಿಗೆಗಳನ್ನು ಹಾಕಬೇಕಾದರೆ ಬಡವರು ಅದಕ್ಕೆ ಬೆವರು ಸುರಿಸಿರಬೇಕು. ಈ ಬಡವರ ಬೆವರಿನ ಹನಿಯಲ್ಲಿ

ಶ್ರೀಮಂತ ಭೋಗಪಡುತ್ತಾನೆ. ಸಾಹುಕಾರ ಸುಖಿಯಾಗಿ ಬದುಕಬೇಕಾದರೆ, ಬಡವರು ಕಷ್ಟಪಟ್ಟು ಸಾಯಬೇಕು. ಎಂಥ ಅನ್ಯಾಯ! ಎಂದು ಕವಿ ಮರುಕ ಗೊಳ್ಳುತ್ತಾನೆ.

ಬಡವರಿರುವ ಭೂಮಿಯಲ್ಲಿ ಪ್ರಕೃತಿದೇವತೆ ಮನೆ ಮಾಡಿರುತ್ತಾಳೆ. ಬಡವರು ನಿಷ್ಕಲ್ಮಷವಾಗಿ ದುಡಿದು ತಿನ್ನುತ್ತಾರೆ. ಆ ಭೂಮಿ ಸುಂದರ ವಾಗಿರುತ್ತದೆ. ಅಂಥಲ್ಲಿ ಸತ್ಯವಿದೆ. ಸಹಜವಾದ ಸ್ವಾಭಾವಿಕ ಸೌಂದರ್ಯ ಸ್ವಚ್ಛ ವಾಗಿ ಗೋಚರವಾಗುತ್ತದೆ. ಸುಂದರಿಯಾದ ಹೆಣ್ಣು, ಯಾವ ತೆರನಾದ ಉಡಿಗೆ ತೊಡಿಗೆ ಇಲ್ಲದಿದ್ದರೂ ಸೌಂದರ್ಯವತಿಯಾಗಿಯೇ ಕಾಣಿಸುತ್ತಾಳೆ. ಅದು ನಿಜವಾದ ಸೌಂದರ್ಯ. ಅದರಲ್ಲಿ ಸತ್ಯವಿದೆ. ಮುದಿ ಹೆಣ್ಣಿಗೆ ಎಷ್ಟು ತೆರವಾಗಿ ಆಡಂಬರದ ಉಡಿಗೆ ತೊಡಿಗೆಗಳನ್ನು ಹಾಕಿದರೂ ಅವಳಲ್ಲಿ ಚೆಲುವು ಕಾಣುವುದಿಲ್ಲ. ಅದು ಅಸ್ವಾಭಾವಿಕ. ಸತ್ಯವಿಲ್ಲ. ಕೇವಲ ಕೃತಕ ಮನ ರಂಜನೆ. ಹೀಗಾಗುತ್ತದೆ ಈ ಶ್ರೀಮಂತರ ಭೂಮಿ. ಶ್ರೀಮಂತರಿರುವಲ್ಲಿ ನಿಜವಾದ ಸೌಂದರ್ಯವಿಲ್ಲ, ಎಲ್ಲಾ ಕೃತಕ.

ಹೀಗೆ ಕೃತಕ, ಕೃತ್ರಿಮಜೀವನವನ್ನು ನಡೆಸಲು ಶ್ರೀಮಂತರು ಅನೇಕ ಜನ ಬಡವರ ಸುಖಕ್ಕೆ ಧಕ್ಕೆ ತರಬೇಕು. ರಾಜ್ಯಕ್ಕೆ ಈ ಸಾಹುಕಾರರಿಂದ ಬೆಂಬಲವಿಲ್ಲ. ಅಂಥವರಿಂದ ರಾಜ್ಯ ಹಾಳಾಗುತ್ತದೆ, ಭೂಮಿ ಬಂಜರಾಗುತ್ತದೆ. ಬಡ ಜನ ಕಣ್ಣೀರು ಇಡುತ್ತಾರೆ.

ದೇಶದ ನಿಜವಾದ ಸಂಪತ್ತಿಗೆ ಆಧಾರ ಕೃಷಿಕರಾದ ಬಡವರು. ಇವ ರಿಂದ ನಾಡು ಬಲಗೊಳ್ಳುತ್ತದೆ. ಜನ ಸುಖವಾಗಿ ಜೀವನ ಮಾಡುತ್ತಾರೆ. ಬಡ ರೈತರಿಂದ ಕಟ್ಟಲ್ಪಟ್ಟ ರಾಜ್ಯ ಶಾಶ್ವತವಾದ ರಾಜ್ಯ; ಅದು ಎಂಥ ಘೋರ ವಾದ ಪರಿಸ್ಥಿತಿಗಳನ್ನಾದರೂ ಎದುರಿಸಿ ಎದೆ ಕೊಟ್ಟು ನಿಲ್ಲುತ್ತದೆ.

ಕೇವಲ ಶ್ರೀಮಂತರ ಮೇಲೆ ಕಟ್ಟಿರುವ ರಾಜ್ಯ ದೊಡ್ಡ ಸಮುದ್ರದ ಅಲೆಗೆ ಕೃತಕವಾಗಿ ಹಾಕಿರುವ ಗೋಡೆಯಂತೆ ಅಶಾಶ್ವತ. ಭಾರಿ ಅಲೆಗೆ ಅದು ತಡೆಯುವುದು ಕಷ್ಟ. ಆದರೆ ರೈತಜನಗಳ ಅಸ್ತಿಭಾರ ಹಾಕಿ ಕಟ್ಟಿರುವ ರಾಜ್ಯ ಎಂಥ ವಿಷಮ ಪರಿಸ್ಥಿತಿಯನ್ನು ಬೇಕಾದರೂ ತಡೆಗಟ್ಟುತ್ತದೆ. ಸ್ವಾಭಾ ವಿಕವಾಗಿ ಎದ್ದು ನಿಂತಿರುವ ಬೆಟ್ಟಗಳು ಎಂಥ ಅಲೆಗಳನ್ನು ಬೇಕಾದರೂ ತಡೆಗಟ್ಟುತ್ತವೆ. ಹೀಗೆ ರೈತರ ರಾಜ್ಯ ಬಹಳ ದಿನ ನಶಿಸಿ ಹೋಗುವುದಿಲ್ಲ.

ಇದು ಭದ್ರವಾದ ರಾಜ್ಯ, ಸುಖ ಸಂಪತ್ತಿನ ನೆಲೆವೀಡಾಗಿರುತ್ತದೆ. ಪ್ರಕೃತಿ ದೇವಿ ಸೊಬಗಿನಿಂದ ಮೆರೆಯುತ್ತಿರುತ್ತಾಳೆ.

—ಎಂದು ಹೇಳಿ ಕವಿ ತನ್ನ ಕವನವನ್ನು ಮುಗಿಸುತ್ತಾನೆ. ಹಿಂದೆ ಹೇಳಿದಂತೆ ಬಡ ರೈತಜನವನ್ನು ಹಾಳಾಗಗೊಡಕೂಡದೆಂದು ಕವಿ ಸಮಾಜವನ್ನು ಎಚ್ಚರಿಸಿದ್ದಾನೆ. ಬಡ ಜನರು ಸಹ ಕೇವಲ ಆಸೆಪಟ್ಟು ಮೋಸಹೋಗಬಾರದು ಎಂಬುದನ್ನು ಹೇಳಿ ಅವರನ್ನೂ ಎಚ್ಚರಿಸಿದ್ದಾನೆ. ಅಲ್ಲದೆ ಪ್ರಕೃತಿ ದೇವಿಯ ಚೆಲುವಿನ ವರ್ಣನೆ ಈ ಕವನದಲ್ಲಿ ಬಹು ಮನೋಹರವಾಗಿದೆ.

—ನೆ. ಚಿ. ಶಿವಶಂಕರಶರ್ಮ.

---

## ಸಮತಾತತ್ತ್ವ

ಸಮವಿಲ್ಲ ಸೃಷ್ಟಿಯಲಿ, ನರನಂತೆ ನರನಿಲ್ಲ;
ಕ್ಷಮೆಯುಮವಳೊಳಗಿಲ್ಲ, ಕರ್ಮದಂತೆ ಫಲ;
ಕ್ರಮವೊಂದ ನೀಮಾಗಿಸಿರಿ ನೋಳ್ಪೆ ನಾನೆನುತೆ
ನಮಗವಳ್ ಪ್ರಸ್ಪರ್ಧಿ—ಮಂಕುತಿಮ್ಮ

ಬೆರಳುಗಳ ನೋಡವುಗಳೊಂದರಂತೊಂದಿಲ್ಲ,
ಕರಧರ್ಮಕುಚಿತವಾ ಹೆಚ್ಚು ಕಡಮೆಗಳು.
ಪುರುಳ ಪಿಡಿವುದೆ ಬೆರಳ್ಗಳೆಲ್ಲಮೊಂದುದ್ದವಿರೆ?
ಸರಿಯಹುದು ಕಾರ್ಯದಲಿ—ಮಂಕುತಿಮ್ಮ

ಅಸಮದಲಿ ಸಮತೆಯನು ವಿಷಮದಲಿ ಮೈತ್ರಿಯನು
ಅಸಮಂಜಸದಿ ಸಮನ್ವಯಸೂತ್ರನಯವ
ವೆಸನಮಯ ಸಂಸಾರದಲಿ ವಿನೋದವ ಕಾಣ್ಬ
ರಸಿಕತೆಯೆ ಯೋಗವೆಲೊ—ಮಂಕುತಿಮ್ಮ

## "ದಿ ಬ್ಲೂ ವೈಲ್"

### "The Blue Veil"

ಚಲಚ್ಚಿತ್ರಗಳ ಜನನ, ಮನುಷ್ಯನ ಮನೋರಂಜನೆಯ ಭಾವದಿಂದ. ಮನೋರಂಜಕವಾಗಿರುವ ಚಲಚ್ಚಿತ್ರಗಳಲ್ಲಿ ಎರಡು ವಿಧ: ಮೊದಲನೆಯದು— ಜನಜೀವನಕ್ಕೆ ಸಂಬಂಧಪಡದ ಕಾಲ್ಪನಿಕ ಕಥಾಸಾರಾಂಶವನ್ನುಳ್ಳದ್ದು; ಎರಡನೆಯದು -- ಜನಜೀವನದಲ್ಲಿ ಹಾಸುಹೊಕ್ಕಾಗಿರುವ ಸುಖದುಃಖಗಳನ್ನೂ ಕ್ರಿಯೆ ಪ್ರತಿಕ್ರಿಯೆಗಳನ್ನೂ ಅರ್ಥವತ್ತಾಗಿ ಪ್ರದರ್ಶಿಸುವ ಚಿತ್ರ. ಎರಡನೆಯ ಪಂಗಡಕ್ಕೆ ಸೇರಿದ ಚಿತ್ರದ ವೈಶಿಷ್ಟ್ಯ—ಮಾನವನಲ್ಲಿ ಹುದುಗಿರುವ ಭಾವ ಗಳನ್ನು ಹೊರಹೊಮ್ಮಿಸುವುದು. ಚಿತ್ರ ಕಣ್ಣು ಮುಂದೆ ಹಾದುಹೋಗುತ್ತಿದ್ದಂತೆ ಪ್ರೇಕ್ಷಕನು ಚಿತ್ರದಲ್ಲಿ ಮಗ್ನನಾಗಿ, ನಗುವ ಪ್ರಸಂಗ ಬಂದಾಗ ನಕ್ಕು, ದುಃಖ ಬಂದಾಗ ಅತ್ತು, ಭೀಕರ ಸಂದರ್ಭದಲ್ಲಿ ಹೆದರಿ, ನಾನಾ ರಸಗಳನ್ನನುಭವಿಸು ವಂತಾಗಬೇಕು. ಇಂತಹ ಜಾತಿಗೆ ಸೇರಿದ್ದು 'ದಿ ಬ್ಲೂ ವೈಲ್'! ಈ ಚಿತ್ರದ ಕಥಾವಸ್ತು ತಾಯ್ತನದ ಪ್ರಶ್ನೆಯನ್ನೊಳಗೊಂಡದ್ದು. ಶಿಶುವಿಗೆ ಜನ್ಮವಿತ್ತಾ ಕ್ಷಣ ತಾಯ್ತನ ಪೂರ್ಣವಾಯಿತೆ? ಜನ್ಮವಷ್ಟೆ ಇತ್ತು ಶಿಶುವಿನ ಬೆಳೆವಣಿಗೆಗೆ ಸಹಾಯಕವಾಗದಿದ್ದರೂ, ತಾಯಿ ಎನ್ನಿಸಿಕೊಳ್ಳುವ ಹಕ್ಕು ಸ್ತ್ರೀಗೆ ಉಂಟೆ? ಶಿಶುವೊಂದಕ್ಕೆ ಜನ್ಮವೀಯದಿದ್ದರೂ ಅದರಲ್ಲಿಯೇ ತನ್ನ ಪ್ರೇಮವನ್ನೆಲ್ಲಾ ಧಾರೆಯೆರೆದು ಅದರ ಪೋಷಣೆಗೆ ತನ್ನ ಜೀವವನ್ನೇ ತೇದ ಸ್ತ್ರೀ ತಾಯಿ ಎನಿಸಿಕೊಳ್ಳಲು ಅರ್ಹಳಲ್ಲವೆ? ಇಂತಹ ಸ್ತ್ರೀ ಒಬ್ಬಳು 'ದಿ ಬ್ಲೂ ವೈಲ್'ನ ಕಥಾನಾಯಿಕೆ. ಪಾತ್ರ ನಿರ್ವಹಣೆ ಬಹಳ ಕಷ್ಟತರವಾದರೂ ಅದನ್ನು ನಟಿ ಯೊಬ್ಬಳು ಬಹಳ ಚಾತುರ್ಯದಿಂದ ನಿರ್ವಹಿಸಿದ್ದಾಳೆ.

ಯುದ್ಧದಲ್ಲಿ ಗಂಡ ಮಡಿದುದರ ಪರಿಣಾಮವಾಗಿ ವಿಧವೆಯಾದ, ಅಷ್ಟೇ ಅಲ್ಲದೆ ಆಗ ತಾನೆ ಆಸ್ಪತ್ರೆಯಲ್ಲಿ ಶಿಶುವೊಂದಕ್ಕೆ ಜನ್ಮವಿತ್ತ, ತರುಣಿಯ ನಿಸ್ಸಹಾಯ ಕಥೆಯಿಂದ ಚಿತ್ರ ಪ್ರಾರಂಭವಾಗುತ್ತದೆ. ಗಂಡನನ್ನು ಕಳೆದು ಕೊಂಡ ದುಃಖವನ್ನು ಅವನ ಗುರುತಿನಂತಿದ್ದ ಶಿಶುವನ್ನು ನೋಡಿಕೊಂಡಾದರೂ ಕಾಲ ತಳ್ಳಬಹುದೆಂದಿದ್ದ ಇವಳಿಗೆ ಮತ್ತೊಂದು ಆಘಾತ ಬೀಳುತ್ತದೆ. ಮಗುವೂ ತನ್ನ ತಂದೆಯನ್ನೇ ಹಿಂಬಾಲಿಸುತ್ತದೆ. ತನ್ನ ಮಗು ಮಡಿಯಿತು ಎಂದು ತಾಯಿ

ತಿಳಿಯುವ ಸನ್ನಿವೇಶ ಅತಿ ದಾರುಣವಾದುದು ಮತ್ತು ಸೂಕ್ಷ್ಮವಾದುದು. ಈ ಮೊದಲನೆಯ ದೃಶ್ಯದಲ್ಲಿಯೇ ಚಿತ್ರದ ನಿರ್ದೇಶಕನು ತನ್ನ ಚಾತುರ್ಯವನ್ನು ಹೊರಗೆಡಹಿದ್ದಾನೆ. ದಾದಿಯೊಬ್ಬಳ ಮುಖಾಂತರ ತಾಯಿಗೆ ತನ್ನ ಶಿಶುವಿನ ಸಾವನ್ನು ತಿಳಿಸುವ ಮೂರ್ಖತನವನ್ನು ಮಾಡದೆ ಅದೇ ಸಂದರ್ಭವನ್ನು ತಾಯಿಯ ಕಾತರವನ್ನು ಹೊರಗೆಡಹಲು ಉಪಯೋಗಿಸಿಕೊಂಡಿದ್ದಾನೆ.

ಇತರ ಸ್ತ್ರೀಯರ ಶಿಶುಗಳೊಂದಿಗೆ ತನ್ನ ಶಿಶುವನ್ನೂ ಸ್ನಾನಕ್ಕೆ ಕೊಂಡೊಯ್ದು ಸ್ವಲ್ಪ ಹೊತ್ತಿನನಂತರ ಶಿಶುಗಳೆಲ್ಲವನ್ನು ಕರೆತಂದಿದ್ದಾರೆ. ಆ ಶಿಶುಗಳ ಗುಂಪಿನಲ್ಲಿ ತನ್ನದು ಯಾವುದು ಎಂದು ನಾಯಿಕೆಗೆ ತಿಳಿಯಲಸಾಧ್ಯ. ದಾದಿಯರು ಮಕ್ಕಳನ್ನೆತ್ತಿ ಆದರದರ ತಾಯಂದಿರ ಪಕ್ಕದಲ್ಲಿ ಮಲಗಿಸುತ್ತಾರೆ. ಶಿಶುಗಳ ಸಂಖ್ಯೆ ಕಡಮೆಯಾದರೂ ತನ್ನ ಮಗು ಬರಲೇ ಇಲ್ಲವಲ್ಲ ಎಂಬ ಕಾತರ ನಾಯಿಕೆಯ ಮುಖದ ಮೇಲೆದ್ದು ಕಾಣುತ್ತದೆ. ಕೊನೆಗೆ ಇದೇ ರೀತಿ ತಾಯಿಗೆ ತನ್ನ ಮಗುವಿನ ಮರಣ ತಿಳಿಯುತ್ತದೆ.

ಆಸ್ಪತ್ರೆಯಿಂದ ಹೊರಬಿದ್ದ ಆಕೆಗೆ ಜೀವನೋಪಾಯವನ್ನು ಹುಡುಕುವ ಪ್ರಸಂಗವೊದಗುತ್ತದೆ. ಶ್ರೀಮಂತರೊಬ್ಬರ ಮನೆಯಲ್ಲಿ ಮಕ್ಕಳನ್ನು ನೋಡಿ ಕೊಳ್ಳುವ ದಾದಿ (Governess)ಯಾಗುವ ಅವಕಾಶವು ನಿರಾಶಾಪೂರಿತವಾದ ಆಕೆಯ ಜೀವನದ ಆಶೆಯಾಗಿ ಅಂಕುರಿಸುತ್ತದೆ. ಶ್ರೀಮಂತ ತಂದೆತಾಯಿಗಳು ತಮ್ಮ ಮಕ್ಕಳಿಗೆ, ತಮ್ಮ ಸಾಮೀಪ್ಯವೊಂದನ್ನು ಬಿಟ್ಟು ಇತರ ಸುಖಗಳೆಲ್ಲ ವನ್ನೂ ಒದಗಿಸಿರುತ್ತಾರೆ. ಮಕ್ಕಳಿಗೆ ಮಾತೃಪ್ರೇಮವೆಂಬುದರ ಅರಿವೇ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ತನ್ನಲ್ಲಿದ್ದ ಪ್ರೇಮವನ್ನೆಲ್ಲ ಅವುಗಳ ಮೇಲೆ ಧಾರೆಯೆರೆವ ದಾದಿಯೊಡನೆ ಅವು ಹೊಂದಿಕೊಳ್ಳುವುದರಲ್ಲಿ ಆಶ್ಚರ್ಯ ವೇನಿಲ್ಲ. ಕೊನೆಕೊನೆಗೆ ಅವಳ ಸಾಮೀಪ್ಯವಿಲ್ಲದೆ ಇರಲು ಮಕ್ಕಳಿಗೆ ಸಾಧ್ಯ ವಾಗದ ಸಂದರ್ಭ ಒದಗುತ್ತದೆ. ತನ್ನಲ್ಲಿ ಅಷ್ಟು ಪ್ರೇಮಗೊಂಡು ಹೆತ್ತ ತಾಯಿಯ ವಾತ್ಸಲ್ಯವೇ ಇಲ್ಲದಿರುವುದು ಅಪ್ರಿಯವಾದುದೆಂದು ಮನಗಂಡು ಬಹಳ ಮನನೊಂದರೂ ಆ ಶ್ರೀಮಂತರ ಮನೆಯನ್ನು ಅವಳು ತ್ಯಜಿಸುತ್ತಾಳೆ. ತನ್ನ ತಾರುಣ್ಯವನ್ನೆಲ್ಲ ಇಂತಹ ಅನೇಕ ಮನೆಗಳಲ್ಲಿ ಮಕ್ಕಳ ಲಾಲನೆ ಪಾಲನೆ ಮಾಡುವುದರಲ್ಲೇ ಸವೆಸುತ್ತಾಳೆ. ಮಧ್ಯೆ ಒಂದೆರಡು ಸನ್ನಿವೇಶಗಳಲ್ಲಿ ಮರು ಮದುವೆಯ ಆಹ್ವಾನ ಬರುತ್ತದೆ. ಆದರೆ, ಆಕೆ ತನ್ನ ಮದುವೆಯಿಂದ ತಾನು

ನೋಡಿಕೊಳ್ಳುತ್ತಿರುವ ಮಕ್ಕಳಿಗೆ ತಾನು ಇಲ್ಲವಾಗುತ್ತೇನಲ್ಲಾ ಎಂಬ ಉದಾತ್ತ ಭಾವದಿಂದ ಬಂದ ಆಹ್ವಾನವನ್ನು ತಿರಸ್ಕರಿಸುತ್ತಾಳೆ.

ಚಿತ್ರ ನಿರ್ಮಾಪಕ ಇವೇ ಸನ್ನಿವೇಶಗಳನ್ನು ಬಳಸಿಕೊಂಡು ಅಮೆರಿಕಾ ದೇಶದ ಸಿರಿವಂತರ ಮನೆಗಳ ಕುಂದುಕೊರತೆಗಳನ್ನೂ ಅಲ್ಲಿ ನಡೆಯುವ ಗೃಹ ವಿವಾದಗಳನ್ನೂ ಇದರ ಮಧ್ಯೆ ಕಾತರಗೊಂಡ ಅವರ ಮಕ್ಕಳ ನಡತೆಗಳನ್ನೂ ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ:—ತಾಯಿಯಿಲ್ಲದ ಮಗುವಿನ ಮೇಲೆ ಅಪಾರವಾತ್ಸಲ್ಯ ಹೊಂದಿದ್ದ ತಂದೆಯೊಬ್ಬನ ಚಿತ್ರ; ತನ್ನ ಮಗಳ ಮೇಲೆ ಮಮತೆಯಿದ್ದೂ ಅವಳ ಯೋಗಕ್ಷೇಮದಲ್ಲಿ ಆಕಾಂಕ್ಷೆಯಿದ್ದರೂ, ಸಮಾಜದಲ್ಲಿ ದೊಡ್ಡ ಸ್ಥಾನಗಳಿಸಬೇಕೆಂದು ತನ್ನ ಸಮಯವನ್ನೆಲ್ಲ ಸ್ಪರ್ಧೆಗಳಲ್ಲಿ ವ್ಯಯ ಮಾಡುತ್ತಿದ್ದ ಸಾಮಾಜಿಕಳೊಬ್ಬಳ ಜೀವನ ಚಿತ್ರ—ಇಂಥ ಅನೇಕ ಸನ್ನಿವೇಶಗಳನ್ನು ತಂದಿದ್ದಾನೆ.

ಚಿತ್ರದ ಸ್ವಾರಸ್ಯ ಕೊನೆಕೊನೆಗೆ ಬಯಲಾಗುತ್ತದೆ. ವಿಮಾನ ಸಂಚಾಲಕನಾದ ಗಂಡನು ಯುದ್ಧ ಮಾಡುತ್ತಿದ್ದಾಗ ಯೂರೋಪಿನಲ್ಲಿ ಮಡಿದುದರಿಂದ, ಸ್ತ್ರೀಯೊಬ್ಬಳು ತನ್ನ ಹಸುಗೂಸನ್ನು ಕಥಾನಾಯಕಿಯ ವಶದಲ್ಲಿ ಬಿಟ್ಟು ಯೂರೋಪಿಗೆ ತೆರಳುತ್ತಾಳೆ. ಸ್ವಲ್ಪ ಕಾಲದಲ್ಲೆ ಹಿಂತಿರುಗಿ ಬರಬಹುದೆಂಬ ಆಕಾಂಕ್ಷೆ ನಮ್ಮ ಕಥಾನಾಯಿಕೆಗಿದ್ದು ಬರಿದಾಗುತ್ತದೆ. ಹತ್ತು ವರ್ಷಗಳಾದರೂ ಆ ತಾಯಿಯ ಸುಳಿವೇ ಕಂಡುಬರುವುದಿಲ್ಲ. ತನ್ನ ಮಗುವೇ ಎಂಬ ಭಾವನೆಯಿಂದ, ಹತ್ತು ವರ್ಷಗಳನ್ನೂ ಅದರ ಲಾಲನೆ ಪಾಲನೆಯಲ್ಲಿ ಕಳೆಯುತ್ತಾಳೆ. ಒಂದು ದಿವಸ ಇದ್ದಕ್ಕಿದ್ದಂತೆ ಮಗುವಿನ ತಾಯಿಯ ಆಗಮನದ ತಂತಿಯೊಂದು ಬರುತ್ತದೆ. ನಿರಾಶಳಾದ ನಾಯಿಕೆ ಆ ಮಗುವನ್ನು ಅದರ ತಾಯಿಯ ವಶಕ್ಕೆ ಒಪ್ಪಿಸಲು ಇಷ್ಟವಿಲ್ಲದೆ ಅದರೊಡನೆ ಪರಾರಿಯಾಗುತ್ತಾಳೆ. ಪೊಲೀಸರಿಗೆ ದೂರು ಹೋದುದರ ಫಲವಾಗಿ ಮಗುವಿನೊಂದಿಗೆ ಸಿಕ್ಕಿಹಾಕಿಕೊಳ್ಳುತ್ತಾಳೆ, ಕಥಾನಾಯಿಕೆ. ಆ ಮಗುವಿನ ಕಣ್ಣೀರನ್ನು ಲೆಕ್ಕಿಸದೆ ಮಗುವಿನ ತಾಯಿ ಅದನ್ನು ಕೊಂಡೊಯ್ಯುತ್ತಾಳೆ.

ದಾರುಣವಾಗಿ ಕೊನೆಗೊಳ್ಳಬೇಕಾದ ಚಿತ್ರ ನಿರ್ದೇಶಕನ ಚಾತುರ್ಯದಿಂದ ಸಂತೋಷದಲ್ಲಿ ಸಮಾಪ್ತಿಯಾಗುತ್ತದೆ. ಈ ವೇಳೆಗೆ ಪರಿಣತೆಯಾದ ನಾಯಿಕೆ ವಿಧಿವಶದಿಂದ, ಅವಳೇ ಹಿಂದೆ ಪಾಲಿಸಿ ದೊಡ್ಡವನನ್ನಾಗಿ ಮಾಡಿದ

ವೈದ್ಯನೊಬ್ಬನ ಮನೆಯಲ್ಲಿ ತನ್ನ ಉಳಿದ ಜೀವನವನ್ನು ಕಳೆಯುತ್ತಾಳೆ. ಇದೇ, ಆ ವೈದ್ಯನು ಅವಳಿಗೆ ಸಲ್ಲಿಸಿದ ಕೃತಜ್ಞತೆಯ ಕಾಣಿಕೆ.

ಚಿತ್ರದಲ್ಲಿ ಶಬ್ದಗ್ರಹಣ ಮತ್ತು ಛಾಯಾಗ್ರಹಣ ಕಥೆಗೆ ಹೊಂದಿಕೊಂಡು ಹೋಗಿವೆ. ಯಾಂತ್ರಿಕ ಗುಣಗಳಲ್ಲಿ ಕೊರತೆ ಕಂಡುಬರುವುದಿಲ್ಲ. ಚಿತ್ರವನ್ನು ನೋಡಿ ಬಂದಾದ ಮೇಲೆ ಪ್ರೇಕ್ಷಕರ ಹೃದಯದಲ್ಲಿ ಒಂದು ಅಪೂರ್ವ ಭಾವನೆ ತುಂಬಿರುತ್ತದೆ. ಕಥಾಂಶವು ಸರ್ವಸಾಧಾರಣವಾದುದಾದರೂ ನಿರ್ದೇಶಕನ ಮತ್ತು ನಟಿಯ ಕೌಶಲದಿಂದ, ಚಮತ್ಕಾರದಿಂದ ಅತ್ಯುತ್ತಮ ಚಲಚ್ಚಿತ್ರವಾಗಿ ಪರಿಣಮಿಸಿದೆ.

—ಮ. ರಾ. ಭಗವಾನ್.

---

## ಜೀವನಕಲೆ

ಜೀವನವದೊಂದು ಕಲೆ; ಕಲೆಯ ಕಲಿಸುವುದೆಂತು?
ಸಾವಿರದ ನಿಯಮ ಯುಕ್ತಿಗಳನೊರೆದೊಡೆಯುಂ
ಆವುದೋ ಕುಶಲತೆಯದೊಂದಿರದೆ ಜಯವಿರದು.
ಆ ವಿವರ ನಿನ್ನೊಳಗೆ—ಮಂಕುತಿಮ್ಮ

ತಲೆ ಕೊಡವ ತಳೆದಿರಲು, ಕೈ ಕತ್ತಿ ಪಿಡಿದಿರಲು,
ಬಳುಕುಹಗ್ಗದ ಮೇಲೆ ತಾನಡಿಯನಿಡುತ,
ಕೆಲಬಲಕೆ ಬಿಳದೆ ಮುನ್ನಡೆವ ಡೊಂಬನುಪಾಯ-
ಕಲೆಯೆ ಜೀವನಯೋಗ—ಮಂಕುತಿಮ್ಮ

ಬಹುವಿದ್ಯೆ ಬಹುತರ್ಕ ಬಹುನೇಮ ಬೇಕಿಲ್ಲ
ವಹಿಸೆ ಜೀವನಭರವನದು ಹಗುರೆನುವವೋಲ್
ಸಹನೆ ಸಮರಸಭಾವವಂತಃಪರೀಕ್ಷೆಗಳು
ವಿಹಿತವಾತ್ಮದ ಹಿತಕೆ—ಮಂಕುತಿಮ್ಮ

# ಲೈಟ್ ಆಫ್ ಏಷ್ಯಾ

## 'LIGHT OF ASIA'

ಎಡ್ವಿನ್ ಆರ್ನಾಲ್ಡರ ಹೆಸರನ್ನು ಕೇಳದವರು ವಿರಳ. 'ಲೈಟ್ ಆಫ್ ಏಷ್ಯಾ' ಇವರ ಕಾವ್ಯ. ಈ ಕಾವ್ಯದ ಪರಿಚಯ ಬಹಳ ಮಂದಿಗಿದೆ. ನಮಗೆಲ್ಲರಿಗೂ ಒಂದಲ್ಲ ಒಂದು ವಿಧದಲ್ಲಿ ಪರಿಚಯವಾಗಿರುವ, ಪ್ರಪಂಚದಲ್ಲಿ ತಾಂಡವವಾಡುತ್ತಿರುವ ದುಃಖ ರೋಗ ಮರಣ ಕಷ್ಟ-ಕ್ಲೇಶಗಳ ಬಾಧೆಯಿಂದ ಪಾರಾಗಿ, ಆ ಗುರಿಯನ್ನು ಮುಟ್ಟುವ ಆತುರದಲ್ಲಿ ಎಡವದೆ ಮುಗ್ಗರಿಸದೆ ಮುಂದುವರಿಯಬೇಕಾದರೆ ಉಪಾಯವಾವುದು ಎಂಬುದನ್ನು ಸರ್ವಕಾಲಕ್ಕೂ ಸರ್ವರಿಗೂ ಅನ್ವಯವಾಗುವಂತೆ ಬೋಧಿಸಲು ಅರಮನೆಯ ಸುಖಸಂತೋಷಗಳನ್ನೂ ಸುಂದರಿಯಾದ ಪತ್ನಿಯನ್ನೂ ಏಕಮಾತ್ರ ಪುತ್ರನನ್ನೂ ತೊರೆದು ಕಾಡಿಗೆ ಹೋಗಿ ಗೆಡ್ಡೆ ಗೆಣಸು ತಿಂದು ಜೀವನಧಾರಣೆ ಮಾಡಿಕೊಂಡು ತಪಸ್ಸಿನಿಂದ ತನ್ನ ಪ್ರಯತ್ನದಲ್ಲಿ ವಿಜಯಿಯಾದ ಗೌತಮ ಬುದ್ಧನ ಕಥೆ ಇದು.

ಕಾವ್ಯಕ್ಕೆ ಎರಡು ಮುಖಗಳು: ಮೊದಲನೆಯದಾಗಿ ಅದರ ತಿರುಳು, ಮತ್ತು ಎರಡನೆಯದಾಗಿ ಕರ್ಣಾನಂದವಾಗುವ ಪದಗಳ ಜೋಡಣೆ. ಈ ಎರಡರಲ್ಲಿ ಯಾವುದಕ್ಕೆ ಹೆಚ್ಚು ಪ್ರಾಶಸ್ತ್ಯಕೊಡಬೇಕು ಎನ್ನುವುದು ವಿಚಾರವನ್ನು ಅವಲಂಬಿಸಿರುತ್ತದೆ. ಕೆಲವರಿಗೆ ಕಾವ್ಯದ ಒಳತಿರುಳು ರುಚಿಸಿದರೆ ಹಲವರಿಗೆ ನಾದಪದಗುಂಫನ ಇಂಪಾಗುತ್ತದೆ. ಹೀಗಾಗಿ ಒಬ್ಬರಿಗೆ ರುಚಿಸುವುದು ಮತ್ತೊಬ್ಬರಿಗೆ ರುಚಿಸದು. ಈ ವಿಮರ್ಶಕರ ಕ್ರೂರ ಟೀಕೆಗಳಿಗೆ ತುತ್ತಾಗಬಾರದೆಂಬ ಹಂಬಲ ಮಾನವಸಹಜವಾದ ಕಾರಣ, ಹಲವಾರು ಕವಿಗಳು ತಮ್ಮ ಜನ್ಮವನ್ನು, ನಾದದೃಷ್ಟಿಯಿಂದಲೂ ಸರಿಯಾದ ವಸ್ತುವಿನಿಂದಲೂ ಕೂಡಿದ ಕೃತಿಗಳನ್ನು ರಚಿಸಲಿಕ್ಕಾಗಿಯೆ ತೇದರು. ಸರ್ವರನ್ನೂ ಮೆಚ್ಚಿಸುವ ಕಾರ್ಯ ಸರ್ವೇಶನಿಗೂ ಅಸಾಧ್ಯ. ಕಾವ್ಯ ರಚನೆಗೆ ಕೈಹಾಕಿದೊಡನೆಯೆ ಥುತ್ತೆಂದು ಬಂದೆದುರು ನಿಲ್ಲುವ ಪ್ರಾಸ ಮತ್ತು ಛಂದಸ್ಸುಗಳಿಗೆ ಅನೇಕ ಕವಿಗಳು ಬೆದರಿ ಬೆಂಡಾಗಿದ್ದಾರೆ. ಅರ್ಥತುಂಬಿರುವ ಕಾವ್ಯಗಳನ್ನು ರಚಿಸುವ ಕಷ್ಟವು ಅರ್ಥವಿಲ್ಲದ ಪ್ರಾಸಬದ್ಧವಾದ ಕಾವ್ಯಗಳನ್ನು ರಚಿಸುವ ಕಷ್ಟಕ್ಕಿಂತ ಹೆಚ್ಚಾದುದು ಎಂದು ತೋರುತ್ತದೆ.

ಆದುದರಿಂದ ಈ ಪ್ರಾಸಪಿಶಾಚಿಯೇ ಭಾಗ್ಯದೇವಿ ಎಂದು ಪೂಜಿಸುವವರ ಕಣ್ಣುಗಳ ಮೂಲಕ ನೋಡಿದರೆ ಈ 'ಲೈಟ್ ಆಫ್ ಏಷ್ಯಾ' ಕಾವ್ಯವೇ ಅಲ್ಲ. ಆದರೆ ಮತ್ತೊಂದು ದೃಷ್ಟಿಯಿಂದ, ಅಂದರೆ ಪ್ರಾಸಕ್ಕೆ ಮರುಳಾಗದೆ, ಇದನ್ನು ಓದಿದರೆ ಇದು ಒಂದು ಮಹಾಕಾವ್ಯವಾದಾತು. ಹಿಂದೂ ನಂಬಿಕೆಗಳು, ನಡೆವಳಿಕೆಗಳು, ವ್ರತಾಚರಣೆಗಳು, ನಿಯಮಗಳು ಅಷ್ಟು ಹೆಚ್ಚಾಗಿ ಪರಿಚಯವಿಲ್ಲದೆ ಇದ್ದರೂ ನಮ್ಮೆಲ್ಲರಿಗೂ ಸರಿಹೊಂದುವ ರೀತಿಯಲ್ಲಿ ಬರೆದಿರುವ ಆರ್ನಾಲ್ಡರ ಕೌಶಲ ಶ್ಲಾಘನೀಯ. ಪ್ರಕೃತಿಯ ಚಿತ್ರಗಳನ್ನು ಮತ್ತು ಇನ್ನೂ ಅನೇಕ ಚಿತ್ರಗಳನ್ನು ನಮ್ಮ ಕಣ್ಣೆದುರು ನಿಲ್ಲುವಂತೆ ರಚಿಸಿರುವ ಇವರ ಹಸ್ತಕೌಶಲವೂ ಶ್ಲಾಘನೀಯವೇ. ಅವರ ಆಸೆ ಇದ್ದಂತೆ, ಅವರ ಈ ಕೃತಿ ಓದಿದರೆ, ಭಾರತವನ್ನೂ ಭಾರತೀಯರನ್ನೂ ಪ್ರೀತಿಸುವವರಲ್ಲಿ ಇವರೂ ಒಬ್ಬರು ಎನ್ನಿಸುತ್ತದೆ.

ಈ ಪ್ರಪಂಚದಲ್ಲಿ ಗೌತಮ ಬುದ್ಧನ ಸಿದ್ಧಾಂತಗಳನ್ನು ಹರಡಿ ಅದರಂತೆ ನಡೆಯಲು ಯತ್ನಿಸುತ್ತಿರುವ ಬೌದ್ಧರ ಸಂಖ್ಯೆ ಹೆಚ್ಚಾಗುತ್ತಿದೆ. ಈ ಮತ ಬಹಳ ಹಿಂದಿನ ಕಾಲದಿಂದ ಉಚ್ಛ್ರಾಯಸ್ಥಿತಿಯಲ್ಲಿದ್ದು ಈಗಲೂ ಸಾಕಷ್ಟು ಮಟ್ಟಿಗೆ ಹಾಗೆಯೇ ಇದೆ. ಈಗ ಈ ಮತವು ಸಿಂಹಳ, ಚೈನಾ, ಜಪಾನ್, ಟಿಬೆಟ್ ಮುಂತಾದ ಕಡೆಗಳಲ್ಲೆಲ್ಲಾ ಬಹಳವಾಗಿದೆ. ಆದರೆ, ಇಲ್ಲಿಯೇ ಜನಿಸಿ ನಿರ್ವಾಣಹೊಂದಿದ ಬುದ್ಧನು ಹೇಳಿದ ಈ ಮತ ಭಾರತದಲ್ಲಿ ಅಷ್ಟು ಪ್ರಬಲವಾಗಿಲ್ಲ. ಕಾರಣ: ಬೇರೆ ಬೇರೆ ಮತಗಳು ತಲೆ ಎತ್ತಿ ಇದರ ಪ್ರಾಬಲ್ಯವನ್ನು ಕಡಿಮೆ ಮಾಡಿದುವು. ಈ ಪ್ರಪಂಚದಲ್ಲಿ ಮತೀಯ ಮತ್ತು ಧಾರ್ಮಿಕ ವಿಚಾರಗಳಲ್ಲಿ ಸಾಕಷ್ಟು ಅರಿತಿರುವವರೆಲ್ಲರೂ ಈ ರಾಜಕುವರ ಸಿದ್ಧಾರ್ಥನಿಗೆ ಋಣಿಗಳಾಗಿದ್ದಾರೆ. ಆತನ ಹೆಸರಿನ ಸುತ್ತ ಹೆಣೆದುಕೊಂಡಿರುವ ಕಥೆಗಳ ಸಿಕ್ಕನ್ನು ಬಿಡಿಸಿದರೆ ಆತ ಎಲ್ಲರಿಗಿಂತಲೂ ಉತ್ತಮ, ಸಹೃದಯಿ ಮತ್ತು ಪೂಜ್ಯ ಎನ್ನಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಈ ಪುಸ್ತಕದಿಂದ ನಾವು ತಿಳಿಯುವುದಾದರೂ ಇದನ್ನೆ.

ಬೋಧಿಸತ್ತ್ವನು ಜನರ ಮೊರೆಗಳನ್ನು ಕೇಳಿ ಈ ಲೋಕದಲ್ಲಿ ಮೋಕ್ಷ ಸಿದ್ಧಾಂತವನ್ನು ಹರಡಬೇಕೆಂದು ನಿರ್ಣಯಿಸಿಕೊಂಡು ಕಪಿಲವಸ್ತುವಿನ ರಾಜನಾದ ಶುದ್ಧೋದನನ ಪತ್ನಿ ಮಾಯಾದೇವಿಯ ಹೊಟ್ಟೆಯಲ್ಲಿ ಸಿದ್ಧಾರ್ಥ

ನಾಮಧೇಯದಿಂದ ಜನ್ಮವೆತ್ತಲು ಮನಸ್ಸು ಮಾಡಿದನು. ಒಂದು ರಾತ್ರೆ ಮಾಯಾದೇವಿ ಮಲಗಿದ್ದಾಗ್ಗೆ ನಕ್ಷತ್ರದಂತೆ ಹೊಳೆಯುವ ವಸ್ತುವೊಂದು ಬಲಭಾಗದಿಂದ ತನ್ನ ಗರ್ಭವನ್ನು ಪ್ರವೇಶಿಸಿದಂತೆ ಕನಸು ಕಂಡಳು. ಆ ಕನಸನ್ನು ಕೇಳಿದ ಜ್ಯೋತಿಷ್ಕರು 'ನೀನು ಮಗನೊಬ್ಬನನ್ನು ಹೆರುತ್ತೀಯೆ. ಆತನಿಗೆ ಸಕಲರೂ ಆಶ್ಚರ್ಯಪಡುವಷ್ಟು ಬುದ್ಧಿಶಕ್ತಿ ಇರುತ್ತದೆ. ಆತನು ಲೋಕ ದಲ್ಲಿ ಜನಿಸಿ, ಮೌಢ್ಯದಲ್ಲಿ ಮುಳುಗಿ ತೇಲುತ್ತಿರುವ ಮಾನವರನ್ನು ಎತ್ತಿ ಉದ್ಧಾರ ಮಾಡುತ್ತಾನೆ, ಅಥವಾ ರಾಜ್ಯವನ್ನು ಆಳಿ ಧರ್ಮಿಷ್ಠ ಚಕ್ರವರ್ತಿ ಎಂಬ ಹೆಸರಿನಿಂದ ಬೆಳಗುತ್ತಾನೆ' ಎಂದರು. ರಾಣಿಗೆ ದಿನ ತುಂಬಲು ಆಕೆ ಈ ಸುಪುತ್ರನಿಗೆ ಜನ್ಮವಿತ್ತಳು. ಮಗುವು ತಳತಳಿಸುವ ಮೂವತ್ತೆರಡು ಕಳೆಗಳಿಂದ ಅಲಂಕೃತವಾಗಿ ಒಳ್ಳೆಯ ಲಗ್ನದಲ್ಲಿ ಜನಿಸಿದನು. ನಗರದಲ್ಲಿ ಸಂತಸದ ಹಬ್ಬ ಗಳನ್ನು ಮಾಡಿರೆಂದು ರಾಜ ಅಪ್ಪಣೆಕೊಟ್ಟನು. ಜ್ಯೋತಿಷ್ಕರು 'ಈತನು ಚಕ್ರ ವರ್ತಿಯಾದರೆ ಸಪ್ತರತ್ನಗಳ ಅಧಿಪತಿಯಾಗುತ್ತಾನೆ, ಅಥವಾ ಮಹಾ ತ್ಯಾಗಿ ಯಾಗುತ್ತಾನೆ' ಎಂದರು. ನಗರದಲ್ಲೆಲ್ಲ ಸಂತಸ ನಲಿದಾಡಿತು. ಆ ಸಮಯ ದಲ್ಲಿ 'ಅಸಿತ'ನೆಂಬ ಮುನಿಪುಂಗವನೊಬ್ಬನು ಅರಮನೆಗೆ ಆಗಮಿಸಿದನು. ರಾಜ ರಾಣಿಯರು ಭಯಭಕ್ತಿಯಿಂದ ಮಗುವನ್ನು ತಂದು ಆತನ ಕಾಲೆಡೆ ಮಲಗಿಸಿ ಕೈ ಮುಗಿದು ನಿಂತುಕೊಂಡರು. ಆ ಮುನಿ ಮಗುವನ್ನು ಕಂಡೊಡನೆಯೆ ತಾನೂ ಕೈಮುಗಿದು 'ಸ್ವಾಮಿ, ನಿನಗೆ ತಲೆ ಬಾಗುವೆನು, ನೀನೇ ಬುದ್ಧ' ಎಂದು ಮತ್ತೆ ಮತ್ತೆ ವಂದಿಸಿದನು. ದಿಗ್ಭ್ರಾಂತರಾಗಿ ನಿಂತಿದ್ದ ರಾಜರಾಣಿಯರ ಕಡೆ ತಲೆ ತಿರುವಿ, ರಾಣಿಗೆ 'ತಾಯೇ, ನೀನು ಇಂದಿಗೆ ಏಳು ದಿನಕ್ಕೆ ಪರಲೋಕಗತ ಳಾಗುತ್ತೀಯೆ' ಎಂದು ನುಡಿದು ತೆರಳಿದನು. ನುಡಿದ ಮಾತು ಫಲಿಸಿತು. ಏಳನೆಯ ದಿನ ರಾತ್ರಿ ಮಲಗಿದ ರಾಣಿ ಮತ್ತೆ ಮೇಲೇಳಲಿಲ್ಲ. ಆ ಮಗುವಿನ ಪೋಷಣೆಗೆ ಮತ್ತೊಬ್ಬಾಕೆಯನ್ನು ಕರೆತಂದರು. ಆಕೆ 'ಮುಂದೆ ಈ ಚೆಂದುಟಿ ಗಳಿಂದ ಹೊರಡುವ ಮಾತು ಪ್ರಪಂಚಕ್ಕೆ ಕಲ್ಯಾಣವೆಸಗಲಿ' ಎಂದುಕೊಂಡು ಆ ತುಟಿಗಳನ್ನು ತನ್ನ ಸ್ತನಗಳಿಂದ ಆರೈಕೆ ಮಾಡುತ್ತಿದ್ದಳು. ಮಗು ಬೆಳೆದು ಎಂಟು ವರ್ಷ ವಯಸ್ಸಿನ ಹುಡುಗನಾದನು. ಆತನಿಗೆ ವಿದ್ಯೆ ಕಲಿಸಲು ಸ್ವಯಂ ವಿಶ್ವಾಮಿತ್ರನೇ ನೇಮಿಸಲ್ಪಟ್ಟನು. ಗುರುಮುಖದಿಂದ ಆ ಹುಡುಗನಿಗೆ ಮಂತ್ರೋಪದೇಶವಾಯಿತು. ಅದರ ಬಲದಿಂದ ಹುಡುಗ ಸಕಲವನ್ನೂ ಅರಿತು

ಎಲ್ಲವನ್ನೂ ಗುರುವಿಗೆ ಒಪ್ಪಿಸಲು ಮೊದಲುಮಾಡಿದನು. ಬೆರಳು ತೋರಿದರೆ ಹಸ್ತವನ್ನೇ ನುಂಗುವ ಸಾಮರ್ಥ್ಯವಿರುವ ಆ ಹುಡುಗನನ್ನು ಕಂಡು ಗುರು ಬೆರಗಾದ. ತಾನು ಶಿಷ್ಯನಿಂದ ಪರಾಜಿತನಾಗುವೆ ಎಂದುಕೊಂಡು ಸಂತಸದಲ್ಲಿ ಓಲಾಡಿದ. ಇದಕ್ಕಿಂತ ಹೆಚ್ಚಿಕೆ ಯಾವ ಗುರು ಆಶಿಸಿಯಾನು? ಸಂಖ್ಯಾ ಶಾಸ್ತ್ರದ ಪರಿಚಯವೇ ಅವನನ್ನು ಅದರಲ್ಲಿ ಅದ್ವಿತೀಯನಾಗುವಂತೆ ಮಾಡಿತು. ಗುರು ನಸುನಗುತ್ತಾ 'ಕುಶಾಗ್ರಮತಿಯಾದ ನಿನಗೆ ನಾನೇನು ತಿಳಿಸಬೇಕು?' ಎನ್ನಲು ಹುಡುಗ ನಮ್ರನಾಗಿಯೆ ಇದ್ದನು. ಹೀಗೆ ಹಿರಿಯರಲ್ಲಿ ಗುರುವಿನಲ್ಲಿ ಭಕ್ತಿ, ಶ್ರದ್ಧೆ, ಗೌರವಗಳಿಟ್ಟುಕೊಂಡು ಬೆಳೆದನು. ಪ್ರಾಣಿದಯೆ ಅವನ ದೇಹ ದಲ್ಲಿ ಮನೆಮಾಡಿ ನೆಲೆಸಿತು. ರಾಜನಾದ ಶುದ್ಧೋದನನಿಗೆ ತನ್ನ ಮಗ ಚಕ್ರವರ್ತಿಯಾಗಲಿ ಎಂಬ ಮಹದಾಸೆ ಇದ್ದುದರಿಂದ ಅವನು ಸುಖ ಸಂತೋಷ ಮಾತ್ರ ಕಾಣುತ್ತಿರುವಂತೆ ಅನುಕೂಲಗಳನ್ನು ಮಾಡಿಸಿಕೊಟ್ಟನು. ಆದರೂ ಅವನ ಕಣ್ಣಿಗೆ ನೊಣವನ್ನು ನುಂಗುವ ಹಲ್ಲಿ, ಅದನ್ನು ತಿಂದು ಜೀವಿಸುವ ಸರ್ಪ, ಇನ್ನೊಂದರಿಂದ ಹೊಟ್ಟೆ ತುಂಬಿಸಿಕೊಳ್ಳುವ ಹದ್ದು ಇವೇ ಕಾಣುತ್ತಿದ್ದುವು. ಹೀಗೆ ಒಂದನ್ನೊಂದು ಕೊಂದು ಬಾಳಬೇಕಾದ ಈ ಲೋಕದಲ್ಲಿ ತಾನೇಕೆ ಜನಿಸಿದೆ ಎಂದು ಪರಿತಪಿಸಿದನು. ಇದನ್ನೆಲ್ಲಾ ಯೋಚಿಸುತ್ತಾ ಆತನಲ್ಲಿ ದಯೆ ರೂಪುಗೊಂಡಿತು. ಅಂತೆಯೇ ಧ್ಯಾನಾಸಕ್ತನಾದನು. ದೇವತೆಗಳು ಕೆಳಗಿಳಿದು ಬಂದು ಧ್ಯಾನಾಸಕ್ತನಾಗಿದ್ದ ಆತನನ್ನು ಪೂಜಿಸಿದರು. ಸಂಜೆಗೆ ಧ್ಯಾನಾಸಕ್ತನಾಗಿರುವ ಮಗನನ್ನು ತಂದೆ ಮನೆಗೆ ಕರೆದೊಯ್ದನು. ಮಗ ಬೆಳೆದಂತೆಲ್ಲಾ ಚಕ್ರವರ್ತಿಯ ಗುಣಗಳು ಬೆಳೆಯದೆ ಮುನಿಪುಂಗವನ ಗುಣ ಗಳೇ ಬೆಳೆಯುತ್ತಿರಲು ಈ ಪ್ರಾಪಂಚಿಕ ವ್ಯವಹಾರಗಳಲ್ಲಿ ಮಗನನ್ನು ಕಟ್ಟಿ ಹಾಕಲು ಮನಸ್ಸುಮಾಡಿ, ಕಪಿಲವಸ್ತುವಿನಲ್ಲಿ ಎಲ್ಲರಿಗಿಂತ ಸುಂದರಿಯಾಗಿದ್ದ ಯಶೋಧರೆಯನ್ನು ತಂದು ಮದುವೆ ಮಾಡಿಸಿದ. ಆ ನೂತನ ದಂಪತಿಗಳಿಗೆ ದೊಡ್ಡ ಕೋಟೆ ಇರುವ ಅರಮನೆ ಕಟ್ಟಿಸಿಕೊಟ್ಟನು. ಕೆಲಸಕ್ಕೆ ಸಕಲರೂ ಯುವಕರೇ ಇರಬೇಕೆಂದು ಅಪ್ಪಣೆ ಮಾಡಿದ. ರೋಗದಿಂದ ನರಳುತ್ತಿರುವವರು, ಮುದಿಯಾಗಿರುವವರು, ಯಾರನ್ನೂ ಅರಮನೆಯೊಳಕ್ಕೆ ಬಿಡಕೂಡದೆಂದು ಕಾವಲಿರಿಸಿದನು. ಸೇವಕರು, ಗೌತಮನ ಕಣ್ಣಿಗೆ ಬೀಳದಿರಲೆಂದು ಬಾಡಿದ ಹೂಗಳನ್ನು, ಹಣ್ಣಾಗಿ ಉದುರಿದ ಎಲೆಗಳನ್ನು ಮುಚ್ಚಿಡುತ್ತಿದ್ದರು.

ಈ ಕಾರಣಗಳಿಂದ ರಾಜಕುಮಾರನಿಗೆ ರೋಗ, ಕಷ್ಟ, ಕಾರ್ಪಣ್ಯ, ಮರಣ, ಮುದಿತನಗಳ ಪರಿಚಯವು ಆಗಲೇ ಇಲ್ಲ. ತನ್ನ ನಗರವನ್ನು ನೋಡಬೇಕೆಂಬ ಹಂಬಲ ಮನದಲ್ಲೇಳಲು ಚೆನ್ನನಿಗೆ ನಾಳೆ ರಥವನ್ನು ಸಿದ್ಧ ಪಡಿಸೆಂದು ಅಪ್ಪಣೆ ಮಾಡಿದನು. ರಾಜ ಶುದ್ಧೋದನನು ಮಗನ ಆಸೆಯನ್ನು ಕೇಳಿ, ಡಂಗುರ ಹೊಡೆವವರನ್ನು ಕರೆಸಿ, ರಾಜಕುವರನೆದುರು ಯುವಕರು ಮಾತ್ರ ಬರಬೇಕೆಂದೂ ಬಡವರು ಬಲ್ಲಿದರು ಎಲ್ಲರೂ ಸಂತಸದಿಂದ ಹಾದಿ ಬೀದಿ ಗಳನ್ನು ಸಿಂಗರಿಸಿ ನಗುನಗುತ್ತ ಇರಬೇಕೆಂದೂ ಕಟ್ಟಪ್ಪಣೆ ಮಾಡಿದನು.

ರಾಜಕುವರ ಹೊರಹೊರಟನು. ವಿಧಿವಿಳಸನವನ್ನು ತಡೆಯುವರಾರು? ರಾಜಕುವರನು ಬರುತ್ತಿರುವುದನ್ನು ಕಂಡು, ಚಿಂದಿ ಬಟ್ಟೆಯುಟ್ಟು ಮುದಿಯಾಗಿ ಶಕ್ತಿಗುಂದಿ ಕೆಲಸ ಮಾಡುವ ಶಕ್ತಿ ಇಲ್ಲದೆ ಭಿಕ್ಷೆ ಬೇಡಬೇಕಾದ ಸ್ಥಿತಿಗೆ ಇಳಿದಿದ್ದ ಮುದುಕನೊಬ್ಬನು ಗುಂಪನ್ನು—ಯುವಕರ ಗುಂಪನ್ನು—ಭೇದಿಸಿ ಕೊಂಡು ಸಿದ್ಧಾರ್ಥನ ಎದುರು 'ಭಿಕ್ಷೆ ನೀಡಿ' ಎಂದು ಅಂಗಲಾಚಿದ; ನೀಡಿದ ಸಿದ್ಧಾರ್ಥನಿಗೆ ಇದು ಹೀಗೇಕೆಂದು ಅರಿವಾಗಲಿಲ್ಲ. 'ಈತನು ಹೀಗೆಯೇ, ಇದೇ ಸ್ಥಿತಿಯಲ್ಲಿಯೇ ಜನಿಸಿದ್ದನೆ?' ಎಂದು ಆಳು ಚೆನ್ನನನ್ನು ಪ್ರಶ್ನಿಸಿದ. 'ಇವನು ಈಗ ಮುದಿಯನಾಗಿದ್ದಾನೆ. ಕೇವಲ ಎಂಬತ್ತು ವರ್ಷಗಳ ಹಿಂದೆ ನಿನ್ನಂತೆಯೆ ಯುವಕನಾಗಿದ್ದ. ಈಗ ಕೆಲಸಕ್ಕೆ ಬಾರದ ಮುದುಕನಾಗಿದ್ದಾನೆ' ಎಂದ ಚೆನ್ನ. ಅದಕ್ಕೆ ಸಿದ್ಧಾರ್ಥ 'ಈ ಮಜಲು ಸಕಲರಿಗೂ ಬರುವುದೆ?' ಎಂದು ಪ್ರಶ್ನಿಸಿದ. ಚೆನ್ನ ಹೌದೆಂದ. ಸಿದ್ಧಾರ್ಥನಿಗೆ ಮನಸ್ಸು ಕಲಕಿತು. ಅರ ಮನೆಗೆ ಹಿಂದಿರುಗಿ ಬಂದ. ಅಂದು ಅವನಿಗೆ ಊಟ, ಸಂಗೀತ ರುಚಿಸಲಿಲ್ಲ. ಪತ್ನಿಯ ದರ್ಶನ ಬೇಕಾಗಲಿಲ್ಲ. ರಾತ್ರಿ ನಿದ್ದೆ ಕಣ್ಣಿಗೆ ಹತ್ತಲಿಲ್ಲ. ಈ 'ಕಾಲ' ವನ್ನು—ಯುವಕನನ್ನು ಮುದುಕನನ್ನಾಗಿ ಮಾಡುವ 'ಕಾಲ'ವನ್ನು—ತಡೆ ಯುವುದು ಹೇಗೆ ಎಂದು ತಿಳಿಯಬೇಕೆಂದು ಪರಿತಪಿಸಿದ. ಇದರ ಕಪಿಮುಷ್ಟಿ ಯಿಂದ ಪಾರಾಗುವುದು ಎಂತು ಎಂದು ಮನದಲ್ಲಿಯೇ ಪ್ರಶ್ನೆ ಹಾಕಿಕೊಂಡ. ಆ ಕ್ಷಣದಲ್ಲಿ ಉತ್ತರ ಹೊಳೆಯಲಿಲ್ಲ. ಅಂದಿನ ರಾತ್ರಿ ದುಃಸ್ವಪ್ನಗಳು ಶುದ್ಧೋ ದನನಿಗೆ ನಿದ್ರೆ ತರಲಿಲ್ಲ. ಮಾರನೆ ಬೆಳಗ್ಗೆ ಅರಮನೆಯ ಜ್ಯೋತಿಷ್ಕರು ಕನಸಿನ ವೃತ್ತಾಂತವನ್ನು ಬಿಡಿಸಲು ಯತ್ನಿಸಿ ವಿಫಲರಾದರು. ಆದರೆ ಒಬ್ಬ ಮುನಿ ಅದನ್ನು ವಿವರಿಸಿದ: ಇನ್ನು ಕೆಲದಿನಗಳೊಳಗಾಗಿ ನಿನ್ನ ಮಗ ಸನ್ಯಾಸಿ

ಯಾಗುವನೆಂದ. ರಾಜ ಚಿಂತೆಯಿಂದ ಕಳೆಗುಂದಿದ. ಸಂತಸ ಮಾಯವಾಯಿತು. ಮಗನ ಅರಮನೆಯ ಒಳಪಹರೆಯನ್ನು ಇನ್ನೂ ಹೆಚ್ಚುಮಾಡಿಸಿದ.

ಮತ್ತೊಂದು ದಿನ ಮಾರುವೇಷದಲ್ಲಿ ಸಿದ್ಧಾರ್ಥ ಮತ್ತು ಚೆನ್ನ ನಗರದ ಸುಖದುಃಖಗಳನ್ನು, ನಿಜವಾದ ಒಳ್ಳೆಯದನ್ನು, ಕೆಟ್ಟದ್ದನ್ನು ಕಂಡು ಬರುವ ಸಲುವಾಗಿ ತೆರಳಿದರು. ಅಂದು ರೋಗಿಯೊಬ್ಬನನ್ನು ಕಂಡ. ಈ ಎಲ್ಲ ಮಜಲೂ ದಾಟಿದ ಮೇಲೆ ಕೊನೆಯಲ್ಲಿ ಬರುವ ಸಾವನ್ನಪ್ಪಿದ ಮನುಷ್ಯನನ್ನು ಕಂಡ. 'ಇವು ಸರ್ವರಿಗೂ ಬರುವುವೇ ?' ಎಂದು ಪ್ರಶ್ನಿಸಿದ. ಅಹುದೆಂದ ಚೆನ್ನ. ಮನಸ್ಸು ದುಃಖತಪ್ತವಾಯಿತು. ಅರಮನೆಗೆ ಹಿಂದಿರುಗಿದ. ಮನಸ್ಸು ಇನ್ನೂ ದೃಢವಾಯಿತು, ಇವುಗಳೆಲ್ಲವನ್ನೂ ತಪ್ಪಿಸಿಕೊಳ್ಳಲು ಉಪಾಯವೇನು ಎಂದು ತಿಳಿಯಬೇಕೆಂದು. ರಾಜನ ಚಿಂತೆ ಮತ್ತೂ ಪ್ರಬಲವಾಯಿತು. ಸಿದ್ಧಾರ್ಥನಿಗೆ ರಾಜಮರ್ಯಾದೆ, ಸಂತೋಷ, ಹಾಡು, ನೃತ್ಯ, ಸುಂದರ ನೋಟಗಳು, ಊಟ, ನಿದ್ದೆ, ವಿಶ್ರಾಂತಿಗಳು ಬೇಡವಾದುವು. ನಾನು ಸರಿಯಾಗಿ ಬದುಕಿ ಇತರರನ್ನು ಹೇಗೆ ಬದುಕಿಸಲಿ ಎಂಬೊಂದು ಆಸೆ ತಾನೇ ತಾನಾಯಿತು. ಶುದ್ಧೋದನ ಇಷ್ಟಾದರೂ ತನ್ನ ಆ ದೂರದಾಸೆಯನ್ನು, ಮಗ ರಾಜಾಧಿರಾಜನಾಗಲೆಂಬ ಆಸೆಯನ್ನು ಬಿಡಲೆ ಇಲ್ಲ. ಕೋಟೆಯ ಬಾಗಿಲಿನ ಬಳಿ ಪಹರೆಯನ್ನು ಮತ್ತೂ ಹೆಚ್ಚಿಸಿದನು. ಸಿದ್ಧಾರ್ಥ ಮನದಲ್ಲಿಯೇ ಯೋಚಿಸಿದ : 'ಬ್ರಹ್ಮ ಈ ಪ್ರಪಂಚವನ್ನು ಏಕೆ ಸೃಷ್ಟಿಸಿದ ? ಈ ಪ್ರಪಂಚದಲ್ಲಿ ಕಷ್ಟ ಸಂಕಟಗಳನ್ನು ಏಕೆ ಇಟ್ಟಿದ್ದಾನೆ ? ಅವನು ಸರ್ವಶಕ್ತನೇ ಆಗಿದ್ದರೆ ಈ ಲೋಕದ ಕಷ್ಟ ಸಂಕಟಗಳನ್ನು ಏಕೆ ತೆಗೆಯಲಿಲ್ಲ ? ಇದನ್ನು ತೆಗೆಯುವ ಶಕ್ತಿ ಅವನಲ್ಲಿಲ್ಲದಿದ್ದರೆ, ಅವನನ್ನು ಸರ್ವಶಕ್ತನೆಂದೂ ಪೂಜ್ಯನೆಂದೂ ನಾವೇಕೆ ಪರಿಗಣಿಸಬೇಕು ?' ಎಂದೆಲ್ಲಾ ಯೋಚಿಸಿದ. ಶುದ್ಧೋದನನ ಆಸೆ ಕಡಮೆ ಆಗಲಿಲ್ಲ. ಬಾಗಿಲ ಬಳಿ ಮೂರರಷ್ಟು ಪಹರೆ ಹೆಚ್ಚಿಸಿದ. ಬೆಳಗಿನ ಹೊತ್ತಾಗಲಿ, ರಾತ್ರಿಯ ಹೊತ್ತಾಗಲಿ ಈ ಬಾಗಿಲಿನ ಮೂಲಕ ಆಚೆಗಾಗಲಿ, ಈಚೆಗಾಗಲಿ ಹೋಗಲು ಬಿಡಲೆಕೂಡದೆಂದು ಕಟ್ಟಪ್ಪಣೆ ಮಾಡಿದ.

ಸಿದ್ಧಾರ್ಥ ಒಂದು ರಾತ್ರಿ ಕುಳಿತು ಯೋಚಿಸಿದ : ತಾನು ಕಾಡಿಗೆ ಹೋಗಿ ಸತ್ಯಸ್ವರೂಪವನ್ನು ಅರಿತು ಬರಬೇಕು. ಮತ್ತು ಹೊರಡಲು ಸರಿಯಾದ ಕಾಲವು ಬಂದೊದಗಿದೆ ಎಂದು ತಿಳಿದುಕೊಂಡ. ಮೇಲೆದ್ದ, ಕಣ್ಣನ್ನು ಆಚೆ

ಈಚೆ ಹಾಯಿಸಿದ. ತನ್ನ ಪತ್ನಿ ಇತ್ತ ಪಕ್ಕದಲ್ಲಿ ಮಲಗಿದ್ದಾಳೆ. ಇವನ ಮನದಲ್ಲಿ ಯಾವ ಯೋಚನೆಗಳು ಹರಿದಾಡುತ್ತಿವೆ ಎಂಬುದರ ಪರಿವೆಯೇ ಇಲ್ಲದೆ ಮಲಗಿದ್ದಾಳೆ. ಆ ಮಲಗಿದ್ದ ನಾರಿಯನ್ನು ಬಿಟ್ಟು ಹೊರಡಲು ಎದ್ದುನಿಂತ. ಆದರೆ ಅವನನ್ನು ಅದಾವುದೊ ಶಕ್ತಿಯೊಂದು ಹಿಂದಕ್ಕೆಳೆಯುತ್ತಿತ್ತು. ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿದುಬರುತ್ತಿತ್ತು. 'ಪತ್ನಿಯೆ, ಮಗುವೆ, ತಂದೆಯೆ, ಪ್ರಿಯ ಪುರಜನರೆ, ನೀವುಗಳೆಲ್ಲರೂ ದುಃಖವನ್ನು ಸಹಿಸಿಕೊಳ್ಳಿ. ನಾನಿಂದು ಈ ನಗರವನ್ನು ಬಿಡುವೆನು: ಮತ್ತೆ ಹಿಂತಿರುಗುವುದೆ ಇಲ್ಲ. ನಾನು ಯಾವುದಕ್ಕಾಗಿ ಹೊರಟಿದ್ದೇನೋ ಯಾವುದನ್ನು ಹುಡುಕುತಿದ್ದೇನೋ ಅದು ದೊರೆಯುವವರೆಗೂ ಹಿಂತಿರುಗುವುದಿಲ್ಲ.' ಎಂದು ಮನದಲ್ಲಿ ನುಡಿದು ಪತ್ನಿಗೆ ವಂದಿಸಿ, ಮೂರು ಬಾರಿ ಆಕೆಯ ಹಾಸಿಗೆಯನ್ನು ಪ್ರದಕ್ಷಿಣೆ ಮಾಡಿದ. ಆಕೆಯ ಸೌಂದರ್ಯ ಮತ್ತು ಅವನ ಹೃದಯದಲ್ಲಿ ಬಲವಾಗಿ ಬೇರೂರಿದ್ದ ಪ್ರೀತಿ ಅವನನ್ನು ಹಿಂದಕ್ಕೆಳೆಯುತ್ತಿತ್ತು. ಮಗುವಿನ ಸುಂದರ ಮುಖವನ್ನು ಪ್ರೀತಿಯಿಂದ ಚುಂಬಿಸಿದ. ಕಷ್ಟದಿಂದ ಹೊರಹೊರಟ. ಜಗವೆಲ್ಲ ಕತ್ತಲೆಯ ಸೆರಗಿನೊಳಗೆ ನಿದ್ರೆಯ ಗುಂಗಿನಲ್ಲಿ ಅಡಗಿತ್ತು. ಹೋಗಿ ಚೆನ್ನನನ್ನು ಎಬ್ಬಿಸಿದ. ತನ್ನ ಕುದುರೆಯನ್ನು ತರಹೇಳಿದ. ಕುದುರೆ ಬಂದಿತು. ನಗರವನ್ನೂ ತನ್ನ ನಿವಾಸವನ್ನೂ ಮತ್ತೊಮ್ಮೆ ನೋಡಿ ತ್ಯಜಿಸಿದ. ಚೆನ್ನನನ್ನೂ ಕಣ್ಣೀರಿಡುತ್ತಿರುವ ಕುದುರೆಯನ್ನೂ ಹಿಂದಕ್ಕೆ ಕಳುಹಿಸಲು ವಿಶ್ವಪ್ರಯತ್ನವನ್ನೇ ಮಾಡಬೇಕಾಯಿತು. ಲೋಕಕಲ್ಯಾಣಾರ್ಥವಾಗಿ ತನ್ನ ಸುಖವನ್ನು ಕಡೆಗಣಿಸಿದ.

ಇಲ್ಲಿಯ ವರೆಗಿನ ಕಥೆ 'ಲೈಟ್ ಆಫ್ ಏಷ್ಯಾ'ದಲ್ಲಿ ಅರ್ಧವನ್ನು ಮಾತ್ರ ಮುಗಿಸುತ್ತದೆ. ಕಥೆ ಮನೋಹರವಾಗಿದೆ. ಓದುಗರನ್ನು ವಶಪಡಿಸಿಕೊಳ್ಳುತ್ತದೆ. ಈ ಕಲಾಕೃತಿಯನ್ನು ರಚಿಸಿದ ಕವಿ ಎಡ್ವಿನ್ ಆರ್ನಾಲ್ಡ್ ಪ್ರಶಂಸೆಗೆ ಅರ್ಹನು. ತಾನು ಕೀರ್ತಿಶಿಖರವನ್ನು ಏರಿಕೊಂಡಿರುವುದು ಒಂದೇ ಅಲ್ಲ, ಸತ್ಕಾರ್ಯವನ್ನೆಸಗಿ ಕೀರ್ತಿವಂತನಾಗಿ ಬಾಳಿದ್ದಾನೆ.

—ಎಂ. ಆರ್. ಸಿ. ನಾಗರಾಜನ್.

# ರಬ್ಬೈ ಬೆನ್ ಎಜ್ರ

## 'RABBI BEN EZRA'

ನನಗೆ ಜೀವನ ಬೇಸರವೆನಿಸಿದಾಗ ಬ್ರೌನಿಂಗ್ ಮರೆಹೋಗುತ್ತೇನೆ. ಅಂತಹ ಸಮಯಗಳಲ್ಲಿ ಅವನಂತಹ ಟಾನಿಕ್ ಬೇರೆ ಇಲ್ಲ. ಪ್ರಪಂಚವು ವಾಸಿಸಲು ಯೋಗ್ಯವಾದ ಸ್ಥಳವಲ್ಲ, ಜೀವನ ವ್ಯರ್ಥ ಎಂದು ಯೋಚಿಸುವ ನಿರಾಶಾವಾದಿಗಳು ಬ್ರೌನಿಂಗನ ಕವನಗಳನ್ನು ಓದಿ ಅರ್ಥಮಾಡಿಕೊಂಡರೆ ತಮ್ಮ ಅಭಿಪ್ರಾಯವನ್ನು ಬದಲಾಯಿಸಬಹುದು. ಬ್ರೌನಿಂಗ್ ಕವನಗಳು ಸಾಮಾನ್ಯ ಓದುಗರಿಗೆ ಕಷ್ಟವೆಂದು ತೋರಬಹುದು. ಅವು ತತ್ತ್ವಗಳಿಂದ, ವಿಚಾರಗಳಿಂದ ತುಂಬಿವೆ. ಅವನ್ನು ಪದೇ ಪದೇ ಓದುತ್ತಿದ್ದರೆ ಪ್ರತಿಯೊಂದು ಓದಿಗೂ ಹೊಸ ಹೊಸ ಅರ್ಥಸಂಪತ್ತು ಗಳಿಕೆಯಾಗುತ್ತದೆ. ಬಾಳನೌಕೆ ಮುಂದೆ ಸಾಗಬೇಕಾದರೆ ದೊಡ್ಡ ಗುರಿ ಬೇಕು. ಭವಿಷ್ಯದಲ್ಲಿ ನಂಬುಗೆ ಬೇಕು. ಅನಿಶ್ಚಯ ನಮ್ಮನ್ನು ಸೋಮಾರಿಗಳನ್ನಾಗಿ ಮಾಡುತ್ತದೆ. ಬ್ರೌನಿಂಗನ ಪ್ರತಿಯೊಂದು ಕವನವೂ ನಮ್ಮನ್ನು ಹುರಿದುಂಬಿಸುತ್ತದೆ, ನಮ್ಮಲ್ಲಿ ಧೈರ್ಯ ವನ್ನು ತುಂಬುತ್ತದೆ. "ರಬ್ಬೈ ಬೆನ್ ಎಜ್ರ" ಅವನ ಹಿರಿಯ ಕವನಗಳಲ್ಲಿ ಒಂದು. ಇದರಲ್ಲಿ ಅವನು ತನ್ನ ತತ್ವಗಳ ಬಟ್ಟೆಯನ್ನು ಇಳಿಸಿದ್ದಾನೆ. ಇದು ಶ್ರದ್ಧಾವಂತವಾದ ಮುದಿತನದ ಮಹಾ ಸಾಧನೆಯ ಹಾಡು. ಪಕ್ವವಾದ ಪರಿಣತವಾದ ಸತ್ಯದರ್ಶನದಿಂದ ತತ್ವಗಳನ್ನು ವಿಚಾರಿಸಿ ಅರ್ಥ ವಿವರಣೆ ಮಾಡುವುದು ಹೇಗೆ ಎನ್ನುವುದಕ್ಕೆ ಈ ಕವನ ಒಂದು ದಿವ್ಯ ದೃಷ್ಟಾಂತ.

ಈ ಕವನದ ಮೊದಲನೆಯ ಪದ್ಯವೇ ಸ್ವಾರಸ್ಯವಾಗಿದೆ. ಒಬ್ಬ ಮುದುಕ ರಬ್ಬೈ "ಬನ್ನಿ, ನನ್ನೊಡನೆ ಮುದುಕರಾಗಿ!" ಎಂದು ನಮ್ಮನ್ನು ಕರೆಯು ತ್ತಾನೆ. ಇದೇನು ಹುಚ್ಚು ಎಂದುಕೊಳ್ಳುತ್ತಿದ್ದರೆ ತಕ್ಷಣವೇ "ಶ್ರೇಷ್ಠವಾದದ್ದು ಇನ್ನು ಬರಬೇಕು ಅಷ್ಟೇ" ಎನ್ನುತ್ತಾನೆ. ಒಂದು ಬಾರಿ ರಬ್ಬೈ ಕೈಯಲ್ಲಿ ಸಿಕ್ಕಿದ ನಾವು ತಪ್ಪಿಸಿಕೊಳ್ಳುವಹಾಗಿಲ್ಲ. 'ಮೂರ್ಖ' ಎಂದು ಅವನು ನಮ್ಮನ್ನು ಕರೆದರೂ ನಾವು ಬಾಯಿ ಮುಚ್ಚಿಕೊಂಡಿರಬೇಕು. ಎಷ್ಟಂದರೂ ಮುದುಕ ಅವನು, ತತ್ವಜ್ಞಾನಿ ಅವನು. ನಮಗೆ ಅವಮಾನವೇನು?

ನಮ್ಮ ಕಾಲ ಪರಮಾತ್ಮನ ಕೈಯಲ್ಲಿದೆ. "ನಾನು ಸೃಷ್ಟಿಸಿರುವುದು ಅಖಂಡವನ್ನು. ತಾರುಣ್ಯ ತೋರಿಸುವುದು ಅರೆವಾಸಿ ಮಾತ್ರ. ನನ್ನನ್ನು ನಂಬಿ. ಸರ್ವವನ್ನೂ ನೋಡಿ. ಎದೆಗುಂದಬೇಡಿ" ಎಂದು ದೇವನು ಹೇಳು ತ್ತಾನೆ. ಮುಪ್ಪಿನಲ್ಲಿ ಕೊನೆಗೊಳ್ಳದ ತಾರುಣ್ಯ, ಹಣ್ಣಿನಲ್ಲಿ ಕೊನೆಗೊಳ್ಳದ ಕಾಯಿ ಎರಡೂ, ಉಪಯೋಗಕ್ಕೆ ಬಾರದವು. ಹಣ್ಣು ತಿನ್ನಲು ರುಚಿ; ನಿಷ್ಠೆ ಯುಳ್ಳ ಮುದಿತನವೂ ಅಷ್ಟೇ ರುಚಿ. ಅದು ಹೇಗೆ ಎನ್ನುವುದನ್ನು ರಬ್ಬೈ ಮುಂದಿನ ಪದ್ಯಗಳಲ್ಲಿ ತಿಳಿಸುತ್ತಾನೆ.

ತಾರುಣ್ಯವೆಂದರೆ ಅತೃಪ್ತಿ, ಚಂಚಲತೆ. ಇವತ್ತು ಗುಲಾಬಿ, ಇನ್ನೊಂದು ದಿನ ಇನ್ನೊಂದು ಹೂ. "ನನ್ನ ಶಕ್ತಿಗಿಂತ ಮಿಗಿಲಾಗಿರುವುದು ಯಾವುದು? ನನ್ನಿಂದ ಯಾವುದು ಅಸಾಧ್ಯ? ನಾನು ಎಲ್ಲವನ್ನೂ ಸಾಧಿಸಬಲ್ಲೆ" ಎಂದು ತಾರುಣ್ಯ ಹೇಳುತ್ತದೆ. ತಾರುಣ್ಯದ ಕಾಲ ಕಳೆದನಂತರ ಅದರ ಬಯಕೆಗಳು ನನಸಾಗದ ಕನಸುಗಳು ಎಂದು ನಮಗೆ ಗೋಚರವಾಗುತ್ತದೆ. ಆದರೆ ನಾವು ತಾರುಣ್ಯದ ಕಾಲವನ್ನು ವ್ಯರ್ಥವೆಂದು ತಿಳಿಯಬಾರದು. ನಾವು ವ್ಯರ್ಥ ವೆಂದು ಎಣಿಸಿರುವುದೆಲ್ಲ ವ್ಯರ್ಥವಾಗಿರುವುದಿಲ್ಲ; ಅವು ಒಂದು ಹೊಸ ಅನುಭವ ವನ್ನು ಕಲ್ಪಿಸಿಕೊಟ್ಟಿರುತ್ತವೆ. ನಮ್ಮ ಗುರಿಯ ಸಾಧನೆಗೆ ಪ್ರತಿಸೋಲೂ ಸಹಾಯಕವಾಗಿರುತ್ತದೆ.

ನಮ್ಮ ಜೀವನದಲ್ಲಿ ನಮಗೆ ಅನೇಕ ಸಂದೇಹಗಳು ಬರುತ್ತವೆ. ಇದು ನಾವು ಹೆಮ್ಮೆಪಡಬೇಕಾದ ಸಂಗತಿ. ಕೀಳು ಪ್ರಾಣಿಗಳಿಗೆ ಸಂದೇಹವೆಂಬು ದಿರುವುದಿಲ್ಲ. ಅವು ಬೆಳಕಿನ ಕಿಡಿ ಕಲಕದ ಮಣ್ಣುಮುದ್ದೆಗಳು. ಪಕ್ಷಿ ಯಾಗಲಿ, ಮೃಗವಾಗಲಿ ತನ್ನ ಹೊಟ್ಟೆ ತುಂಬಿದ ಬಳಿಕ ತೃಪ್ತಿಗೊಂಡಿರುತ್ತದೆ. ತಿನ್ನುವ, ತೇಗುವ, ತೇಲುವ ಜೀವನವೊಂದೇ ಮನುಷ್ಯನ ಜೀವನವಾದರೆ ಅದು ಬಡಾಯಿ ಕೊಚ್ಚಿಕೊಳ್ಳುವ ಬಡಜೀವನ ಮಾತ್ರ. ಅಂತಹ ಸುಖ ಕಳೆದ ಬಳಿಕ ಜೀವನಕ್ಕೆ ಅಂತ್ಯ.

ಯಾವುದು ಬೇರೆಯವರಿಂದ ಬಯಸದೆ, ತೆಗೆದುಕೊಳ್ಳದೆ ಇತರರಿಗೆ ಸಹಾಯ ಮಾಡುತ್ತದೆಯೋ ಆ ಶಕ್ತಿಯ ಅಣುಗಳು ನಾವು ಎನ್ನುವುದನ್ನು ತಿಳಿದು ಸಂತೋಷಪಡಿ. ಒಂದು ಕಿಡಿ ನಮ್ಮ ಮಣ್ಣು ಮುದ್ದೆಯನ್ನು ಕಲಕು ತ್ತದೆ. ದಾತನಾದ ದೇವರ ಸಾನ್ನಿಧ್ಯದಲ್ಲಿರುವವರು ನಾವು, ಇತರರಿಂದ ನೆರವು

ತೆಗೆದುಕೊಳ್ಳುವ ಪಂಗಡಕ್ಕೆ ಸೇರಿದವರಲ್ಲ ಎನ್ನುವುದನ್ನು ನಾವು ನಂಬಲೇ ಬೇಕು. ನಾವು ಬೆಳೆದ ಪಶುಗಳಲ್ಲ, ಮೇಲಿಂದ ಇಳಿದ ದೇವತೆಗಳು.

ಅಂದ ಮೇಲೆ ಕಷ್ಟಗಳು ಬರಲಿ, ಚೇಳಿನ ರೂಪ ತಾಳಿ ಕಡಿಯಲಿ. ಕಡಿತ ಹೇಗಿರಬೇಕು ? ಮಲಗಿದವರು ಕುಳಿತುಕೊಳ್ಳುವಷ್ಟಾಗಲಿ, ಕುಳಿತವರು ನಿಲ್ಲುವಷ್ಟಾಗಲಿ, ನಿಂತವರು ನಡೆಯುವಷ್ಟಾಗಲಿ ಮಂದವಾಗಿರಬಾರದು. ಅದರ ಕಡಿತ ತೀವ್ರವಾಗಿರಬೇಕು, ಮಲಗಿದವರು ಎದ್ದು ಓಡುವಂತಿರಬೇಕು! ಕಷ್ಟ ಗಳು ನಮ್ಮನ್ನು ಆಗಾಗ ಎಚ್ಚರಿಸಿ ಸಹಾಯ ಮಾಡುತ್ತವೆ. ಜೀವನದಲ್ಲಿ ಕಾಲುಭಾಗ ಸುಖ, ಮುಕ್ಕಾಲುಭಾಗ ನೋವಾಗಿರಲಿ! ಹೆಣಗಾಡು, ಗುರಿ ಯನ್ನು ಬಿಡಬೇಡ; ಕಲಿ, ನೋವನ್ನು ನಿರ್ಲಕ್ಷಿಸು; ಧೈರ್ಯಮಾಡು, ಕಷ್ಟ ವೆಂದು ಗೊಣಗಬೇಡ!

ನನ್ನ ಜೀವನದಲ್ಲಿ ನಾನು ಏನನ್ನು ಬಯಸಿದ್ದೆ, ಎಷ್ಟು ಸಾಧಿಸಲು ಆಗದೆ ಉಳಿದುಕೊಂಡಿತು ಎಂದು ಯೋಚಿಸಿದಾಗ, ಆ ಯೋಚನೆ ನನ್ನನ್ನು ಅಣಕಿಸುವುದರ ಜೊತೆಗೆ ಸಮಾಧಾನವನ್ನು ತರುತ್ತದೆ. ನೀವು "ಇದೇನು ಅಸಂಗತೋಕ್ತಿ!" ಎಂದು ಬೇಕಾದರೆ ಅನ್ನಿ. ಸಮಾಧಾನ ಹೇಗೆಂದರೆ, ನನ್ನ ಕಾರ್ಯ ಪೂರ್ತಿಯಾಗಲಿಲ್ಲವೆಂದಮೇಲೆ—ನನ್ನ ಶ್ರಮ, ಶ್ರದ್ಧೆ ಸರಿಯಾಗಿದ್ದಲ್ಲಿ —ಕಾರ್ಯ ಹಿರಿಯದಾಗಿರಬೇಕು. ನಮ್ಮ ಗುರಿ ಕೈಗೆ ಎಟುಕದಷ್ಟು ದೂರ ವಿರಬೇಕು. ಅಂದರೆ ನಾವು ಕಾರ್ಯತತ್ಪರರಾಗಿರುತ್ತೇವೆ. ಚಿಕ್ಕ ಕಾರ್ಯ ವಾದರೆ ಯಾರುತಾನೆ ಮಾಡಲಾರರು ? ಕಾರ್ಯ ಬೇಗ ಪೂರ್ಣವಾದರೆ ಅದು ಪೂರ್ಣವಾದಮೇಲೆ ಮಾಡುವುದೇನು ? ಬ್ರೌನಿಂಗ್ ತನ್ನ ಇನ್ನೊಂದು ಕವನ ದಲ್ಲಿ ("Andrea del Sarto") ಇದನ್ನೇ ಹೇಳುತ್ತಾ, ಕಾರ್ಯ ಇಲ್ಲಿಯೇ ಕೈಗೂಡುವುದಾದರೆ ಸ್ವರ್ಗ ಮತ್ತೇಕೆ ಎಂದು ಕೇಳುತ್ತಾನೆ. ಬ್ರೌನಿಂಗಿಗೆ ಗುರಿ ಮುಟ್ಟುವುದು ಮುಖ್ಯವಲ್ಲ. ಗುರಿ ಮುಟ್ಟಲು ಆಗಲಿ, ಆಗದಿರಲಿ, ಗುರಿಯ ಸಾಧನೆಗೆ ನಾವು ಪಟ್ಟ ಶ್ರಮವೆಷ್ಟು ಎನ್ನುವುದು ಮುಖ್ಯ. ಆದುದರಿಂದ ನಾನು ಗುರಿ ಮುಟ್ಟಲಿಲ್ಲವೆಂದರೆ, ಗುರಿ ದೊಡ್ಡದು, ಕಾರ್ಯ ಪೂರ್ಣವಾಗಲಿಲ್ಲ. ಎಂದರೆ ಮತ್ತೆ ಕಾರ್ಯ ಮಾಡಬೇಕು . . . ಕಾರ್ಯ ಮಾಡುವುದು ಎಂದರೆ ಬೆಳೆಯುವುದು, ಊರ್ಜಿತವಾಗುವುದು, ಜೀವಿಸುವುದು. ಅಲ್ಲಿಗೆ ನನ್ನ ಜೀವನ ಸಾರ್ಥಕ ಎಂದು ನನಗೆ ಸಂತೋಷವಾಗುತ್ತದೆ. ಯಾರೂ ಮುಟ್ಟದ ಶಿಖರ

ವನ್ನು ಮುಟ್ಟಲೆಳಸುವ ಪ್ರಯತ್ನವೇ ನನ್ನನ್ನು ತೃಪ್ತಿಗೊಳಿಸಿ ಕಣಿವೆಯಲ್ಲಿ ಹರಿದಾಡುವ ಪಶುಜೀವನದಿಂದ ಅದನ್ನು ಮೇಲಕ್ಕೆತ್ತುತ್ತದೆ.

ಆತ್ಮವನ್ನು ನಾವು ದೇಹದ ಸೇವಕವೃತ್ತಿಗೆ ನೇಮಿಸಿದರೆ ನಮಗೂ ಪಶುಗಳಿಗೂ ವ್ಯತ್ಯಾಸವೇನು? ಬರಿಯ ದೇಹ ಆತ್ಮವನ್ನು ನಮ್ಮ ವಿಶ್ರಾಂತಿ ಸ್ಥಳವಾದ ಶಿಖರದ ಕಡೆ ಎಷ್ಟು ದೂರ ಎತ್ತೀತು? ನಮ್ಮ ಆತ್ಮದ ಪೋಷಣೆಗೆ ದೇಹ ಎಷ್ಟರಮಟ್ಟಿಗೆ ಬೆಂಬಲ ಕೊಡುತ್ತದೆ ಎಂಬ ಪ್ರಶ್ನೆಯನ್ನು ನಾವು ಹಾಕಿಕೊಳ್ಳಬೇಕು.

ಹಾಗೆಂದು ಪ್ರಾಣಿಜೀವನ ನಮಗೆ ಸಹಾಯಮಾಡದೆ ಇಲ್ಲ. ನಾನು ಈಗ ಗಳಿಸಿದ ಶಕ್ತಿಗೆ, ಪರಿಪೂರ್ಣತೆಗೆ, ನನ್ನ ಕಳೆದ ಬಾಳು ಎಷ್ಟೋ ಸಹಕಾರಿಯಾಗಿದೆ. ಕಣ್ಣು, ಕಿವಿ—ತಮ್ಮ ಕೆಲಸ ಮಾಡಿವೆ. ಮೆದುಳು ಜ್ಞಾನವನ್ನೆಲ್ಲ ಶೇಖರಿಸಿಟ್ಟುಕೊಂಡಿದೆ. ಈ ಇಂದ್ರಿಯಗಳ ಸಹಾಯದಿಂದ ಒಂದು ಬಾರಿಯಾದರೂ ನಮ್ಮ ಹೃದಯ "ಜೀವಿಸುವುದು ಮತ್ತು ಕಲಿಯುವುದು ಎಷ್ಟೊಂದು ಸೊಗಸು!" ಎಂದು ಮಿಡಿದಿರುತ್ತದೆ. ಒಂದಲ್ಲ, ಅನೇಕ ಬಾರಿ ಅದು "ಮೆಚ್ಚಿಗೆ ಎಲ್ಲ ನಿನಗಿರಲಿ! ನಿನ್ನ ಮಾಟವಷ್ಟೂ ನನಗೆ ಕಾಣುತ್ತದೆ. ನಿನ್ನ ಶಕ್ತಿಯನ್ನು ನೋಡಿದ ನನಗೆ ನಿನ್ನ ಪ್ರೇಮ ಸ್ಪಷ್ಟವಾಗಿ ಕಾಣುತ್ತದೆ. ನೀನು ಮಾಡಿರುವುದೆಲ್ಲ ಯೋಗ್ಯವಾಗಿದೆ. ನಾನು ಮನುಷ್ಯನಾಗಿ ಹುಟ್ಟಿ ಕೃತಾರ್ಥನಾದೆ. ಸೃಷ್ಟಿಕರ್ತನೇ, ತಿರುಗಿ ಸೃಷ್ಟಿಸು, ಪಕ್ವಮಾಡು—ನೀನು ಮಾಡುವುದರಲ್ಲಿ ನನಗೆ ಪೂರ್ಣ ನಂಬುಗೆ ಇದೆ!" ಎಂದು ನುಡಿದಿರುತ್ತದೆ.

ದೇಹ ಬಲು ಸೊಗಸು. ಭೂಮಿಗೆ ಎಳೆಯಲ್ಪಟ್ಟ ಆತ್ಮ ಅದರಲ್ಲಿ ಆಶ್ರಯ ಪಡೆದಿದೆ. ಆದರೂ ವಿಶ್ರಾಂತಿಯನ್ನು ಬಯಸುತ್ತದೆ. ಈ ನಮ್ಮ ಸ್ವತ್ತುಗಳು ಎರಡೂ ಹಿರಿಯ ಗುರಿಯನ್ನು ಸಾಧಿಸಲು ಆವಶ್ಯಕ. ದೇಹದ ಸಹಾಯವಿಲ್ಲದೆ ನಾನು ಅದನ್ನು ಸಾಧಿಸಿದೆ, ಪೂರ್ಣಮಾಡಿದೆ ಎನ್ನುವುದು ತಪ್ಪು. ಹಕ್ಕಿಯು ಹಾರುವುದರ ಜೊತೆಗೆ ಹೇಗೆ ಹಾಡುತ್ತದೆಯೋ ಹಾಗೆ ನಾವು "ಒಳಿತೆಲ್ಲ ನಮ್ಮದು, ಆತ್ಮ ದೇಹದ ಬೆಳವಣಿಗೆಗಲ್ಲ, ದೇಹ ಆತ್ಮದ ಬೆಳವಣಿಗೆಗೆ ಬೆಂಬಲ ಕೊಡುತ್ತದೆ" ಎಂದು ಹೇಳೋಣ.

ಆದುದರಿಂದ ನಾನು ಮುಪ್ಪನ್ನು ಬಯಸುತ್ತೇನೆ. ಮುಪ್ಪು ತಾರುಣ್ಯದ ಭರವಸೆಗಳನ್ನು ಪೂರ್ಣ ಮಾಡಿಕೊಡುವ ಘಟ್ಟ. ಬಾಳ ಹೋರಾಟ ಮುಗಿದ

ಮೇಲೆ ಬೆಳೆದುಕೊಂಡ ಮೃಗದಿಂದ ನಾನು ದೂರವಾಗಿ ಒಬ್ಬ ಮನುಷ್ಯನಾಗಿರುತ್ತೇನೆ. ಮನುಷ್ಯನೆಂದರೆ ಅಂಕುರಾವಸ್ಥೆಯಲ್ಲಿರುವ ದೇವರು.

ಅನಂತರ ನಾನು ವಿಶ್ರಾಂತಿ ಪಡೆಯುತ್ತೇನೆ. ಈ ವಿಶ್ರಾಂತಿ ಮುಂಬರುವ ಕಾಳಗದಲ್ಲಿ ಮುಖ್ಯಭಾಗ ವಹಿಸಲು ಅನುಕೂಲ ಸಮಯ ಮಾತ್ರ. ಈ ಕಾಲದಲ್ಲಿ ಮುಂಬರುವ ಕಾಳಗಕ್ಕೆ ಯಾವ ಆಯುಧವನ್ನು, ಯಾವ ರಕ್ಷೆಯನ್ನು ಉಪಯೋಗಿಸಲಿ ಎಂದು ಆಲೋಚನೆ ಮಾಡಬೇಕು.

ತಾರುಣ್ಯ ತೊಲಗಿದ ಬಳಿಕ ನನ್ನ ಲಾಭ ನಷ್ಟಗಳನ್ನು ನೆನೆಯುತ್ತೇನೆ. ಬೂದಿಯೇ ಹೆಚ್ಚಿನ ಭಾಗವಾಗಿರಬಹುದು, ಉಳಿದ ಭಾಗ ಚಿನ್ನ. ನಾನು ಆ ಚಿನ್ನವನ್ನು ತೂಗಿ ಜೀವನವನ್ನು ಹೊಗಳುವುದಾಗಲಿ ತೆಗಳುವುದಾಗಲಿ ಮಾಡುತ್ತೇನೆ. ತಾರುಣ್ಯದೊಡನೆ ತಬ್ಬಿಬ್ಬು ತೊಲಗುತ್ತದೆ. ಜ್ಞಾನ ವಯಸ್ಸಿಗೆ ಪಿತ್ರಾರ್ಜಿತವಾಗಿ ಬಂದದ್ದು. ಕಾದಾಟ ಮುಗಿದ ಮೇಲೆಯೇ ನಿಜಸ್ಥಿತಿ ತಿಳಿಯುವುದು.

ಬಾಳಬೈಗಿನಲ್ಲಿ, ಕದನದಿಂದ ಕದಲಿದ ಮೇಲೆ, ಹಿಂದೆ ನಡೆದದ್ದನ್ನು ನೆನಪಿಗೆ ತಂದುಕೊಂಡು, ಈಗಾಗುವುದರ ಜೊತೆಗೆ ಹೋಲಿಸಿ ನಾನು ನನ್ನ ಅಂತ್ಯ ಅಭಿಪ್ರಾಯವನ್ನು ಕೊಡಬಹುದು. ನಮ್ಮ ಕೋಪ ಇದರಲ್ಲಾಗಲಿ, ಅದರಲ್ಲಾಗಲಿ, ಒಟ್ಟಿನಲ್ಲಿ ಸರಿಯೆ? ನಮ್ಮ ಮೂಗೊಪ್ಪಿಕೆ ವ್ಯರ್ಥವಾಯಿತೆ? ಇವೆಲ್ಲ ತಿಳಿಯುವುದು ಈಗ. 'ನಾನು ಭೂತಕಾಲವನ್ನು ಯೋಗ್ಯವಾಗಿ ಕಳೆದಿದ್ದೇನೆ. ಇನ್ನು ಭವಿಷ್ಯತ್ತನ್ನು ನಿರ್ಭೀತಿಯಿಂದ ಎದುರುಗೊಳ್ಳಬಹುದು' ಎಂದು ನನಗೆ ಧೈರ್ಯ ಬರುತ್ತದೆ.

ಈದಿನ ಕಲಿತದ್ದನ್ನು ನಾಳೆ ಮಾಡಲು ಮಾತ್ರ ಶಕ್ತನಾದ ಮನುಷ್ಯನಿಗೆ ಹೆಚ್ಚಿಗೆ ಏನೂ ದೊರಕಲಾರದು. ನಾವು ದಿನೇ ದಿನೇ ಪರಮಾತ್ಮನ ಕಾರ್ಯದ ಕ್ಷಣಿಕದರ್ಶನಗಳನ್ನು ಗಮನಿಸಿ, ಅವುಗಳನ್ನು ನಮ್ರತೆಯಿಂದ ಅನುಕರಿಸಬೇಕು.

ತಾರುಣ್ಯದಲ್ಲಿ, ಇತರರು ಕಷ್ಟಪಟ್ಟು ಸಾಧಿಸಿದುದನ್ನು ಕದ್ದು ಕಲಿತುಕೊಳ್ಳುವುದಕ್ಕಿಂತಲೂ, ನಾವೇ, ಎಷ್ಟೇ ಒರಟಾಗಿ ಆಗಲಿ, ಸಾಧಿಸಲು ಹೋರಾಡುವುದು ಮೇಲು. ಹಾಗೆಯೇ ಸಾವಿನ ಮೂಲಕ, ನಮ್ಮ ಅನುಭವಕ್ಕೊಳಗಾಗದ ಕಡೆ, ವಿವೇಚಿಸದೆ ಮುನ್ನುಗ್ಗುವುದಕ್ಕಿಂತ, ಜೀವನದ ಅಂತ್ಯದಲ್ಲಿ ನಮಗೆ ಉಸಿರಾಡುವಷ್ಟು ಕಾಲಾವಕಾಶ ಇಟ್ಟುಕೊಂಡು, ಸುತ್ತಲೂ

ನೋಡಿ ಆಗು ಹೋಗುಗಳನ್ನು ತೂಗುವುದು ಮೇಲು. ಸಾವಿಗೆ ಅಂಜಬೇಡಿ. ಮುಪ್ಪನ್ನು ಹೇಗೆ ಬಯಸಬಹುದೋ ಹಾಗೆಯೇ ಸಾವನ್ನು ಬಯಸಬಹುದು.

ನಮಗೆ ಈ ಕಾಲದಲ್ಲಿ ಯಾವುದು ಸರಿ, ಯಾವುದು ಒಳಿತು, ಯಾವುದು ಅನಂತ ಎಂಬುದನ್ನು ನಿರ್ದಿಷ್ಟವಾಗಿ ತಿಳಿದುಕೊಂಡರೆ ಸಾಕು. ನಮ್ಮ ಕೈಗಳು ನಮ್ಮವು ಎನ್ನುವುದು ಎಷ್ಟು ಖಂಡಿತವಾದ ವಿಷಯವೋ ಅಷ್ಟೇ ಖಂಡಿತವಾಗಿ ಅವು ನಮ್ಮವಾಗುತ್ತವೆ. ಈಗ ನಮ್ಮ ಜ್ಞಾನ ಪಕ್ವವಾಗಿರುತ್ತದೆ. ಅಭಿಪ್ರಾಯ ಗಳು ಖಚಿತವಾಗಿರುತ್ತವೆ.

ನಾವು ಈ ಕಾಲದಲ್ಲಿ, ಕೊನೆಯಸಾರಿ, ವಿಶಾಲ ಪ್ರಜ್ಞಾಶಾಲಿಗಳಿಂದ ಸಂಕುಚಿತರನ್ನು ಬೇರೆ ಮಾಡಬಹುದು. ಲೋಕವನ್ನು ದೂರಿದ ನಾನು ಸರಿಯೋ, ನನ್ನ ಆತ್ಮವನ್ನು ನೋಯಿಸಿದ ಅವರು ಸರಿಯೊ? ಈ ಪ್ರಶ್ನೆಗೆ ವಯಸ್ಸು ಉತ್ತರ ಕೊಡುತ್ತದೆ. ಮನಸ್ಸಿಗೆ ನೆಮ್ಮದಿ ತರುತ್ತದೆ.

ನನಗೆ ಬೇಡವಾಗಿರುವುದು ಹತ್ತು ಜನರಿಗೆ ಬೇಕು. ನಾನು ಹಿಂಬಾಲಿಸುವು ದನ್ನು ಅವರು ಹಿಂಬಾಲಿಸುವುದಿಲ್ಲ. ನಾನು ಸ್ವೀಕರಿಸುವುದನ್ನು ಅವರು ನಿರಾ ಕರಿಸುತ್ತಾರೆ. ಹತ್ತು ಜನ ಹಾಗೆ, ಹತ್ತು ಜನ ಹೀಗೆ. ಯಾರನ್ನು ನಂಬೋಣ?

ಲೋಕ ತನ್ನ ಕಣ್ಣಿಗೆ ಕಂಡುದನ್ನು ಮಾತ್ರ ಪರಿಗಣಿಸುತ್ತದೆ. ಒಬ್ಬ ಮನುಷ್ಯನ ಯೋಗ್ಯತೆಯನ್ನು ಕಾರ್ಯ ಸಾಧಿಸಿದ ಮಾತ್ರದಿಂದಲೇ ತೀರ್ಮಾನ ಮಾಡುತ್ತದೆ. ಅದು ಶುದ್ಧ ಮೂರ್ಖತನ. ದೇವರ ಕಣ್ಣಿಗೆ ಕಾಣುವ ಎಲ್ಲ ಕಾರ್ಯವನ್ನೂ ಮುಟ್ಟಿನೋಡುವಷ್ಟು ಪ್ರಪಂಚದ ಕೈಬೆರಳುಗಳು ನಾಜೂ ಕಾಗಿಲ್ಲ. ಕಾರ್ಯಸಾಧನೆಗೆ ಹೊರತಾದ ಎಳೆತ, ಸ್ವಭಾವಗಳೆಲ್ಲ, ದೃಢವಲ್ಲದ ಉದ್ದೇಶಗಳೆಲ್ಲ, ಒಬ್ಬ ಮನುಷ್ಯನ ವ್ಯಕ್ತಿತ್ವವನ್ನು ಬಲಪಡಿಸುತ್ತವೆ. ನಿಷ್ಕೃಷ್ಟ ವಾಗಿ ಹೇಳಲಾಗದ ವಿಚಾರಗಳು, ಭಾಷೆಯಲ್ಲಿ ಬರೆಯಲಾಗದ ಕಲ್ಪನೆಗಳು, ಬಯಕೆಗಳು, ಪ್ರೇರಣೆಗಳು—ಇವೆಲ್ಲವನ್ನೂ ಜನರು ಗಣನೆಗೆ ತೆಗೆದುಕೊಳ್ಳುವು ದಿಲ್ಲ. ಆದರೆ ಇವೆಲ್ಲವೂ ದೇವರಿಗೆ ಮುಖ್ಯ ಬೇಕು.

"ದೇವರು ಕುಂಬಾರ, ನಾವು ಮಣ್ಣು. ಕುಂಬಾರನಿಗೆ ಮಣ್ಣಿನ ಮೇಲೆ ಮೋಹವಿಲ್ಲ. ಕಾಲಚಕ್ರಕ್ಕೆ ಸುತ್ತುವುದು ನಮ್ಮ ಕೆಲಸ. ಸುಮ್ಮನೆ ಏಕೆ ಯೋಚನೆ ಮಾಡುತ್ತೀರಿ? ಹಿಂದೆ ಹೋಗಿದ್ದು ಹೋಗಿಯೇ ಬಿಟ್ಟಿತು. ಮುಂದೆ ಆಗುವುದು ಅನಿಶ್ಚಿತ. ಅಂತಹ ಅನಿಶ್ಚಿತ ಭವಿಷ್ಯವನ್ನು ಮೆಲುಕುತ್ತಾ ಇಂದಿನ

ಸುಖವನ್ನೇಕೆ ಕಳೆದುಕೊಳ್ಳಬೇಕು? ಹಿಡಿ ಬಟ್ಟಲು, ಕುಡಿ ಮದ್ಯ, ನಡಿ, ಕುಣಿ" ಎಂಬ ಸವಿನುಡಿಗಳಿಗೆ ಮನಸೋಲಬೇಡಿ.

ಮೂರ್ಖ, ಕೇಳಿಲ್ಲಿ! ಈಗಿರುವುದೆಲ್ಲ ಕೊನೆಯವರೆಗೂ ಇರುತ್ತದೆ. ಹಿಂದಿನದನ್ನು ಜ್ಞಾಪಿಸಿಕೊ. ಭೂಮಿ ಬದಲಾಯಿಸುತ್ತದೆ. ಆದರೆ ನಿನ್ನ ಆತ್ಮ ಮತ್ತು ಪರಮಾತ್ಮ ಸ್ಥಿರ. ನಿನ್ನಲ್ಲಿ ಭೂತ, ವರ್ತಮಾನ ಮತ್ತು ಭವಿಷ್ಯ ಮೂರೂ ಬೆರೆದಿವೆ. ಕಾಲಚಕ್ರ ಹಿಂತಿರುಗಬಹುದು, ಇಲ್ಲವೆ ನಿಲ್ಲಬಹುದು. ಕುಂಬಾರ ಸ್ಥಿರ; ಮಣ್ಣು ಸ್ಥಿರ. ದೇವರು ನಿನ್ನನ್ನು ಈ ಯಂತ್ರದ ಮಧ್ಯದಲ್ಲಿ ಹಾಕಿ, ಸುತ್ತಿಸಿ, ನಿನ್ನ ಆತ್ಮಕ್ಕೆ ಒಂದು ಆಕಾರ ಕೊಡುತ್ತಾನೆ.

ತಾರುಣ್ಯದ ತಮಾಷೆಗಳು, ಪುಷ್ಪಪಾತ್ರೆಯ ಬುಡದಲ್ಲಿರುವ ನಾಜೂಕಾದ ನಕ್ಷೆಯಂತೆ, ಅಂಚಿನಲ್ಲಿ ಗಭೀರ ರೂಪಿಕೆಯಲ್ಲಿ ಬದಲಾದರೇನಂತೆ? ಮೊದಲಿದ್ದ ನಕ್ಷೆಯ ಜಾಗದಲ್ಲಿ ವಿಷಮವಾದ ಚಿತ್ರವನ್ನು ಬರೆದರೆ ಅದರ ಬೆಲೆ ಕಡಮೆ ಯಾಗುತ್ತದೆಯೊ? ಕೆಳಗೇನು ನೋಡುತ್ತೀಯೆ, ಮೇಲೆ ನೋಡು! ಲೋಟದ ಅಂದ ಚೆಂದದ ಕಡೆ ನೋಡುವಿ ಏಕೆ? ಅದರ ಉಪಯೋಗದ ಕಡೆ ಲಕ್ಷ್ಯವಿಡು. ಹಬ್ಬದ ದಿನ, ಎಲ್ಲವೂ ಪ್ರಜ್ವಲಿತವಾಗಿರುವಾಗ, ಕಹಳೆಯ ನಾದ ಮೊಳಗಿರು ವಾಗ, ಹೊಸ ಮದ್ಯ ನೊರೆತು ಹರಿಯುತ್ತಿರುವಾಗ, ನಿನ್ನ **ಒಡೆಯನ** ತುಟಿ ಗಳು ಹಂಬಲಿಸುವಾಗ, ಆಗ ನಿನ್ನ ಉಪಯೋಗ ಮುಖ್ಯ. ನೀನು ಸ್ವರ್ಗದ ಸುಖವನ್ನು ಸೂರೆಗೊಳ್ಳಲು ಬೇಕಾದ ಸುಂದರ ಉಪಕರಣ. ನಿನಗೆ ಲೋಕದ ಚಕ್ರದ ಗೊಡವೆ ಏಕೆ?

ದೇವ, ಮನುಷ್ಯರನ್ನು ತಿದ್ದುವ **ನೀನು,** ಆಗಿನಂತೆ ಈಗಲೂ ಬೇಕು. ಬಾಳಸುಂಟರಗಾಳಿಯಲ್ಲಿ ಸಿಕ್ಕಿ ದಿಕ್ಕುಗೆಟ್ಟಾಗಲೂ, ಬಣ್ಣ ಅಸ್ಪಷ್ಟವಾದಾ ಗಲೂ ಆಕಾರ ರೂಪುಕೆಟ್ಟಾಗಲೂ, ಸತ್ಯ ಅಸತ್ಯಗಳು ಬೆರೆತು ನನ್ನನ್ನು ಬೆರಗು ಮಾಡಿದಾಗಲೂ, ನನ್ನ ಕಣ್ಣುಗಳು ಕೋರೈಸಿದಾಗಲೂ, ಎದೆ ಧೈರ್ಯಗೆಟ್ಟಾ ಗಲೂ **ನಿನ್ನ** ದಾಹವನ್ನು ಅಡಗಿಸಬೇಕೆಂಬ ನನ್ನ ಗುರಿ ತಪ್ಪದಿರಲಿ.

ಆದುದರಿಂದ, ದೇವ, ನನ್ನನ್ನು ಸ್ವೀಕರಿಸು, **ನಿನ್ನ** ಕಾರ್ಯಕ್ಕೆ ಬಳಸಿಕೊ. ನನ್ನ ತಪ್ಪುಗಳನ್ನು ಮನ್ನಿಸು. ನನ್ನ ಕಾಲ **ನಿನ್ನ** ಕೈಗಳಲ್ಲಿರಲಿ. ನೀನು ಯೋಚಿಸಿದಂತೆ ಬಟ್ಟಲನ್ನು ಪರಿಪೂರ್ಣ ಮಾಡು. ಮುಪ್ಪು ತಾರುಣ್ಯ ವನ್ನು ಅನುಮೋದಿಸಲಿ. ಸಾವು ಅದನ್ನು ಪರಿಪೂರ್ಣಗೊಳಿಸಲಿ!

ಬ್ರೌನಿಂಗ್ ಹೀಗೆ ಕಷ್ಟ, ನೋವು, ಸೋಲು, ಮುಪ್ಪು, ಸಾವು—ಇವು ಯಾವುದಕ್ಕೂ ಅಂಜಬೇಡಿ ಎಂದು ಹೇಳಿ ನಮ್ಮನ್ನು ಹುರಿದುಂಬಿಸುತ್ತಾನೆ. ದೇವರು ನಮ್ಮ ಬಳಿ ಇದ್ದಾನೆ, ನಮ್ಮ ಕೆಲಸ ಅವನ ಬಳಿ ಹೋಗುವುದು ಎಂದು ಹೇಳಿ, ನಮ್ಮಲ್ಲಿ ಆಸೆಯನ್ನೂ ಧೈರ್ಯವನ್ನೂ ತುಂಬುತ್ತಾನೆ.

ಇಂತಹ ಕವನಗಳು ಸಾಹಿತ್ಯಜೀವನವನ್ನು ಉತ್ತಮಗೊಳಿಸಬೇಕು. ಜನರಲ್ಲಿ ಶಕ್ತಿಯನ್ನು ತುಂಬಬೇಕು. ಆಗ ದೇಶ ಉದ್ಧಾರವಾಗುತ್ತದೆ; ಭೂಮಿ ಸ್ವರ್ಗವಾಗುತ್ತದೆ.

**—ಹಾಲಾಡಿ ಮಾರುತಿರಾವ್.**

---

## ಪರಕಿಹವೆ ಸೋಪಾನ

ಪರದ ಮೆಲ್ಕಣ್ಣಿಟ್ಟು ಧರೆಯ ತುಚ್ಛವೆನುತ್ತ
ತೊರೆದಾಯಸಂಗೊಳ್ಳೆ ದೊರೆವ ಫಲವೇನು?
ಸುರಧನುವಿಗೇಣಿಯಿಡಹೊರಟು ನಿನ್ನಂಗಳದ
ಕಿರಿಹೂವ ಮರೆಯುವೆಯ?—ಮಂಕುತಿಮ್ಮ

ಪರಕಿಹವೆ ಸೋಪಾನವೆಂದು ನೀನೊಪ್ಪುವೊಡೆ
ಪರಕಿಂತಲಿಹವೆಂತು ಜೊಳ್ಳದಾದೀತು?
ಹೊರಲಿಬೇಕೆಂತಾದೊಡಿಹದ ಹೊರೆಗಳನೆಲ್ಲ;
ಜರೆವುದೇಕಿನ್ನದನು?—ಮಂಕುತಿಮ್ಮ

ಒಲ್ಲೆ ನೆನದಿರು ಬಾಳನ್, ಒಲವದೇನೆನ್ನದಿರು,
ಉಲ್ಲಾಸಕೆಡೆಮಾಡು ನಿನ್ನಿನಾದನಿತು;
ನಿಲ್ಲು ಕೆಚ್ಚೆದೆಯಿಂದಲನ್ಯಾಯಗಳನಳಿಸೆ;
ಎಲ್ಲಕಂ ಸಿದ್ಧನಿರು—ಮಂಕುತಿಮ್ಮ

# ಪ್ರಮಾದ

[ಈ ದೃಶ್ಯ ಆಂಗ್ಲ ಕವಿಯೂ ಕಾದಂಬರಿಕಾರನೂ ಆದ **ಥಾಮಸ್ ಹಾರ್ಡಿಯ** "Far from the Madding Crowd" ಎಂಬುದರಿಂದ ಆರಿಸಿಕೊಂಡದ್ದು.]

[**ಕಥಾಸಾರಾಂಶ :—** ಗೇಬ್ರಿಯಲ್ ಓಕ್—ಕುರುಬ ಯುವಕ—ಕುರಿ ಮೇಯಿಸುತ್ತಿದ್ದ. ಒಂದು ದಿನ, ಬಾತ್‌ಷೀಬ ಎವರ್‌ಡೀನ್ ಎಂಬ ಹುಡುಗಿಯನ್ನು ಕುರಿ ಮೇಯಿಸುವ ಕಾವಲಿನಲ್ಲಿ ಆಕಸ್ಮಿಕವಾಗಿ ಕಂಡ—ಅವಳಲ್ಲಿ ಅನುರಾಗಗೊಂಡ. ಅವಳ ಹೆಸರು 'ಬಾತ್‌ಷೀಬ' ಎಂಬುದನ್ನು ಪತ್ತೆ ಹಚ್ಚಿದ. ಅವಳು ಅವಳ ಚಿಕ್ಕಮ್ಮ 'ಹರ್ಸ್ಟ್' ಎಂಬವಳ ಮನೆಯಲ್ಲಿದ್ದಾಳೆಂದು ಗೊತ್ತಾಯಿತು. ಅಲ್ಲಿಗೆ ಹೊರಡುತ್ತಾನೆ. ಅಲ್ಲಿ ಇಬ್ಬರನ್ನೂ ಸಂಧಿಸುತ್ತಾನೆ. ಬಾತ್‌ಷೀಬಳನ್ನು ಮದುವೆಯಾಗುವಂತೆ ಕೇಳುತ್ತಾನೆ. ಅದಕ್ಕೆ ಆ ನಿಷ್ಠುರುಣಿ ಹುಡುಗಿ ಒಲ್ಲೆ ಎಂದು ಅವನನ್ನು ನಿರಾಶೆಗೊಳಿಸುತ್ತಾಳೆ.]

## ದೃಶ್ಯ

[ಶ್ರೀಮತಿ **ಹರ್ಸ್ಟ್**‌ರ ಮನೆ. ಬಡತನದ ಸಂಸಾರವಾದರೂ ಆಂಗ್ಲ ಸಂಪ್ರದಾಯದಂತೆ ಹಜಾರದಲ್ಲಿ ನಾಲ್ಕಾರು ಕುರ್ಚಿಗಳೂ ಮೇಜೂ ಇವೆ. ಹಜಾರಕ್ಕೆ ಎರಡು ಕೊನೆಗಳು. ದೃಶ್ಯ ತೆರೆಯುವಾಗ, ಬಣ್ಣ ಬಣ್ಣದ ಷರಟು, ಪ್ಯಾಂಟ್ಸ್, ಎರಡು ಕಲರಿನ ಬೂಟ್ಸು, 28—30 ವರ್ಷ ವಯಸ್ಸಿನ ಗಂಭೀರಾಕೃತಿಯ **ಗೇಬ್ರಿಯಲ್ ಓಕ್** ಕುರಿಮರಿಯನ್ನು ಕೈಯಲ್ಲೆತ್ತಿಕೊಂಡು, ಹಿಂದೆ ನಾಯಿ **ಜಾರ್ಜ**ನ್ನೂ ಕರೆದುಕೊಂಡು, ಹಸನ್ಮುಖಿಯಾಗಿ ಆನಂದಪರವಶನಾಗಿ ಬರುತ್ತಾನೆ. ಅಲ್ಲೇ ಆಟವಾಡುತ್ತಿದ್ದ ಬೆಕ್ಕೊಂದು ನಾಯಿಯನ್ನು ಕಂಡು, ಗಾಬರಿಯಿಂದ ಕೋಣೆಗೆ ನುಗ್ಗುತ್ತದೆ—ತತ್‌ಕ್ಷಣ ಅಲ್ಲಿಂದ ಒಂದು ಧ್ವನಿ ಹೊರಬೀಳುತ್ತೆ.]

**ಧ್ವನಿ:** ಶ್-ಶ್ ಶ್-ಚೇಲೀ—ಪ್ಚ್—ಪ್ಚ್—ಪ್ಚ್—ಬಾ ಇಲ್ಲಿ. ಯಾಕೆ? ಗಾಬರಿ ಬಿದ್ಬಿಟ್ಟೆಯಾ? . . . ಆ ಹಾಳು ನಾಯಿ ನಿನ್ನ ಹಿಡಿಯೋಕೆ ಬಂತೇ? . . . ಬಾಮ್ಮ . . . ಬಾ.

**ಗೇಬ್ರಿಯಲ್ ಓಕ್:** (ಗಂಭೀರ ವಾಣಿಯಲ್ಲಿ ಧ್ವನಿ ಬಂದ ಕೊಠಡಿಯನ್ನುದ್ದೇಶಿಸಿ) ದಯವಿಟ್ಟು ಕ್ಷಮಿಸಿ. ನನ್ನ ನಾಯಿ ಏನೂ ಮಾಡಲಿಲ್ಲ. ಎಲ್ಲೋ ನಿಮ್ಬೆಕ್ಕೇ ಇದನ್ನು ನೋಡಿದಾಕ್ಷಣ ಬೆದರಿ ಓಡಿರಬೇಕಷ್ಟೆ. ನನ್ನ ನಾಯಿ ಭಂಗಾರದಂಥದು—ಗಾಂಭೀರ್ಯದ ಮುದ್ದೆ ಅದು. ಆರ್ಡರ್ ಮಾಡಿ

ದಾಗ ಮಾತ್ರ ಬಗುಳುತ್ತೆ. ಇಲ್ಲದಿದ್ದರೆ ಅನಾವಶ್ಯಕವಾಗಿ ಬಗುಳಿದರೆ ಎಲ್ಲಿ ಕಂಠಶೋಷಣೆಯಾಗುತ್ತೋ ಅನ್ನೋ ಸೂಕ್ಷ್ಮ ತಿಳಿದಿದೆ ನನ್ನ ನಾಯಿಗೆ. (ಎನ್ನುತ್ತ ನಾಯಿಯನ್ನು ಒಂದು ಸಾರಿ, ಕುರಿಮರಿಯನ್ನೊಂದು ಸಾರಿ ಸವರುತ್ತ ಅಲ್ಲೇ ಇದ್ದ ಕುರ್ಚಿಯೊಂದರಲ್ಲಿ ಕುಳಿತುಕೊಳ್ಳುತ್ತಾನೆ.)

[ಮತ್ತೊಂದು ಕೋಣೆಬಾಗಿಲಿನಲ್ಲಿ ಈ ಧ್ವನಿಯನ್ನು ಕೇಳಿ ಬಂದ ಶ್ರೀಮತಿ ಹಸ್ಟ್ವರ್ ಪ್ರವೇಶ. ಗೇಬ್ರಿಯಲ್ ಓಕ್ ಎದ್ದು ನಿಲ್ಲುವನು.]

**ಹಸ್ಟ್ವರ್:** ಓ ಹೋ ಹೋ . . . ಏನಪ್ಪಾ ಓಕ್. ಎಲ್ಲಿ, ಕಾಣ್ಲೇ ಇಲ್ವಲ್ಲ ಇಷ್ಟು ದಿವಸ? ಅಂತೂ ವಿಶ್ವಾಸವಿಟ್ಟು ಬಂದ್ಯಲ್ಲಾ ಮನೇ ತನಕ. ಸಂತೋಷ! ಆರೋಗ್ಯ ತಾನೆ? ಇನ್ನೇನ್ ಸಮಾಚಾರಾ?

**ಗೇ. ಓ.:** ಏನ್ಹೇಳ್ಲಮ್ಮ ನಾನು? ಎಲ್ಲಾ ನೀವೆ ಹೇಳ್ಬೇಕು. ಸುಮ್ನೆ ಹೀಗೇ ಬಂದೆ—ಹಾಗೇನೇ ಬಾತ್‍ಷೀಬಾನ ನೋಡಿಕೊಂಡ್ಹೋಗೋಣಾ ಅಂತ. ಇದ್ದಾಳೇನು ಮನೇಲಿ?

**ಹಸ್ಟ್ವರ್:** ಇಲ್ಲ. ಎಲ್ಲೋ ಕಾಣ್ಲಿಲ್ಲ, ಎಲ್ಲಾದರೂ ಹೊರಗೆ ಹೋಗಿದ್ದಾಳೋ ಏನೋ. ನಾಲ್ಕಾರು ದಿವಸಗಳಿಂದ ಇಲ್ಲೇ ಇದಾಳೆ.

**ಗೇ. ಓ.:** ಓ ಸರಿ!

**ಹಸ್ಟ್ವರ್:** ಅಂದ್ಹಾಗೇ—ಕುರೀಹಿಂಡು ಹೇಗಿದೆ? ಚೆನ್ನಾಗಿದೆಯಾ? ಉಣ್ಣೆ ಕತ್ತರಿಸಿದ್ದಾಯ್ತೋ ಇನ್ನೂ ಇಲ್ವೋ?

**ಗೇ. ಓ.:** ಇನ್ನೂ ಎಲ್ಲಮ್ಮ—ಇನ್ನೂ ಒಂದೆರಡು ತಿಂಗಳು ಆಗಬೇಕು.

**ಹಸ್ಟ್ವರ್:** (ನಿಧಾನ) ಎಲ್ಲೋ ಬರಲಿಲ್ಲವೇ ಇವಳೂ—ನಿನಗೇನೂ ಬೇರೆ ಕೆಲಸವಿಲ್ಲವಷ್ಟೆ?

**ಗೇ. ಓ.:** ಏನಿಲ್ಲ ಅನ್ನಿ! ಆಗ್ಲಿ! ಅದಕ್ಕೇನು . . . ಬಂದಿರೋದೇ ಉಂಟಂತೆ. ಇನ್ನೊಂದ್ನಿಮಿಷದಲ್ಲಿ ಏನ್ ಕೊಳ್ಳೇ ಹೋಗೋದೂ . . . ಬೇಗ ಬಂದ್ಬಿಡ್ತಾಳಲ್ವೇ?

**ಹಸ್ಟ್ವರ್:** ಬರ್ದೇ ಏನು—ಬಂದ್ಬಿಡ್ತಾಳೆ. ಎಲ್ಲೋ ಹೊರಗೆ ಹೋಗಿದ್ದಾಳೆ. ಇನ್ನೇನು ಸಮಾಚಾರಾ, ಓಕ್? ಬಹಳ ಬಹಳ ವಿಚಾರಿಸ್ಕೊಳ್ತಾ

ಇದ್ದೀ. ಕುರಿಮರಿ ಬೇರೆ ತಂದಿದ್ದೀ. (ಎಂದು ಕುರಿಮರಿಯ ಹತ್ತಿರ ಹೋಗಿ ಸವರುತ್ತಾ) ಎಷ್ಟು ಮುದ್ದಾಗಿದೆ! ಹ್ಞಂ?

**ಗೇ. ಓ.:** ಏನಿಲ್ಲಮ್ಮ. ಏನ್ಹೇಳ್ಲಿ ಸಮಾಚಾರ? ಹಾಗೇನೇ ನೋಡ್ಕೊಂಡು ಹೋಗೋಣ ಅಂತ ಬಂದೆ. ಜೊತೆಗೆ ಷೀಬಾಗೆ ಈ ಮರಿಗಳನ್ನು ಕಂಡರೆ ಇಷ್ಟ. ಈ ಮರಿ ಒಂದನ್ನು ತಂದೆ. Present ಮಾಡೋಣ ಅಂತ ಅನ್ನಿಸ್ತು.

**ಹಸ್ಟ್ಕ್ಗ:** ಹ್ಞಂ ಹ್ಞಂ. ಅವಳಿಗೆ ಇಷ್ಟವಿಲ್ದೇ ಇರೋದು ಯಾವುದು? ಕಣ್ಣಿಗೆ ಕಂಡದ್ದೆಲ್ಲಾ ಚೆನ್ನಾ ಅಂತಾಳೆ. ಇನ್ನೇನ್ಸಮಾಚಾರ—ಗುಟ್ಟು ಹೇಳ್ಬಾರ್ದೇನೋ ನಮಗೆಲ್ಲ—ಆಗಲಪ್ಪ. ಈಗಿನ ಕಾಲದ ಹುಡುಗ್ರೇ ಹೀಗೆ—ಗುಟ್ಟುಗುಳಿ ಅಂದ್ಕೊಂಡು ಬಿಂಕದಲ್ಲಿರೋದು.

**ಗೇ. ಓ.:** ಅಯ್ಯೋ! ಅದೇನಿಲ್ಲಮ್ಮ. ಗುಟ್ಟೂ ಇಲ್ಲ. ಗುಳಿ ಮೊದಲೇ ಇಲ್ಲ. ಗುಟ್ಟೇನು ನಿಮ್ಮ ಮುಂದೆ? ಬಾತ್‌ಷೀಬಾ ನನ್ನ ಮದುವೆಯಾಗೋಕೆ ಒಪ್ತಾಳೇನೋ ಅಂತ, ಒಂದು ಮಾತು ಕೇಳೋಣ ಅಂತ ಅಷ್ಟೆ.

**ಹಸ್ಟ್ಕ್ಗ:** ಊಂಹ್ಞಂ — ಸರಿಯಪ್ಪ. ನೀನು ನಿಜವಾಗಿ ಕೇಳ್ತೀಯಾ?

**ಗೇ. ಓ.:** ಓಹೋ . . . ಆದರೆ . . . ಇನ್ನೆಲ್ಲಾದ್ರೂ ಮದುವೆ ಮಾತುಕತೆ ಆಗಿದ್ಯೆ? ಯಾರಾದ್ರೂ ಬರ್ತಿದಾರೋ?

**ಹಸ್ಟ್ಕ್ಗ:** ಬರ್ದೇ ಏನಪ್ಪ. ಒಬ್ಬರ ಮೇಲೊಬ್ಬರು ಬರ್ತಿದಾರೆ. ಭಾರಿ ಭಾರಿ ಜಮೀನ್ದಾರರುಗಳೇ!

**ಗೇ. ಓ.:** ಉ್ಞಂ. (ತಲೆ ಅಲ್ಲಾಡಿಸುವನು.)

**ಹಸ್ಟ್ಕ್ಗ:** ಅಲ್ದೇ ಹುಡುಗೀನೂ ಏನೂ ತೆಗೆದ್ಹಾಕೋ ಹಾಗಿಲ್ಲ. ರೂಪವತಿ. ಲಕ್ಷಣವಾಗಿದಾಳೆ. ತಕ್ಕಮಟ್ಟಿಗೆ ವಿದ್ಯೆ ಬುದ್ಧಿ ಇದೆ. ಜಾಣೆ.

**ಗೇ. ಓ.:** (ನಿಟ್ಟುಸಿರುಬಿಡುತ್ತ) ಹ್ಞಂ. ಸರಿಯಮ್ಮ. (ಏಳುತ್ತ) ಇನ್ನು ನಾನ್ಬರ್ತೀನಿ. (ಹೊರಡುವನು. ವ್ಯಂಗ್ಯವಾಗಿ) ಬಂದ ಕೆಲಸವಾದ ಹಾಗಾಯ್ತಲ್ಲ. ನಾನು ಬಡವ. ನಿಜವಾಗಿ ನನ್ನ ಒಪ್ತಾಳ್ಯೇ . . . ಉ್ಞಂ ಹ್ಞೂಂ—ಯಾರೋ ಒಬ್ಬ ವ್ಯಕ್ತಿ ಬಂದಿದ್ದ ಅಂತ ಒಂದು ತಿಳಿಸಿಬಿಡಿ ಅವಳಿಗೆ. (ಹೊರಡುವನು.)

(ಅಷ್ಟರಲ್ಲಿ ಕೋಣೆಯೊಳಗಿಂದ 18 ವರ್ಷದ ಹರೆಯದ ಹುಡುಗಿ, ಕರವಸ್ತ್ರ ವನ್ನು ಆಡಿಸುತ್ತ ಹ ಹ ಹ ಹ ಎಂದು ನಗುತ್ತ ಪ್ರವೇಶಿಸಿದ್ದು ಗೇಬ್ರಿಯಲ್ ಓಕನ್ನು ನಿಲ್ಲಿಸುತ್ತದೆ. ಬಾತ್‌ಷೀಬಾ ಅವನ ಹತ್ತಿರಕ್ಕೆ ಹೋಗುವಳು. ಹರ್ಸ್ಟ್ ತಾಯಿ ಒಳಗೆ ಹೋಗುವಳು.)

**ಬಾತ್‌ಷೀಬ:** ಏನು! ಹೊರಟ್ಬಿಟ್ರಲ್ಲಾ Mr. Oak! ನಾನು—ಬಾತ್‌ಷೀಬಾ! (ಎಂದು ಮುಖ ಮುಂದು ಮಾಡುತ್ತಾಳೆ.)

**ಗೇ. ಓ.:** (ನಗುತ್ತ ವಿನೋದವಾಗಿ) ಹ್ಞೂಂ. ನಿಮ್ಮನ್ನೇ ನೋಡೋಣ ಅಂತ ಬಂದೆ. ಆದರೆ ರಾಣಿಯವರು ಎಲ್ಲೋ ದಯಮಾಡಿಸಿದ್ರಿ. ಮನೇಲಿ ಇರಲಿಲ್ಲ.

**ಷೀಬಾ:** ನನ್ನನ್ನೋಡೋಕ್ಕೆ ನೀವು ಬಂದಿದ್ದು ಗೊತ್ತಿತ್ತು. ಆದರೆ ನೀವು ನನ್ನ ಕೇಳೋಕೆ ಬಂದಿದ್ದೀರಿ ಅಂತ ಗೊತ್ತಿರಲಿಲ್ಲ. ನಾನ್ಯಾಕೆ ರೂಂ ಇಂದ ತಕ್ಷಣ ಹೊರಬಿದ್ದೆ ಅಂದರೆ ನಾನೂ ನೀವೂ ವಿಶ್ವಾಸದ ಸವಿನುಡಿ ಗಳೊಂದೆರಡನ್ನು ಆಡುವ ಅವಕಾಶವಿಲ್ಲದ ಹಾಗೆ ತಪ್ಪು ಮಾಡಿಬಿಟ್ಟೆಲ್ಲ ನಮ್ಮ ಚಿಕ್ಕಮ್ಮ ಅಂತ. ಜೊತೆಗೆ ಪ್ರಮಾದಕ್ಕಿಟ್ಟುಕೊಂಡೀತು ಅಂತ ಬೇರೆ.

**ಗೇ. ಓ.:** (ಆಶ್ಚರ್ಯ) ಪ್ರಮಾದ! ಪ್ರಮಾದ! ಏನ್ ಹಾಗಂದ್ರೆ?

**ಷೀಬಾ:** ಹೌದು, ಪ್ರಮಾದ. ಖಂಡಿತ ಪ್ರಮಾದ. ಜೊತೆಗೆ ನನಗಾಗಲೇ ಯಾವನೋ ಯುವಕ ಇದಾನೆ ಅಂತ ಅಂದದ್ದು. ಜೊತೆಗೆ ಅವರೂ ಇವರೂ ಕೇಳೋಕೆ ಬರ್ತಾರೆ ಅಂದದ್ದು. ಇದೇ ಪ್ರಮಾದ.

**ಗೇ. ಓ.:** ಹಾಗಾದ್ರೆ . . . ಅವೆಲ್ಲಾ ಸುಳ್ಳೇ?

**ಷೀಬಾ:** ಖಂಡಿತ ಸುಳ್ಳು. ನನ್ನ ನೋಡೋಕೆ ಬಂದೋರೂ ಇಲ್ಲ, ಹೋದೋರೂ ಇಲ್ಲ. ನಾನು ಯಾರನ್ನೂ ಅಪೇಕ್ಷಿಸಿಯೂ ಇಲ್ಲ. ನನಗೆ ಯಾವ ಪ್ರಿಯನೂ ಇಲ್ಲ.

**ಗೇ. ಓ.:** (ವಿಶ್ವಾಸ ಕುತೂಹಲಗಳಿಂದ) ಖಂಡಿತ, ನಿಜವಾಗಿ? ಹಾಗಾದರೆ ಈಗ ನನಗೆ ಸಂತೋಷವಾಯ್ತು. (ಎನ್ನುತ್ತ ಅವಳ ಕೈಯನ್ನು ಹಿಡಿದುಕೊಳ್ಳುತ್ತಾನೆ) . . . ನೋಡು ಷೀಬಾ, ನನಗೆ ಸಾಕಷ್ಟು ಭೂಮಿ ಕಾಣಿ ಇದೆ.

**ಷೀಬಾ:** ಹೌದು, ಇದೆ.

**ಗೇ. ಓ.:** ನನಗೆ ಯಾರೋ ಒಂದಿಷ್ಟು ಸಾಲ ಕೊಟ್ಟಿದ್ದರು. ಅದೂ ಇಷ್ಟರಲ್ಲೇ ತೀರಿಸ್ಬಿಡ್ತೀನಿ. ಅಲ್ಲದೆ ನಾವು ಮದುವೆಯಾಗಿಬಿಟ್ಟರೆ, ಈಗ ದುಡೀತಿರೋದಕ್ಕಿಂತ ಎರಡರಷ್ಟು ಹೆಚ್ಚು ದುಡಿದು ಸಂಪಾದಿಸ್ತೀನಿ.

**ಷೀಬಾ:** ಈಗದಕ್ಕೇನು ಆಗ್ಬೇಕೂ?

**ಗೇ. ಓ.:** ನೀನು ನನ್ನ ರಾಣಿಯಾಗಬೇಕು.

**ಷೀಬಾ:** (ವ್ಯಂಗ್ಯವಾಗಿ) ನಾನು ನಿಮ್ಮ ರಾಣಿಯಾಗ್ಬೇಕೇ . . . (ತಲೆ ಆಲ್ಲಾಡಿಸುತ್ತ) ಉಹುಂ. Mr. Oak, ನಾನು ನಿಮ್ಮನ್ನ ಮದುವೆ ಯಾಗ್ತೀನಿ ಅಂತ ಹೇಳಿರಲಿಲ್ವಲ್ಲ.

**ಗೇ. ಓ.:** ಅದೆಲ್ಲಾ ಒಂದು ಕಥೆ. ಹಾಗಾದ್ರೆ, ಹೋಗ್ತಿದ್ದವನ್ನ ಏಕೆ ತಡೆದಿ?

**ಷೀಬಾ:** ಯಾಕೆ ಅಂತೀರಾ? ನಾನು ನಿಮಗೆ ಒಂದೆರಡು ಮಾತು ಹೇಳ್ಬೇಕು ಅಂತಿದ್ದೆ. ಇಲ್ನೋಡಿ, ನನಗೆ ಯಾವ ಪ್ರಿಯನೂ ಇಲ್ಲ. ನಾನು ಯಾರನ್ನೂ ಅಪೇಕ್ಷಿಸಿಯೂ ಇಲ್ಲ. ಜೊತೆಗೆ ಆಸ್ತಿ ಪಾಸ್ತಿಗೂ ನಾನು ಮನ ಸೋಲೋಳಲ್ಲ. ನಿಮ್ಮನ್ನ ಮದುವೆ ಆಗೋ ಹಾಗಿದ್ರೆ ನಾನು ಹೀಗೇಕೆ ಬರ್ತಿದ್ದೆ? ತಪ್ಪುವಿಷಯಗಳಿಂದ ಪ್ರಮಾದವಾದೀತೆಂದು ತಿಳಿದು ಸರಿಪಡಿಸಿ ದರೆ, ತೊಂದರೆ ಇಲ್ಲ ಅಂತ ಬಂದೆ.

**ಗೇ. ಓ.:** ತೊಂದರೆ ಏನಿಲ್ಲ! ನೋಡು ಷೀಬಾ, ಮನಸ್ಸಿಗೆ ಆಯಾಸ ಮಾಡ್ಕೋಬೇಡಾ. ಯೋಚಿಸು. ನಿನ್ನ ಮುಖದ ಚೆಲುವು, ನಿನ್ನ ಹಾವ ಭಾವ ನನ್ನನ್ನ ಮುಗ್ಧಗೊಳಿಸಿವೆ. ನಿನ್ನಲ್ಲಿ ನಾನು ಮೋಹಪರವಶನಾಗಿದ್ದೇನೆ. ನಿರಾಶನನ್ನಾಗಿ ಮಾಡಬೇಡ. ಯೋಚಿಸು, ಷೀಬಾ. ಆತುರಪಡಬೇಡ. ನಿನ್ನನ್ನು ನಾನು ನೋಡಿದಂದಿನಿಂದ ನೀನು ನನ್ನ ಹೃದಯದ ರಾಣಿಯಾದಿ. (ಸುಮ್ಮನಿದ್ದು) ಷೀಬಾ, ಈಗಲಾದರೂ ಹೇಳು. ನೀನು ನನ್ನನ್ನ ಮದುವೆ ಮಾಡ್ಕೊಳ್ತೀಯಾ?

**ಷೀಬಾ:** ಸ್ವಲ್ಪ ಯೋಚಿಸಬೇಕಾಗಿದೆ. ಕಾಲಾವಕಾಶ ಬೇಕಲ್ಲ!

**ಗೇ. ಓ.:** ಆಗ್ಲಿ, ಅದಕ್ಕೇನು . . . ನೋಡು ಷೀಬಾ. ನನ್ನ ಪ್ರೇಮದ ಒಗಟನ್ನು ಬಿಡಿಸು. ನನ್ನನ್ನ ಮದುವೆಯಾಗು. ನಾನು ನಿನ್ನನ್ನು ಅತ್ಯಂತವಾಗಿ ಪ್ರೀತಿಸ್ತೀನಿ.

**ಶೀಬಾ:** (ನಗುತ್ತ) ಸರಿ! ಆಮೇಲೆ . . . ಹೇಳಿ. ಇನ್ನೂ ಏನೇನ್ಹೇಳ್ಬೇಕು ಅಂತೀರೋ ಎಲ್ಲಾ ಹೇಳಿ.

**ಗೇ. ಓ.:** ಏನ್ಹೇಳ್ಲಿ ಶೀಬಾ. ಈಗ ನಾನು ನಿನ್ನ ಆರಾಧಕ. ನೋಡು, ನಾವು ಸುಖವಾಗಿರಬಹುದು. ನನಗೆ ಕೊಳಲು ಬರುತ್ತೆ. ನಿನಗೂ ಸಂಗೀತ ಇಷ್ಟ. ನಿನಗೂ ಒಂದು ಪಿಯಾನೊ ತಂದ್ಕೊಡ್ತೀನಿ. ಬೇಜಾರಾದಾಗ ಇಬ್ಬರೂ ಖುಷಿಯಾಗಿ ಬಾರಿಸಿ ಆನಂದಿಸಬಹುದು.

**ಶೀಬಾ:** ಹೌದು. ನನಗೆ ಅದು ಇಷ್ಟ.

**ಗೇ ಓ.:** ಒಂದು ಸಣ್ಣ ಬಂಡೀನೂ ತೆಗೆದುಕೊಳ್ಳೋಣ. ಹಣ್ಣು ಹಂಪಲು, ಕೋಳಿ ಇತ್ಯಾದಿ ಇತ್ಯಾದಿ ನಮಗೆ ಬೇಕಾದ್ದೆಲ್ಲಾ ತೆಗೊಳ್ಳೋಣ.

**ಶೀಬಾ:** ಓ . . . ನನಗೆ ಅದು ತುಂಬಾ ಇಷ್ಟ.

**ಗೇ. ಓ.:** ಆಮೇಲೆ, ಮದುವೆಯಾದ ಮೇಲೆ, ವರ್ತಮಾನ ಪತ್ರಿಕೆಗಳಿಗೆಲ್ಲಾ ನಮ್ಮ ಫೋಟೋಗಳನ್ನು ಕಳುಹಿಸಿಬಿಡೋಣ. ಚೆನ್ನಾಗಿರುತ್ತೆ.

**ಶೀಬಾ:** ಹಾಗೆ ಮಾಡಿದರೆ ಚೆನ್ನ.

**ಗೇ. ಓ.:** ಮಕ್ಕಳಾದ ಮೇಲೆ ಅವುಗಳ ಜೊತೇಲಿ ಆಡ್ಕೊಂಡಿರಬಹುದು. ನೋಡು ಶೀಬಾ: ನೀನಿದ್ದಕಡೆ ನಾನು, ನಾನಿದ್ದ ಕಡೆ ನೀನು ಇರಬಹುದು.

**ಶೀಬಾ:** ಸ್ವಲ್ಪ ತಾಳಿ. ಏನೇನೋ ಮಾತಾಡ್ತಾ ಇದೀರಿ. ಅದು ಅಕ್ರಮ. ಇಲ್ನೋಡಿ: ನನಗೆ ನಿಮ್ಮನ್ನು ಮದುವೆಯಾಗಲು ಇಚ್ಛೆ ಇಲ್ಲ.

**ಗೇ. ಓ.:** ಯೋಚಿಸು.

**ಶೀಬಾ:** ಯೋಚಿಸಿದೆ. ಒಂದರ್ಥದಲ್ಲಿ ಮದುವೆಯೇನೋ ಚೆನ್ನಾಗಿರುತ್ತೆ. ಆದರೆ, ಗಂಡಿಲ್ಲದೆ ವಧುವಾಗಬಹುದು. ಹೆಂಗ್ಸಾದವಳು ಹೀಗೆ ಮಾಡಲು ಸಾಧ್ಯವಿಲ್ಲ. (**ಎನ್ನುತ್ತ ಹಿಂದೆ ಸರಿಯುವಳು**)

**ಗೇ. ಓ.:** ಅದೆಲ್ಲಾ ಹುಚ್ಚು. ನೋಡು, ನೀನು ಹಾಗೆ ಮಾಡಬೇಡ. ಯಾತಕ್ಕೋಸ್ಕರ ನೀನು ನನ್ನನ್ನ ಮದುವೆಯಾಗೊಲ್ಲ?

**ಶೀಬಾ:** ಆಗೊಲ್ಲ.

**ಗೇ. ಓ.:** ಯಾಕೆ ಅಂತ ಹೇಳ್ಬಾರ್ದೇನೂ?

**ಶೀಬಾ:** ನಾನು ನಿಮ್ಮನ್ನ ಪ್ರೀತಿಸುವುದಿಲ್ಲ. ಆದ್ದರಿಂದ.

**ಗೇ. ಓ.:** ಸರಿ! ಆದರೆ . . . (ಈ ಹೊತ್ತಿಗೆ ಅವಳು ಆಲಸ್ಯ ಮನೋಭಾವನೆ ತೋರಿಸುತ್ತ ಆಕಳಿಸುವಳು) ನಾನು ನಿನ್ನನ್ನು ಪ್ರೀತಿಸ್ತೇನಲ್ಲ ಮತ್ತೆ!

**ಷೀಬಾ:** ಆ್ಞಂ. Mr. Oak, ದಯವಿಟ್ಟು ಬೇಜಾರುಪಡಿಸಬೇಡಿ.

**ಗೇ. ಓ.:** (ಹುಚ್ಚು ಬೇಜಾರಿನಿಂದ) ಇಲ್ಲ. ಹಾಗಾದರೆ ನಾನೊಂದು ಕೆಲಸ ಮಾಡ್ತೀನಿ. ಏನೂ ಅಂದ್ರೆ, ಏನೇ ಆಗಲಿ ನನ್ನ ಜೀವವಿರುವ ತನಕ ನೀನೇ ನನ್ನ ಪ್ರೇಮಾರಾಧನೆಯ ಮೂರ್ತಿ. ನಿನ್ನನ್ನೇ ಪ್ರೀತಿಸ್ತಿರ್ತೀನಿ. ಇದರ ಮೇಲೆ ದೈವೇಚ್ಛೆ.

**ಷೀಬಾ:** Mr. Oak, ನೀವು ಇಷ್ಟು ಹೇಳೋದ್ರಿಂದ ನಾನು ನಿಮ್ಮನ್ನು ಮದುವೆಯಾಗದಿರೋದು ಶುದ್ಧ ತಪ್ಪು. ಅದನ್ನ ಒಪ್ಕೊಳ್ತೀನಿ. ನಾನು ಏನ್ಮಾಡ್ಲಿ? ಮದುವೆಯಾಗಲು ಸಾಧ್ಯವಿಲ್ಲ. ಯಾಕೊ ಗೊತ್ತಿಲ್ಲ. ಆದ್ದರಿಂದ ನೀವು ನನ್ನನ್ನು ಮರೆತ್ಬಿಡಿ. (ಗೇಬ್ರಿಯಲ್ ತಲೆ ತಗ್ಗಿಸಿ ನೆಲ ನೋಡುತ್ತಿರುತ್ತಾನೆ.) Mr. Oak! ನೀವು ನನಗಿಂತಲೂ ಉತ್ತಮ ಸ್ಥಿತೀಲಿದ್ದೀರಿ. ನಾನು ಬಡವಿ. ಜೊತೆಗೆ ನಿಮಗಿಂತ ಸ್ವಲ್ಪ ಮಟ್ಟಿಗೆ ವಿದ್ಯಾವಂತೆ. ನಾನು ನಿಮ್ಮನ್ನ ಕಿಂಚಿತ್ತೂ ಪ್ರೀತಿಸುವುದಿಲ್ಲ. ಇದು ನನ್ನ ವಾದ. ನಿಮ್ಮ ವಿಷಯ ತೆಗೆದುಕೊಳ್ಳೋಣ ಈಗ. ನೀವು ಈಗೀಗ ರೈತರಾಗ್ತಾ ಇರೋವರು. ನಿಮಗೆ ಆರ್ಥಿಕ ಬೆಂಬಲ ಬೇಕು. ಆದ್ದರಿಂದ ನೀವು ಯಾರಾದರೂ ಹಣವಂತ ಹುಡುಗಿಯನ್ನು ಮದುವೆಯಾದರೆ ಅನುಕೂಲ. ಅಲ್ವೇ!

**ಗೇ. ಓ.:** (ಬೇಜಾರಿನಿಂದ) ನಾನೂ ಅದನ್ನೇ ಯೋಚಿಸ್ತಾ ಇದ್ದೀನಿ.

**ಷೀಬಾ:** (ತಟ್ಟನೆ ತಿರುಗಿ) ಹಾಗಾದರೆ ನನ್ನನ್ನ ಯಾಕೆ ಇಷ್ಟು ಪ್ರಶ್ನಿಸಿ ತೊಂದರೆ ಕೊಟ್ಟಿರಿ?

**ಗೇ. ಓ.:** ನಾನು ಕಟ್ಟಿದ್ದ ಮುಗಿಲೆಲ್ಲಾ ಕರಗಿತು. ಯೋಚಿಸಿದ್ದೆಲ್ಲ ವಿಫಲವಾಯ್ತು.

**ಷೀಬಾ:** ಸರಿ!

**ಗೇ. ಓ.:** ಅದೂ ಒಳ್ಳೇದು ಅನ್ನಿ.

**ಷೀಬಾ:** Mr. Oak, ಇನ್ನು ನನ್ನ ಕಾಡಿಸಬೇಡಿ. ಖಂಡಿತ ಮರೆತ್ಬಿಡಿ. (ಎನ್ನುತ್ತ ಒಳಗೆ ಹೋಗುವಳು.)

**ಗೇ. ಓ.:** (ಸಿಟ್ಟಿನಿಂದ ಕುರಿಮರಿಯನ್ನು ಎತ್ತಿಕೊಂಡು) ಹ್ಞಾಂ ಹೋಗಿ ಬರ್ತೇನೆ. ಸಂತೋಷ, ಹ್ಞಾಂ. (ಕೈ ಆಡಿಸುತ್ತ) ಪ್ರಮಾದ—ಪ್ರಮಾದ —ಖಂಡಿತವಾಗೂ ಪ್ರಮಾದ. (ಎನ್ನುತ್ತಿರುವಾಗ ತೆರೆ ಬೀಳುತ್ತೆ.)

—**ಕೆ. ಎನ್. ಶ್ರೀಹರಿರಾವ್.**

---

## ವಿಧಿಯ ವೈಚಿತ್ರ

ಪದರಪದರಗಳಿಹುವು ಗಂಟುಗಂಟುಗಳಿಹುವು,
ಹೃದಯದಲಿ ಬುದ್ಧಿಯಲಿ ವಾಕ್ಚರ್ಯೆಗಳಲಿ;
ಇದಮಿತ್ಥಮೆಲ್ಲಿಹುದು ಮನುಜಸ್ವಭಾವದಲಿ?
ವಿಧಿಯ ವೈಚಿತ್ರವದು—ಮಂಕುತಿಮ್ಮ

ಕನಲ್ದ ಹುಲಿ ಕೆರಳ್ದ ಹರಿ ಮುಳ್‌ಕರಡಿ ಛಲನಾಗ
ಅಣಕುಕಪಿ ಸೀಳ್ನಾಯಿ ಮೊದಲಾದ ಮೃಗದ
ಸೆಣಸು ಮುಸುಡಿಯ ಘೋರ ದುಷ್ಟ ಚೇಷ್ಟೆಗಳೆಲ್ಲ-
ವಣಗಿಹುವು ನರಮನದಿ—ಮಂಕುತಿಮ್ಮ

ಅಂತರಂಗವನೆಲ್ಲ ಬಿಚ್ಚಿ ತೋರಿಪನಾರು?
ಆಂತರ ಗಭೀರಗಳ ತಾನೆ ಕಂಡವನಾರ್?
ಗಂತಿಗಳು ಗಂಟುಗಳು ಮಡಿಪುಮಡಿಪುಗಳಲ್ಲಿ;
ಸ್ವಂತಕೇ ದುರ್ದರ್ಶ—ಮಂಕುತಿಮ್ಮ

# ಮಾದರಿಯ ಪಾಠ

(ಜನಕ ಮಹಾರಾಜನು ಅಯೋಧ್ಯಾ ನಗರದ ಸ್ಥಿತಿಯನ್ನು ಯೋಚಿಸುತ್ತಾ ಕುಳಿತಿದ್ದಾನೆ. ಸೇವಕನ ಪ್ರವೇಶ.)

**ಸೇವಕ:** ಮಹಾರಾಜರಿಗೆ ಜಯವಾಗಲಿ. ಅಯೋಧ್ಯಾ ನಗರದಿಂದ ಪತ್ರಿಕಾ ಪ್ರತಿನಿಧಿಗಳೊಬ್ಬರು ತಮ್ಮನ್ನು ನೋಡಲು ಬಂದಿದ್ದಾರೆ. ಅಪ್ಪಣೆ ಯಾಗಬೇಕು.

**ಜನಕ:** ಒಳಗೆ ಬರಹೇಳು.

**ಪ್ರತಿನಿಧಿ:** (ಪ್ರವೇಶಿಸಿ) ಮಹಾರಾಜರಿಗೆ ಜಯವಾಗಲಿ.

**ಜನಕ:** (ಪೀಠವನ್ನು ತೋರಿಸಿ) ಪೀಠದಲ್ಲಿ ಮಂಡಿಸಿರಿ.

**ಪ್ರತಿ:** ಮಹಾಸ್ವಾಮಿ, ನಾನು ಅಯೋಧ್ಯಾಪುರನಿವಾಸಿ. ದಶರಥ ಮಹಾರಾಜರ ಪ್ರಜೆ. ಅಲ್ಲಿನ 'ಮೇಘದೂತ'ವೆಂಬ ವರ್ತಮಾನ ಪತ್ರಿಕೆಯ ಪ್ರತಿನಿಧಿ.

**ಜನಕ:** ಅಯೋಧ್ಯಾ ದೇಶದಿಂದ ಬಂದವರೆ? ಅಲ್ಲಿಯ ವರ್ತಮಾನ ಪತ್ರಿಕೆಯ ಪ್ರತಿನಿಧಿಗಳೆ? ಒಳ್ಳಿತು.

**ಪ್ರತಿ:** ಹೌದು, ಮಹಾಸ್ವಾಮಿ, ಅಲ್ಲಿನ ಜನಗಳ ಮನಸ್ಸು ಅಲ್ಲ ಕಲ್ಲೋಲವಾಗಿದೆ. ಸಮಾಧಾನವನ್ನು ಕೊಡುವ ಯಾರ ಸಲಹೆಯೂ ಬರುತ್ತಿಲ್ಲ . . . ಆದ್ದರಿಂದ . . .

**ಜನಕ:** ಏನು? ಶ್ರೀ ರಾಮಚಂದ್ರನು ಕಾಡಿಗೆ ಹೋದಮಾತ್ರಕ್ಕೆ ರಾಜ್ಯಕ್ಕೆ ದಿಕ್ಕಿಲ್ಲವಾಯಿತೆ? ಭರತನು ರಾಜ್ಯದ ಆಳುವಿಕೆಯನ್ನು ವಹಿಸಿ ಕೊಳ್ಳಲಿಲ್ಲವೆ?

**ಪ್ರತಿ:** ಶ್ರೀರಾಮರು ಕಾಡಿಗೆ ಹೊರಟ ಸಮಯದಲ್ಲಿ ಭರತರು ಊರಲ್ಲಿ ಇರಲಿಲ್ಲ.

**ಜನಕ:** ಭರತನು ಅಲ್ಲಿಲ್ಲದಿದ್ದರೇನು? ಭರತಕುಮಾರನಂತೆ ಯೋಗ್ಯ ರಾದ ರಾಜರಿರುವಲ್ಲಿ, ರಾಜ್ಯ ಹೇಗೆ ಅನಾಯಕವಾದೀತು? 'ರಾಜಾ ಪ್ರತ್ಯಕ್ಷ ದೇವತಾ' ಎಂಬಂತೆ ಅಯೋಧ್ಯೆಯವರಿಗೆ ಭರತ ಮಹಾರಾಜರು ಪರದೈವ

ವಲ್ಲವೆ? ಸನ್ನಿವೇಶದ ಬದಲಾವಣೆಗೆ ರಾಜರನ್ನು ಪ್ರಜೆಗಳು ಗುರಿಮಾಡಿ, ತಪ್ಪುದಾರಿ ಹಿಡಿಯಬೇಕೆ?

**ಪ್ರತಿ:** ಪ್ರಜೆಗಳು ಮಾತ್ರವಲ್ಲ, ದಶರಥಮಹಾರಾಜರ ಪತ್ನಿಯರು ಕೂಡ ತಮ್ಮ ಮಕ್ಕಳ ಅಗಲಿಕೆಯಿಂದ ದಿಗ್‌ಭ್ರಾಂತರಾಗಿದ್ದಾರೆ.

**ಜನಕ:** ಮಕ್ಕಳ ಅಗಲಿಕೆಯಿಂದ ತಾಯಿಯರಿಗೆ ಚಿಂತೆಯಿರುವುದಿಲ್ಲವೆ? ಆಳಿದ ರಾಜರು ತಮ್ಮ ಮಗನ ಮೇಲಿನ ಮಮತೆಗೋಸ್ಕರ ಕಿರಿಯ ರಾಣಿಗೆ ಕೊಟ್ಟಿದ್ದ ಭಾಷೆಗೆ ತಪ್ಪಿ ನುಡಿದಿದ್ದರೆ ಯೋಗ್ಯವಾಗುತ್ತಿತ್ತೆ? ಮಗನ ಮೇಲಿನ ಮಮತೆ ತಂದೆಯನ್ನು ಅಸತ್ಯದ ದಾರಿಗೆ ಎಳೆಯಕೂಡದು. ಕೇವಲ ಹದಿನಾಲ್ಕು ವರ್ಷಗಳಾದ ಮೇಲೆ ಶ್ರೀರಾಮನೇ ರಾಜನಾಗುವನು.

**ಪ್ರತಿ:** ಕೈಕಯೀ ರಾಣಿಯವರ ಮನಸ್ಸನ್ನು ಕಲಕಲು ಮಂಥರೆಯ ಬೋಧನೆಯೇ ಕಾರಣ ಎಂದು ಗಾಳಿಯ ವರ್ತಮಾನ.

**ಜನಕ:** ಯಾರ ಬೋಧನೆಯೂ ಯಾರನ್ನೂ ಏನೂ ಮಾಡುವುದಿಲ್ಲ. ಅವರವರ ಕರ್ಮದ ಫಲವನ್ನು ಅವರವರು ಅನುಭವಿಸಲೆಬೇಕು. ಬ್ರಹ್ಮ ಬರೆದ ಬರಹವನ್ನು ಬ್ರಹ್ಮನೂ ಮೀರಲಾಗುವುದಿಲ್ಲ. ಹೆತ್ತ ತಾಯಿ ಕೌಸಲ್ಯೆಯಿಂದ ಶ್ರೀರಾಮನು ಬೇರೆಯಾಗುವುದೂ, ದಶರಥನ ಅಂತ್ಯಕಾಲದಲ್ಲಿ ಶ್ರೀರಾಮನು ದೂರದ ಕಾಡಿನಲ್ಲಿರುವುದೂ, ಪತಿಯೊಡನೆ ಸೀತೆಯು ಕಾಡಿಗೆ ಹೋಗುವುದೂ, ಲಕ್ಷ್ಮಣನು ಅಣ್ಣ ಅತ್ತಿಗೆಯರ ಸೇವೆಗೆಂದು ಹೊರಟಿರುವುದೂ, ಇವೆಲ್ಲ ವಿಧಿಯ ಕೈವಾಡವೆನ್ನಬಹುದು. ಆದರೂ ಈ ವಿಧಿಗೆ ಅನುಕೂಲವಾಗುವವರು ಅನೇಕರಿದ್ದಾರೆ.

**ಪ್ರತಿ:** ಕೈಕಯೀ ರಾಣಿಯವರು, ತಾವೇ ತಮ್ಮ ಕೈಯಾರೆ ನಾರು ಬಟ್ಟೆಯನ್ನು ಶ್ರೀ ಸೀತಾರಾಮರಿಗೆ ತಂದುಕೊಟ್ಟರೆಂದು ತಿಳಿದುಬಂತು.

**ಜನಕ:** (ಎಳೆಮುನಿಸಿನಿಂದ) ಕಾಡಿಗೆ ಹೋದಮೇಲೆ ನಾರುಬಟ್ಟೆಯನ್ನು ಧರಿಸುವುದು ಅನಿವಾರ್ಯ. ಆದರೆ, ಪಟ್ಟಣದಲ್ಲಿರುವಾಗಲೆ ನಾರುಬಟ್ಟೆಯನ್ನು ಧರಿಸುವಂತೆ ಹೇಳಿದ ಕೈಕೆಗೆ ಕೂಡ ರಾಮನೂ ಸೀತೆಯೂ ನಾರುಬಟ್ಟೆ ಧರಿಸಿದ್ದನ್ನು ಕಣ್ಣಾರೆ ಕಂಡದ್ದರಿಂದ ಮನಸ್ಸಿಗೆ ಸಂತೋಷವಾಗಿರಲಾರದು.

**ಪ್ರತಿ:** ಶ್ರೀರಾಮರು ತಂದೆಗೆ ಮರುಮಾತಾಡದೆ ಕಾಡಿಗೆ ಹೊರಟದ್ದು ಅಯೋಧ್ಯೆಯ ನಮಗೆಲ್ಲ ಆಶ್ಚರ್ಯವಾಗಿದೆ.

**ಜನಕ:** ಮಗನಾದ ಮಾತ್ರಕ್ಕೆ ರಾಜಾಜ್ಞೆಯನ್ನು ಮೀರಿ ನಡೆಯಬೇಕೆ? ಪುತ್ರನ ಲಕ್ಷಣ ಹಾಗೇ ಇರಬೇಕು. ರಾಜ್ಯದ ಸುಖವೆ ಮುಖ್ಯವೆಂದು ತಿಳಿದು ತಂದೆಯ ಮಾತನ್ನು ನಿರಾಕರಿಸಿ ಶ್ರೀರಾಮನು ನಡೆದಿದ್ದರೆ, ಅವನು ನನಗೆ ತಕ್ಕ ಅಳಿಯನಾಗುತ್ತಿರಲಿಲ್ಲ. ಇಕ್ಷ್ವಾಕು ವಂಶದಲ್ಲಿ ಅವನು ಹುಟ್ಟಿದ್ದು ವ್ಯರ್ಥವಾಗುತ್ತಿತ್ತು. ಮಾತಾಪಿತೃಗಳ ಮಾತನ್ನು ಮೀರಿ, ಅವರ ಪ್ರತಿಜ್ಞೆಯನ್ನು ಭಂಗಮಾಡಿದವನು ಅವರಿಗೆ ತಕ್ಕ ಪುತ್ರನಾಗನು. ತಂದೆಗೆ ಜನಿಸಿದ ಶತ್ರುವೆನ್ನಬಹುದು, ಅಂತಹವನನ್ನು.

**ಪ್ರತಿ:** ಶ್ರೀರಾಮಚಂದ್ರರು ತಂದೆಯ ಮನಸ್ಸನ್ನು ಸೂಕ್ಷ್ಮವಾಗಿ ಅರಿತು, ತಾವಾಗಿಯೇ ಕಾಡಿಗೆ ಹೊರಡಲು ಮುಂದೆಬಂದರು. ಆದರೂ ರಾಮಚಂದ್ರರನ್ನು ಅಗಲಿರುವುದು ಪ್ರಜೆಗಳನ್ನು ಚಿಂತಾಸಾಗರಕ್ಕೆಳೆದಿದೆ.

**ಜನಕ:** ರಾಮಕುಮಾರನು ಪಟ್ಟ ತಪ್ಪಿ ವನವಾಸಕ್ಕೆ ಹೋದರೆ ಯಾರಿಗೆ ತಾನೆ ಚಿಂತೆಯಾಗುವುದಿಲ್ಲ? ಪ್ರಜೆಗಳಲ್ಲಿರುವ ಅಜ್ಞಾನವೇ ಅವರ ಚಿಂತೆಗೆ ಕಾರಣವಾಗುತ್ತದೆ. ಆ ಅಜ್ಞಾನದ ಕತ್ತಲೆಯನ್ನು, ಶ್ರೀರಾಮಚಂದ್ರನ ಮಾತಾಪಿತೃಭಕ್ತಿಯ ಬೆಳಕಿನಿಂದ ಹೊರದೂಡಬೇಕು. ಹೆರಿಗೆಯಾಗುವಾಗ ತಾಯಿಗೆ ಸಂಕಟವಾಗುತ್ತದೆ; ಆದಮೇಲೆ, ಕಂದನ ಅಳು ಕೇಳಿ ಸಂಕಟ ಮರೆಯುತ್ತಾಳೆ. ಅದರಂತೆಯೆ ಸೀತೆಯ ಪತಿಭಕ್ತಿಗೂ, ಲಕ್ಷ್ಮಣನ ಭ್ರಾತೃಪ್ರೇಮಕ್ಕೂ ಮೆಚ್ಚಿ ತಮ್ಮ ಸಂಕಟಗಳನ್ನು ಮರೆಯಬೇಕು.

**ಪ್ರತಿ:** ಶ್ರೀರಾಮಚಂದ್ರರು ಕಾಡಿಗೆ ಹೋಗುವಾಗ ಕೂಡ ಕೈಕೆಯವರಿಗೆ ವಂದನೆಗಳನ್ನರ್ಪಿಸಿ, ತಂದೆಯವರ ಮನಸ್ಸಿಗೆ ಎಳ್ಳಷ್ಟೂ ಬಾಧೆಯಾಗದಂತೆ, ಸಂತೋಷದಿಂದ ಹೊರಟರು. ಸೀತಾಮಾತೆ ಶ್ರೀರಾಮರಿಗೆ ಸರಿಹೋಲುವ ಪತ್ನಿ. ಗಂಡನಿಗೆ ರಾಜ್ಯಾಭಿಷೇಕ ತಪ್ಪಿ, ವನವಾಸ ಪ್ರಾಪ್ತಿಯಾಗಲು ಮುಖ್ಯಕಾರಣರಾದ ಕೈಕೆಯವರೊಂದಿಗೆ ಸ್ವಲ್ಪವಾದರೂ ಅಸಮಾಧಾನವನ್ನು ಸೂಚಿಸಲಿಲ್ಲ. ಪತಿಗೆ ಸರಿಹೋಲುವ ಸತಿ, ಸೀತಾತಾಯಿ.

**ಜನಕ:** ಸತಿಗೆ ಪತಿಯೇ ಪರದೈವ. ಪತಿಯ ಕಷ್ಟಸುಖಗಳಲ್ಲಿ ಸತಿ ಸಮಾನಭಾಗಿಯಾಗಬೇಕು. ಕಾಡಿಗೆ ಹೋದರೇನು? ಅರಮನೆಯಲ್ಲಿದ್ದರೇನು? ಪತಿಯ ಬಳಿಯಲ್ಲಿ ಆತನ ಸೇವೆಯನ್ನು ಮಾಡುತ್ತಿದ್ದರೆ ಕಾಡು ಊರಾಗಿ ಕಾಣುವುದು, ಪರ್ಣಶಾಲೆ ಅರಮನೆಯಾಗುವುದು. ಸ್ತ್ರೀಗೆ ಪತಿ

ಭಕ್ತಿಯಿಂದ ಸುಲಭವಾಗಿ ಮುಕ್ತಿ ದೊರೆಯುವುದು. ಇಂದಿನ ಸೀತೆಯ ನಡತೆ ಮುಂದಿನ ಸ್ತ್ರೀಯರಿಗೆಲ್ಲಾ ಆದರ್ಶವಾಗುತ್ತದೆ. 'ಜನಕನ ಮಗಳು' ಎಂದು ಹೇಳಿದರೆ ನನಗೊಂದು ಹೊಸ ಗೌರವ. ವನವಾಸವಾದರೂ ರಾಜಸುಖ, ಭೋಗಗಳನ್ನು ಶ್ರೀರಾಮನಿದ್ದೆಡೆಯೆ ಅನುಭವಿಸುವಳು.

**ಪ್ರತಿ:** ಅತ್ತೆಯಾದ ಕೈಕೆಯನ್ನೂ ಮಾವನಾದ ದಶರಥನನ್ನೂ ಬಯಲಿಗೆ ಎಳೆಯದೆ, ಸೀತಾದೇವಿ ವಂಶದ ಗೌರವವನ್ನು ಹೆಚ್ಚಿಸಿದರು.

**ಜನಕ:** ಸೀತೆಯು ತನ್ನ ಅತ್ತೆಯಾದ ಕೈಕೆಯ ಮೇಲಾಗಲಿ, ಮಾವನಾದ ದಶರಥನ ಮೇಲಾಗಲಿ ಅಸಮಾಧಾನವನ್ನು ಸೂಚಿಸಿದ್ದರೆ, ನಾನು ನನ್ನ ಮಗಳನ್ನು ಸರಿಯಾಗಿ ಸಾಕಲಿಲ್ಲವೆನ್ನಬೇಕಾಗುತ್ತಿತ್ತು. ಹೆಣ್ಣು ತನ್ನ ಸುಖಕ್ಕಾಗಿ ಅತ್ತೆಮಾವಂದಿರನ್ನು ದೂರಿದರೆ ಅದು ಹೆಣ್ಣಿನ ತಪ್ಪಲ್ಲ, ಆ ಹೆಣ್ಣನ್ನು ಸಾಕಿದ ತಾಯಿತಂದೆಗಳ ತಪ್ಪು. ಹೆಣ್ಣು ತನ್ನ ಗಂಡ ಅತ್ತೆ ಮಾವಂದಿರೊಂದಿಗೆ ಹೇಗೆ ಬಾಳಬೇಕೆಂಬುದನ್ನು ಅವರು ತಿಳಿಸದೆ, ಅವರ ಮನಸ್ಸಿನ ಹಾಗೆ ನಡೆದುಕೊಳ್ಳುವಂತೆ ಕಲಿಸದಿದ್ದರೆ, ಅದು ತಂದೆ ತಾಯಿಗಳ ತಪ್ಪು. ಹೆಣ್ಣಿನಿಂದ ವಂಶದ ಗೌರವ ಹೆಚ್ಚಬಹುದು, ಅಥವಾ ನಾಶವಾಗಬಹುದು.

**ಪ್ರತಿ:** ಆದರೂ ಚಿಕ್ಕ ಹುಡುಗಿ ಹೀಗೆ ಕಾಡಿಗೆ ಹೋದದ್ದು ನಮಗೆ ಯಾರಿಗೂ ಸಮಾಧಾನವಿಲ್ಲ.

**ಜನಕ:** ಎಲ್ಲರ ಅಸಮಾಧಾನದಲ್ಲಿ ನಾನೂ ಒಬ್ಬ ಪಾಲುಗಾರನಾಗಿದ್ದೇನೆ. ಚಿಕ್ಕಂದಿನಿಂದಲೂ ಅರಮನೆಯ ನೆರಳಲ್ಲಿ ಬೆಳೆದ ಪುಷ್ಪ; ಬಾಡದ ಹಾಗೆ ನೋಡಿಕೊಂಡಿದ್ದೆವು. ಮಗುವಾಗಿದ್ದಾಗ ಅದರ ಆಟ ಪಾಟಗಳು ಕಣ್ಣಿನ ಆನಂದವಾಗಿದ್ದವು. ಇಂದಿಗೂ ಆ ಮಗುವಿನ ಆಟದ ನೆನಪು ನಮ್ಮ ಮನಸ್ಸಿಗೆ ಸಂತೋಷಕೊಡುತ್ತದೆ. ಆದರೆ ಇಂದು ಅದು ನನ್ನ ಸ್ವತ್ತಲ್ಲ. ಎಂದು ಶ್ರೀರಾಮಚಂದ್ರನು ಶಿವಧನುಸ್ಸನ್ನು ಮುರಿದು, ಸೀತೆಯಿಂದ ತನ್ನ ಕೊರಳಿಗೆ ಹೂಮಾಲೆಯನ್ನು ಹಾಕಿಸಿಕೊಂಡನೋ ಅಂದಿನಿಂದ ಸೀತೆಯ ಯೋಗಕ್ಷೇಮ ಶ್ರೀರಾಮಚಂದ್ರನಿಗೆ ಸೇರಿತು. ನಮ್ಮ ಸೀತೆ ಹೆತ್ತಮನೆಯಿಂದ ದೂರವಾಗಿದ್ದಾಳೆ. ತವರುಮನೆಯ ಬೆಳಕಾಗಿದ್ದವಳು ಈಗ ಗಂಡನ ಮನೆಯ ಬೆಳಕಾಗಿದ್ದಾಳೆ. ಅಲ್ಲಿ ಕಷ್ಟವಾಗಲಿ, ಸುಖವಾಗಲಿ ಅನುಭವಿಸಬೇಕು. ತಂದೆ ತಾಯಿಗಳಾದ ನಾವು ಕಾಡಿಗೆ ಹೋಗುವುದಕ್ಕಾಗುತ್ತದೆಯೆ? ನಾವು ದೂರ

ದಿಂದ ಕಂಡು ಮರುಗುವ ವಸ್ತುಗಳಾಗಬೇಕಾಗಿದೆ. ಶ್ರೀರಾಮಚಂದ್ರನು ಸೀತೆಗೆ ಹತ್ತಿರದ ಬಂಧು. ಅವನು ಮರುಗಿದರೆ ಸೀತೆಗೆ ಸುಖವುಂಟು.

**ಪ್ರತಿ:** ತಾವು ಒಂದು ಮಾತು ಹೇಳಬಹುದಿತ್ತು. ಶ್ರೀರಾಮಚಂದ್ರರು ಕಾಡಿಗೆ ಹೋಗುವ ಮುನ್ನ ತಮ್ಮನ್ನು ಒಂದು ಮಾತು ಕೇಳಬಹುದಿತ್ತು. ಸೀತಾಮಾತೆಯನ್ನಾದರೂ ತಮ್ಮಲ್ಲಿ ಬಿಟ್ಟುಹೋಗಬಹುದಾಗಿತ್ತು.

**ಜನಕ:** ನಮ್ಮ ಸೀತೆ ಕಾಡಿಗೆ ಹೋಗಿರುವುದು ನಮಗೆ ಅಸಮಾಧಾನ ಇರಬಹುದು. ಆದರೆ ಹೆಣ್ಣು ಹೆತ್ತ ತಂದೆಗೆ ಮಗಳ ಸುಖ ಮಾತ್ರ ಸುಖವೆ? ಅಳಿಯನ ಸುಖ ಬೇಡವೆ? ರಾಮನು ಮಾತ್ರ ಕಾಡಿಗೆ ಹೊರಟು ಅಲ್ಲಿ ಕಷ್ಟಪಡುತ್ತಿರುವಾಗ ಅವನ ಅರ್ಧಾಂಗಿಯೆನಿಸಿಕೊಂಡಿರುವ ಸೀತೆ ಅರಮನೆಯ ಸೌಖ್ಯವನ್ನು ಪಡೆಯುವುದು ನ್ಯಾಯವೆ ? 'ಅಳಿಯ ಬೇಡ, ಮಗಳು ಬೇಕು' ಎನ್ನುವುದು ಯಾವ ನ್ಯಾಯ ? ಅಳಿಯನ ಕ್ಷೇಮಬಲದಿಂದ ಮಗಳು ಬಾಳಬೇಕು ಎಂಬ ಅರಿವು ಮಾನವನಾದವನಿಗೆ ಇರಬೇಕು. ಅಳಿಯನೆಂಬುದು ದುಡ್ಡುಕೊಟ್ಟು ಕೊಂಡ ವಸ್ತುವಲ್ಲ. ಅದು ಪೂರ್ವಪುಣ್ಯದಿಂದ ಸಂಪಾದನೆ ಮಾಡಿದ ಅಮೂಲ್ಯವಸ್ತು ಎಂದು ತಿಳಿಯುವುದು ಧರ್ಮ. ಸತಿಪತಿಗಳನ್ನು ಅಗಲಿಸಿದ ಪಾಪಿಯಾಗಲೆ? ವನದಲ್ಲಿ ಅವರು ಅನ್ಯೋನ್ಯವಾಗಿ ಬಾಳಿದರೆ, ಅದೇ ನಮಗೆ ಸಂತೋಷವಾಗುತ್ತದೆ. ಅನ್ಯೋನ್ಯತೆ, ಪ್ರೀತಿ ಇವು ಇಲ್ಲದ ಬಾಳು ಅರಮನೆಯಲ್ಲಿದ್ದರೂ ಹಾಳು.

**ಪ್ರತಿ :** ತಮ್ಮ ಮನಸ್ಸಿನ ಇಂಗಿತವನ್ನು ಅರಿತು, ಅದರಂತೆ ನಡೆದು, ಸೀತಾಮಾತೆಯು ತವರುಮನೆ, ಗಂಡನ ಮನೆಗಳ ಗೌರವವನ್ನು ಉಳಿಸಿ ಆದರ್ಶ ಸ್ತ್ರೀಯಾದರು.

**ಜನಕ :** ಎಲ್ಲಕ್ಕಿಂತಲೂ ಹೆಚ್ಚಾಗಿ, ಆ ಲಕ್ಷ್ಮಣ, ಹಿರಿಯ ಅಣ್ಣನಾದ ರಾಮನು ಪತ್ನಿಯೊಂದಿಗೆ ಕಾಡಿನಲ್ಲಿ ಅಲೆದಾಡುವಾಗ ತಾನು ಅರಮನೆಯ ಸುಖವನ್ನು ಪಡೆಯಬಾರದೆಂದು, ಅದನ್ನು ತ್ಯಜಿಸಿ, ಅಣ್ಣ ಅತ್ತಿಗೆಯರ ಸೇವೆಗೆ ಕಂಕಣಬದ್ಧನಾಗಿ ಹೊರಟಿರುವುದು, ಲೋಕದ ಜನಗಳಿಗೆ ಸಹೋದರ ಪ್ರೇಮದ ಪರಾಕಾಷ್ಠತೆಯನ್ನು ಎತ್ತಿ ಹಿಡಿದಂತಾಗಿದೆ.

**ಪ್ರತಿ :** ತಾವಾದರೂ, ಜನಕ ಮಹಾರಾಜರೆ, ಮಗಳಿಗೆ ವನವಾಸ ಉಂಟಾದರೂ, ಅಳಿಯನಿಗೆ ಪಟ್ಟ ತಪ್ಪಿದರೂ, ಚಿಂತೆ ಮಾಡದೆ, ಲೋಕದ

ಜನರಿಗೆ ಮಾದರಿಯ ಮಾವನಾಗಿದ್ದೀರೆಂದು ನಮ್ಮ ಅಯೋಧ್ಯೆಯವರಿಗೆ ತಿಳಿಯಬೇಕು . . . ಅಪ್ಪಣೆಯಾದರೆ, ನಾನು ಬರುತ್ತೇನೆ.

**ಜನಕ:** ಹೋಗಿ ಬನ್ನಿ. ಅಯೋಧ್ಯೆಯವರಿಗೆ ಹೇಳಿ: ಶ್ರೀ ರಾಮನು ಬರುವ ವರೆಗೂ ಭರತನನ್ನೆ ರಾಮನೆಂದು ಭಾವಿಸಿ, ತಮ್ಮ ಆತ್ಮಗಳನ್ನು ಅವರು ಸಾರ್ಥಪಡಿಸಿಕೊಳ್ಳಲಿ.

(ಪತ್ರಿಕಾ ಪ್ರತಿನಿಧಿ ನಿಷ್ಕ್ರಮಿಸುವನು.)

— **ಕೆ. ಎನ್. ಕೃಷ್ಣಮೂರ್ತಿ.**

---

## ಭರತೋದಾಹರಣೆ

ಪ್ರತ್ಯಕ್ಷವಿಲ್ಲದಾ ಸ್ವಾಮಿಯಂ ನೆನೆನೆನೆದು
ಸತ್ಯಭಕ್ತಿಯ ಸೇವೆಗೆಯ್ದವಂ ಭರತಂ;
ನಿತ್ಯಜೀವನದಿ ನೀನಾ ನಯವನನುಸರಿಸೊ
ಸ್ವತ್ವದಾಶೆಯ ನೀಗಿ—ಮಂಕುತಿಮ್ಮ

ಅರಸಡವಿಗೈದಿದೊಡಮ್, ಅವನಿತ್ತ ಪಾದುಕೆಗ-
ಳೊರೆಯದೊಡಮೇನನುಂ, ತಾಂ ವರದಿಯೊರೆದು,
ದೊರೆತನದ ಭಾರವನು ಹೊತ್ತು ದೊರೆಯಾಗದಾ
ಭರತನವೊಲಿರು ನೀನು—ಮಂಕುತಿಮ್ಮ

ಧರೆಯೆ ಕೋಸಲ, ಪರಬ್ರಹ್ಮನೇ ರಘುವರನು,
ಭರತನವೊಲನುಪಾಲನಕ್ರಿಯರು ನಾವು;
ಅರಸನೂಳಿಗ ನಮ್ಮ ಸಂಸಾರದಾಡಳಿತ;
ಹರುಷದಿಂ ಸೇವಿಸೆಲೊ—ಮಂಕುತಿಮ್ಮ

# ಸಮವಿಷಮವರ್ತಿ

## ದೃಶ್ಯ ೧

[ವಿಶ್ವಾಮಿತ್ರನ ಆಶ್ರಮದಲ್ಲಿ ಒಂದು ವಿಶಾಲವಾದ ಅಶ್ವತ್ಥವೃಕ್ಷ. ಅದರ ಅಡಿ ಯಜ್ಞಕುಂಡ. ವಿಶ್ವಾಮಿತ್ರನು ಯಜ್ಞಕುಂಡದ ಮುಂದೆ ಪೂರ್ವಾಭಿಮುಖ ನಾಗಿ ಕುಳಿತಿದ್ದಾನೆ. ಎರಡು ಪಕ್ಕಗಳಲ್ಲೂ ದೇವಋಷಿ ಬ್ರಾಹ್ಮಣರು ಸಾಲುಗಟ್ಟಿ ತೋಳಿಗೆ ಯೋಗದಂಡವನ್ನು ಊರೆಗೊಟ್ಟು ಜಪಮಾಲೆಯನ್ನು ಹಿಡಿದು ಕುಳಿತಿದ್ದಾರೆ. ಎಲ್ಲರೂ ವೇದಮಂತ್ರಗಳನ್ನು ಘೋಷಿಸುತ್ತಿದ್ದಾರೆ. ವಿಶ್ವಾಮಿತ್ರನು ಅಗ್ನಿದೇವನಿಗೆ ಆಜ್ಯ ಸಮಿತ್ತುಗಳನ್ನು ಸಮರ್ಪಿಸುತ್ತಾನೆ. ಆಗ ಹಟಾತ್ತನೆ ನಕ್ಷತ್ರಕನು ಬಂದು ವಿಶ್ವಾಮಿತ್ರನ ಎದುರು ನಿಲ್ಲುತ್ತಾನೆ. ನಕ್ಷತ್ರಕನನ್ನು ನೋಡಿದೊಡನೆ ವಿಶ್ವಾಮಿತ್ರನು ಮಂತ್ರೋಚ್ಚಾರಣೆಯನ್ನು ನಿಲ್ಲಿಸುತ್ತಾನೆ. ಉಳಿದ ಋಷಿಗಳೂ ಮಂತ್ರಪಠನವನ್ನು ನಿಲ್ಲಿಸುತ್ತಾರೆ. ಆಶ್ರಮವನ್ನೆಲ್ಲ ನಿಶಬ್ದ ಆವರಿಸುತ್ತದೆ. ನಕ್ಷತ್ರಕ ವಿಶ್ವಾಮಿತ್ರರು ಒಬ್ಬರನ್ನೊಬ್ಬರು ಮೌನವಾಗಿ ನೋಡುತ್ತಾರೆ. ತುಸು ಹೊತ್ತು ಗತಿಸಿದ ಮೇಲೆ]

**ವಿಶ್ವಾಮಿತ್ರ:** ನಕ್ಷತ್ರಕ, ಏಕಿಷ್ಟು ಧಾವಂತ? ಹರಿಶ್ಚಂದ್ರನಿಂದ ಏನಾದರೂ ಅಪಮಾನವಾಯಿತೊ!

**ನಕ್ಷತ್ರಕ:** ಇಲ್ಲ . . .

**ವಿಶ್ವಾ:** ಹಾಗಾದರೆ, ಏಕಾಏಕಿ ಇಷ್ಟು ದೂರ ಬಂದದ್ದು? ಹರಿಶ್ಚಂದ್ರನೇನಾದರೂ ಅನೃತವನ್ನಾಡಿದನೊ?

**ನಕ್ಷತ್ರ:** ಉಹುಂ. ಅವನು ಸುಳ್ಳು ಹೇಳಿದ್ದಿದ್ದರೆ, ನನಗೆ ಈ ಪಾಡು ಎಲ್ಲಿರುತ್ತಿತ್ತು?

**ವಿಶ್ವಾ:** ಅಂದಮೇಲೆ . . . ?

**ನಕ್ಷತ್ರ:** ಹರಿಶ್ಚಂದ್ರನು ತನ್ನ ಹೆಂಡತಿಯನ್ನು ಮಾರಿಬಿಟ್ಟನು!

**ವಿಶ್ವಾ:** ಭಲೆ, ಒಳ್ಳೆಯದೆ ಆಯಿತು. ಅಗ್ನಿದೇವನು ತನ್ನ ಪಾತ್ರವನ್ನು ಚೆನ್ನಾಗಿ ನಿರ್ವಹಿಸಿದಂತೆ ತೋರುತ್ತದೆ.

**ನಕ್ಷತ್ರ:** ಹೌದು, ಅಗ್ನಿದೇವನೇನೋ ತನ್ನ ಪಾತ್ರವನ್ನು ಚೆನ್ನಾಗಿಯೇ ನಿರ್ವಹಿಸಿದನು. ಆದರೆ ಶೀಘ್ರದಲ್ಲಿಯೇ ತಮ್ಮ ಪ್ರತಿಜ್ಞೆಗೆ ಸಂ . . . ಚ . . . ಕಾ . . . ರ ಬರುವಂತೆ ತೋ . . . ರುತ್ತೆ.

**ವಿಶ್ವಾ:** (ಕುಪಿತನಾಗಿ) ಏನೆಂದೆ? ಪ್ರತಿಬ್ರಹ್ಮನಾದ ನನ್ನ ಪ್ರತಿಜ್ಞೆಗೆ ಭಂಗವೆ? ವಶಿಷ್ಠರು ಆಡಿದ್ದನ್ನು ಅಲ್ಲವೆಂದು ಪ್ರತಿಭಟಿಸಿ, ಬಲಿ ಇಲ್ಲದ ಯಜ್ಞವೆ ಪರಮಶ್ರೇಷ್ಠವೆಂದು ಸಾಧಿಸಿದ ನನ್ನ ಪ್ರತಿಜ್ಞೆಗೆ ಭಂಗ!! ಚಂಡಾಲನಾದ ತ್ರಿಶಂಕುವಿಗೋಸ್ಕರ ಬೇರೊಂದು ಇಂದ್ರಲೋಕವನ್ನೇ ಸೃಷ್ಟಿಸಿದ ಈ ಕೌಶಿಕನಿಗೆ ಪ್ರತಿಜ್ಞಾಭಂಗ!!! (ಎಂದು ವಕ್ರವಾಗಿ ನಕ್ಕು ತಲೆಯಲ್ಲಾಡಿಸುತ್ತ) ಉಹುಂ, ಅದೆಂದಿಗೂ ಆಗದ ಮಾತು. ಏನು ನಕ್ಷತ್ರಕ, ಇನ್ನೂ ನನ್ನ ಸಾಮರ್ಥ್ಯ ನಿನಗೆ ತಿಳಿಯದೊ? ಅಥವಾ ನನ್ನನ್ನು ರೇಗಿಸುವುದಕ್ಕಾಗಿ ಈ ರೀತಿ ಮಾತನಾಡುತ್ತಿರುವೆಯೊ?

**ನಕ್ಷತ್ರ:** ಗುರುಗಳೆ, ನಿಮ್ಮ ಸಾಮರ್ಥ್ಯ ತಿಳಿಯದೆ ಇಲ್ಲ; ನಾನು ನಿಮ್ಮನ್ನು ಕೆರಳಿಸಲು ಈ ರೀತಿ ಮಾತನಾಡುತ್ತಲೂ ಇಲ್ಲ. ಇದ್ದ ವಿಚಾರವನ್ನು ಅರಿಕೆ ಮಾಡಿದೆ.

**ವಿಶ್ವಾ:** ಹಾಗಿದ್ದಮೇಲೆ ನನ್ನ ಪ್ರತಿಜ್ಞೆಗೆ ಭಂಗ ಉಂಟಾಗುವುದೆಂದು ಹೇಗೆ ಹೇಳಿದೆ?

**ನಕ್ಷತ್ರ:** ಹರಿಶ್ಚಂದನು ಚಂದ್ರಮತಿಯನ್ನು ಮಾರಿ . . .

**ವಿಶ್ವಾ:** ಏನು? ಅಗ್ನಿದೇವನು ನಮಗೆ ಬರಬೇಕಾದ ಹಣವನ್ನೆಲ್ಲಾ ಕೊಡಲು ಒಪ್ಪಿರುವನೊ?

**ನಕ್ಷತ್ರ:** ಇಲ್ಲ.

**ವಿಶ್ವಾ:** ಹಾಗೆಂದಮೇಲೆ?

**ನಕ್ಷತ್ರ:** ಹರಿಶ್ಚಂದನು ತನ್ನನ್ನು ಸಹ ವಿಕ್ರಯಿಸಿಕೊಳ್ಳಲು ಪ್ರಯತ್ನಿಸುತ್ತಿರುವನು.

**ವಿಶ್ವಾ:** (ಸ್ವಲ್ಪ ಕಾಲ ಸುಮ್ಮನಿದ್ದು) ಅದು ನಮ್ಮ ಕೆಲಸಕ್ಕೆ ಮತ್ತಷ್ಟು ಪುಷ್ಟಿಯಾದಂತೆಯೆ ಆಯಿತು. ಆದರೆ, ನಮಗೆ ಬರಬೇಕಾದಷ್ಟು ಹಣವನ್ನು ಕೊಟ್ಟು ಅವನನ್ನು ಕೊಳ್ಳಬಲ್ಲವರು ಕಾಶಿಯಲ್ಲಿರುವರೆ?

**ನಕ್ಷತ್ರ:** ಅಂಥ ಧನಿಕರಾರೂ ಇದ್ದಂತೆ ತೋರುವುದಿಲ್ಲ. ಒಂದುವೇಳೆ ಯಾರಾದರೂ ಅಷ್ಟು ಹಣ ಕೊಟ್ಟು ಅವನನ್ನು ಕೊಂಡುಕೊಳ್ಳಲು ಮುಂದೆ ಬಂದರೆ . . . ಎಂದು ಅನುಮಾನವಷ್ಟೆ.

**ವಿಶ್ವಾ:** (ಸ್ವಲ್ಪ ಯೋಚಿಸಿ, ಏನೋ ಹೊಳೆದವನಂತೆ) ಒಳ್ಳೆಯದು,

ನೀನು ನಿನ್ನ ಕೆಲಸಕ್ಕೆ ನಡೆ. ನಾನೀಗಲೇ ಯಮಧರ್ಮನಲ್ಲಿಗೆ ಹೋಗಿ ಮುಂದಿನ ಕೆಲಸಕ್ಕೆ ತಕ್ಕ ಏರ್ಪಾಡು ಮಾಡುತ್ತೇನೆ. (ನಕ್ಷತ್ರಕ ಹೊರಡುವನು. ಮುಂದೆ ಹೋದವನನ್ನು ಪುನಃ ಕರೆದು) ಎಚ್ಚರಿಕೆ. ಹರಿಶ್ಚಂದ್ರನನ್ನು ಹೆಚ್ಚು ಹೆಚ್ಚು ಒತ್ತಾಯಮಾಡಿ ಹಣವನ್ನು ಕೇಳು, ಹೇಗಾದರೂ ಅವನು ಸುಳ್ಳು ನುಡಿಯುವಂತೆ ಮಾಡು. ತಿಳಿಯಿತೆ? ಇನ್ನು ನೀನು ಬೇಗ ಹೊರಡು. (ನಕ್ಷತ್ರಕನು ತನ್ನ ಕೆಲಸಕ್ಕೆ ಹೊರಡುವನು. ವಿಶ್ವಾಮಿತ್ರನು ಯಮಪುರಿಗೆ ಪ್ರಯಾಣ ಬೆಳೆಸುವನು.)

## ದೃಶ್ಯ ೨

[ಯಮಧರ್ಮನ ಆಸ್ಥಾನ. ಯಮಧರ್ಮನು ನ್ಯಾಯವಿಚಾರಣೆಗೆ ಕುಳಿತಿದ್ದಾನೆ. ಅವನ ಮುಂದೆ ತುಲಾಯಂತ್ರವಿದೆ. ಸ್ವಲ್ಪ ದೂರದಲ್ಲಿ ಚಿತ್ರಗುಪ್ತರು ಕೈಯಲ್ಲಿ ಓಲೆಗರಿಯ ಕಡತಗಳನ್ನು ಹಿಡಿದು ನಿಂತಿದ್ದಾರೆ. ಯಮಭಟರ ಮಧ್ಯೆ ಒಬ್ಬ ಮನುಷ್ಯ ನಿಂತಿದ್ದಾನೆ. ಯಮನು ಅಪರಾಧಿಯನ್ನು ವಿಚಾರಿಸಿ, ತೀರ್ಮಾನವನ್ನು ಕೊಡುವುದರಲ್ಲಿದ್ದಾನೆ. ಅಷ್ಟರಲ್ಲಿ ಓರ್ವ ಯಮದೂತನು ಆಸ್ಥಾನವನ್ನು ಹೊಗುವನು]

**ಯಮದೂತ :** ಪ್ರಭು, ಬ್ರಹ್ಮರ್ಷಿ ವಿಶ್ವಾಮಿತ್ರರು ದಯಮಾಡಿಸುತ್ತಿದ್ದಾರೆ.

**ಯಮಧರ್ಮ :** (ವಿಶ್ವಾಮಿತ್ರರ ಹೆಸರನ್ನು ಕೇಳುತ್ತಲೆ ಆಸನವನ್ನು ಬಿಟ್ಟೆದ್ದು) ಒಳ್ಳೆಯದು, ಅವರನ್ನು ಉಚಿತವಾದ ಮರ್ಯಾದೆಗಳಿಂದ ಸ್ವಾಗತಿಸು.

[ವಿಶ್ವಾಮಿತ್ರನು ಯಮನ ಆಸ್ಥಾನಕ್ಕೆ ಕಾಲಿಡುವನು. ಯಮನು ಸಿಂಹಾಸನದಿಂದ ಕೆಳಗಿಳಿದು, ವಿಶ್ವಾಮಿತ್ರನಿಗೆ ಎದುರಾಗಿ ಹೋಗಿ ನಮಸ್ಕರಿಸಿ ಸ್ವಾಗತಿಸುವನು. ಆಸನವನ್ನು ಅಲಂಕರಿಸುವಂತೆ ಋಷಿಯನ್ನು ಕೇಳಿಕೊಳ್ಳುವನು. ಯಮನ ಇಚ್ಛೆಯಂತೆ ವಿಶ್ವಾಮಿತ್ರನು ಸಿಂಹಾಸನದಲ್ಲಿ ಮಂಡಿಸುವನು.]

**ಯಮ :** ಋಷಿವರ್ಯ, ತಮ್ಮ ತಪಸ್ಸು ಕುಂದುಕೊರತೆಗಳಿಲ್ಲದೆ ವರ್ಧಿಸುತ್ತಿರುವುದೆ ?

**ವಿಶ್ವಾ:** ನಿನ್ನಂಥ ಧರ್ಮಪರಿಪಾಲಕರಿರುವಲ್ಲಿ ನಮ್ಮ ತಪಸ್ಸಿಗೆ ಕುಂದುಕೊರತೆಗಳೆಂದರೇನು !

**ಯಮ :** ಬಹಳ ದೂರ ದಯಮಾಡಿಸಿದಿರಿ. ತಾವು ಅಕಾರಣವಾಗಿ ಬರುವವರಲ್ಲ. ತಮ್ಮ ಆಗಮನದ ಕಾರಣವನ್ನು ತಿಳಿಯಬಹುದೆ?

**ವಿಶ್ವಾ:** ನನ್ನಂಥ ಋಷಿಗಳು ನಿನ್ನ ಬಳಿಗೆ ಮತ್ತೇನು ಕಾರಣ ಬರಬಹುದು ?

**ಯಮ :** (ಸ್ವಲ್ಪ ಯೋಚಿಸಿ) ನನ್ನಿಂದ ತಮಗೇನಾದರೂ ಕೆಲಸ ವಾಗಬೇಕಾಗಿದೆಯೆ ? ಅಪ್ಪಣೆಯಾದರೆ, ನೆರವೇರಿಸಲು ಸಿದ್ಧನಿರುವೆನು.

**ವಿಶ್ವಾ:** ಬಹಳ ಸಂತೋಷ. (ಮುಗುಳ್ನಗೆ ನಗುತ್ತಾ ಗಡ್ಡ ನೀವಿ ಕೊಂಡು) ಅಷ್ಟೊಂದು ಸುಲಭವಾದ ಕೆಲಸವಲ್ಲ. ಹಿಂದು ಮುಂದು ನೋಡದೆ ಒಪ್ಪಿಕೊಳ್ಳುವಂತಹದಲ್ಲ.

**ಯಮ :** ಏನು ಪೂಜ್ಯರೆ, ಹೀಗೆನ್ನುವಿರಿ ? ಆಡಿದ ಮಾತನ್ನು ನಡಸಿ ಕೊಡಲಾರದಷ್ಟು ಹೀನನೆ ನಾನು ! ಅಪ್ಪಣೆ ಕೊಡಿ. ಧರ್ಮವಿರುದ್ಧವಲ್ಲದ ಯಾವ ಕೆಲಸವನ್ನಾದರೂ ಮಾಡಿಕೊಡುತ್ತೇನೆ.

**ವಿಶ್ವಾ:** ಭಲೆ, ಧರ್ಮ ! ನೀನು ಧರ್ಮನೇ ಸರಿ. ನೋಡು: ಹಿಂದೆ ಇಂದ್ರಸಭೆಯಲ್ಲಿ ನನಗೂ ವಶಿಷ್ಠನಿಗೂ ಆದ ಪ್ರತಿಜ್ಞೆ ನಿನಗೆ ಗೊತ್ತಷ್ಟೆ. (ಯಮನು ತನಗೆ ಗೊತ್ತೆಂದು ತಲೆಯಲ್ಲಾಡಿಸುವನು.) ಅದನ್ನು ನೆರವೇರಿಸಿ ಕೊಳ್ಳುವ ಕೆಲಸದಲ್ಲಿ ನಿನ್ನಿಂದ ನನಗೊಂದು ಮಹೋಪಕಾರವಾಗಬೇಕಾಗಿದೆ.

**ಯಮ :** ಇಷ್ಟೆ ತಾನೆ! ಇದಕ್ಕಾಗಿ ನನ್ನಿಂದ ಅಷ್ಟು ಋಚಿತವಾದ ಮಾತುಗಳನ್ನಾಡಿಸಿದಿರಲ್ಲಾ. ಈ ಸಂದರ್ಭದಲ್ಲಿ ನನ್ನಿಂದಾಗಬೇಕಾದ ಕೆಲಸ ವಾದರೂ ಏನು ?

**ವಿಶ್ವಾ:** ಈಗ ಹರಿಶ್ಚಂದ್ರನು, ಕಾಶಿಯಲ್ಲಿ, ನನಗೆ ಕೊಡಬೇಕಾದ ಹಣವನ್ನು ಗಡುವು ತೀರುವುದರೊಳಗೆ ಸಲ್ಲಿಸಲು ತನ್ನ ಹೆಂಡತಿ ಮಗನನ್ನು ಮಾರಿರುವನು. ಅಗ್ನಿದೇವನೇ ಅವರನ್ನು ಕ್ರಯಕ್ಕೆ ಪಡೆದಿದ್ದಾನೆ. ಈಗ ಸಾಲದ ಹಣಕ್ಕೆ ತನ್ನನ್ನೂ ವಿಕ್ರಯಿಸಿಕೊಳ್ಳಲು ಸಿದ್ಧನಾಗಿರುವನಂತೆ. ನೀನು ಈಗಲೆ ಕಾಶೀಕ್ಷೇತ್ರಕ್ಕೆ ಹೋಗಿ, ಚಂಡಾಲ ವೇಷದಿಂದ ಹೇಗಾದರೂ ಮಾಡಿ ಅವನು ಕೇಳಿದಷ್ಟು ಹಣವನ್ನು ಕೊಟ್ಟು ಕೊಂಡುಕೊಳ್ಳುವುದು. ಅನಂತರ ಅವನನ್ನು ಶ್ಮಶಾನದ ಕಾವಲಿಗಿಟ್ಟು, ಕೊಡಬಾರದ ಹಿಂಸೆಕೊಟ್ಟು, ಹೇಗಾದರೂ ಅವನು ಅನೃತವಾಡುವಂತೆ ಮಾಡು. ತಿಳಿಯಿತೆ ?

**ಯಮ :** (ಬತ್ತಿಹೋದ ಮುಖದಿಂದ, ನಮ್ರನಾಗಿ) ಪೂಜ್ಯರೆ, ಏನು ಹೇಳಿದಿರಿ! ನಾನು ಚಂಡಾಲನಾಗಬೇಕೆ! ಅದು ಹೋಗಲಿ; ಸತ್ಯಧನನಾದ

ಹರಿಶ್ಚಂದ್ರನನ್ನು ಹಿಂಸಿಸಿ ಅಧರ್ಮಿಯನ್ನಾಗಿ ಮಾಡಬೇಕೆ! ಈಗಲೀಗ ನಾನು ಧರ್ಮನೆಂದು ಹೆಸರು ಪಡೆದದ್ದು ಸಾರ್ಥಕವಾಯಿತು.

**ವಿಶ್ವಾ:** (ಸಿಟ್ಟಿನಿಂದ) ಆಂ . . . ನಾನು ಮೊದಲೆ ದುಡುಕಬೇಡವೆಂದು ಹೇಳಲಿಲ್ಲವೆ? ಇದುವೆಯೆ ನಿನ್ನ ಧರ್ಮಬುದ್ಧಿ?

**ಯಮ:** ತ್ರಿಕಾಲಜ್ಞರೆ, ನಿರಪರಾಧಿಯನ್ನು ಹಿಂಸಿಸುವುದು ಧರ್ಮ ವಿರುದ್ಧವಲ್ಲವೆ? ಹರಿಶ್ಚಂದ್ರನು ನನಗಾಗಲಿ ತಮಗಾಗಲಿ ಯಾವ ಅನ್ಯಾಯ ಮಾಡಿದ್ದಾನೆ? ತಪ್ಪೇ ಇಲ್ಲದವನನ್ನು ಶಿಕ್ಷಿಸುವುದು ಹೇಗೆ? ಪಾಪ ಹೆಚ್ಚಿ ಧರ್ಮ ಕ್ಷಯವಾದಾಗ ಭೂಭಾರ ಕಡಮೆ ಮಾಡಲು ಪರಮಾತ್ಮನು ಅವತರಿಸುತ್ತಾನೆ. ಭೂಲೋಕದಲ್ಲಿ ಧರ್ಮಿಗಳಿರುವುದೇ ವಿರಳ. ಹೀಗಿರುವಲ್ಲಿ, ಧರ್ಮದಿಂದಿರುವೆನೆನ್ನುವವರನ್ನು ಅಧರ್ಮಕ್ಕೆಳೆಯುವುದು ಯಾವ ನೀತಿ?

**ವಿಶ್ವಾ:** ಧರ್ಮ, ಮಾತು ಹೆಚ್ಚಾಯಿತು. ಹರಿಶ್ಚಂದ್ರನು ನ್ಯಾಯಸ್ಥನೋ ಅನ್ಯಾಯಸ್ಥನೋ . . . ಅವನನ್ನು ಹಿಂಸಿಸುವುದು ಪಾಪವೋ ಪುಣ್ಯವೋ . . . ನಾನು ನಿನ್ನನ್ನು ಅದರ ವಿಮರ್ಶೆ ಮಾಡೆಂದು ಕೇಳಲಿಲ್ಲ. ಕೇವಲ ನನ್ನ ಕಾರ್ಯಾರ್ಥವಾಗಿ ನಿನ್ನ ಸಹಾಯವನ್ನಪೇಕ್ಷಿಸಿದೆ. ನೀನು ಅಭಯ ಕೊಟ್ಟಿರುತ್ತೀಯೆ. ನಾನು ಕೇಳಿಕೊಂಡದ್ದನ್ನು ನಡಸಿಕೊಡಲು ಆಗುತ್ತದೋ ಇಲ್ಲವೋ ತಿಳಿಸು. ಉಳಿದದ್ದರ ಚಿಂತೆ ನಿನಗೇಕೆ?

**ಯಮ:** ಕೋಪಿಸಬೇಡಿ. ನನ್ನ ಯಾವ ತಪ್ಪಿಗಾಗಿ ನನಗೆ ಚಂಡಾಲತ್ವವನ್ನು ಕೊಡಲಿಚ್ಛಿಸಿರುವಿರಿ?

**ವಿಶ್ವಾ:** ನಿನ್ನದು ಏನು ತಪ್ಪೋ, ಏನು ಸರಿಯೋ ನನಗೆ ಬೇಡ. ನೀನು ನಿನ್ನ ಮಾತನ್ನು ಉಳಿಸಿಕೊಳ್ಳಬೇಕಾದರೆ, ನನ್ನ ಕಾರ್ಯ ಸಿದ್ಧಿಸಬೇಕಾದರೆ, ನೀನು ಚಂಡಾಲನಾಗದೆ ಗತ್ಯಂತರವಿಲ್ಲ.

**ಯಮ:** ಸಕಲವನ್ನೂ ತಿಳಿದ ತಾವೆ ಈ ರೀತಿ ಹೇಳಬಹುದೆ? ಸ್ವಾರ್ಥಕ್ಕಾಗಿ ಪರರನ್ನು ಅಕಾರ್ಯಮಾಡೆಂದು ಪ್ರೇರಿಸುವುದು ಯಾವ ಧರ್ಮ?

**ವಿಶ್ವಾ:** ಇದರಲ್ಲಿ ನನ್ನ ಸ್ವಾರ್ಥವೇನೂ ಇಲ್ಲ; ಕಾರ್ಯೋನ್ಮುಖನಾದವನು ತಾನು ಗುರಿಯಿಟ್ಟ ಕೆಲಸವನ್ನು ಪೂರ್ಣಗೊಳಿಸಬೇಕಾದ್ದು ಅವನ ಧರ್ಮ. ನನ್ನ ಕೆಲಸಕ್ಕಾಗಿ ನಿನ್ನ ನೆರವು ಕೇಳಿದ್ದೇನಷ್ಟೆ.

**ಯಮ:** ಅದು ಸರಿ. ಹಿಡಿದ ಕೆಲಸವನ್ನು ಸಾಧಿಸಬೇಕಾದ್ದೇನೋ

ಧರ್ಮ. ಆದರೆ ಅನುಸರಿಸುವ ಮಾರ್ಗವೂ ಧರ್ಮಬದ್ಧವಾಗಿರಬೇಡವೆ? ಧರ್ಮಮೂರ್ತಿಗಳಾದ ತಾವೇ ಹೀಗೆ ಹೇಳಿದರೆ, ಇನ್ನು ಅಲ್ಪರ ಮಾತೇನು?

**ವಿಶ್ವಾ:** (ಸಿಡುಕಿನಿಂದ) ಏನಾಡಿದೆ? ನನ್ನ ಮಾರ್ಗವು ಕುಮಾರ್ಗವೆ! ನಿನ್ನನ್ನು ನಾನು ಮೋಸಪಡಿಸಿದೆನೆ! ಬಹಳ ಚೆನ್ನಾಗಿದೆ. 'ಏನು ಬೇಕಾದರೂ ಅಪ್ಪಣೆ ಕೊಡಿಸಿ, ನೆರವೇರಿಸುತ್ತೇನೆ' ಎಂದು ಮುದ್ದುಮುದ್ದಾಗಿ ಹೇಳಿ, ಈಗ ನಾನು ಬೇಡಿದ್ದನ್ನು ನಡಸಿಕೊಡಲು ಹಿಂಜರಿಯುವ ನೀನು ಅಧರ್ಮಿಯೊ? ಅಥವಾ ಶತಾಯು ಗತಾಯುವಾಗಿ ನನ್ನ ಗುರಿ ಮುಟ್ಟಲು ಪ್ರಯತ್ನಿಸುತ್ತಿರುವ ನಾನು ಅಧರ್ಮಿಯೊ? ದುಡುಕಿ ಮಾತುಕೊಟ್ಟ ನೀನು ಕುಮಾರ್ಗಿಯೊ? ಅಥವಾ ಇದ್ದುದನ್ನು ಮರೆಮಾಚದೆ ಹೇಳಿ, ಸಹಾಯ ಕೋರಿದ ನಾನು ಕುಮಾರ್ಗಿಯೊ? ನಿನ್ನೊಡನೆ ಹೆಚ್ಚು ಮಾತುಗಳೇಕೆ? ಆಡಿದ ಮಾತಿಗೆ ತಪ್ಪಿದೆನೆಂದು ಹೇಳು. ಹೊರಟುಹೋಗುತ್ತೇನೆ. (ಎಂದು ವಿಮುಖನಾಗುವನು.)

**ಯಮ:** ಕರುಣಾಳು, ಹರಿಶ್ಚಂದ್ರನ ಯಾವ ತಪ್ಪಿಗಾಗಿ ಅವನನ್ನು ಹಿಂಸಿಸಲಿ? ನನ್ನ ಯಾವ ಪಾಪನಿವೃತ್ತಿಗಾಗಿ ನಾನು ಚಂಡಾಲನಾಗಲಿ? ಇವೆರಡನ್ನೂ ಬಿಟ್ಟು, ಮತ್ತೇನಾದರೂ ಅಪ್ಪಣೆಕೊಡಿ. ನನ್ನಲ್ಲಿ ಕರುಣೆ ತೋರಿ.

**ವಿಶ್ವಾ:** ಛೀ, ಮೂರ್ಖ! ಆಡಿದ್ದನ್ನೆ ಮತ್ತೆಮತ್ತೆ ಹೇಳುತ್ತಿರುವೆಯಾ! ನಿನ್ನಲ್ಲಿ ನಾನು ಯಾಚಿಸಿದ್ದು—ಬಂಜೆ ಹಸುವಿನಲ್ಲಿ ಹಾಲು ಬೇಡಿದಂತಾಯ್ತು. ನೀನೊಬ್ಬ ನ್ಯಾಯ ತೀರ್ಮಾನಿಸುವ ಧರ್ಮಮೂರ್ತಿ! ಆಡಿದ ಮಾತಿನಂತೆ ನಡೆದುಕೊಳ್ಳಲಾರದ ಹೇಡಿ! ಪಾಪ, ಹರಿಶ್ಚಂದ್ರನಲ್ಲಿ ಅನುತಾಪ ತೋರುವ ನೀನು ಕರುಣಾಳು. ಚಂದ್ರಮತಿಯನ್ನು ಕೊಂಡುಕೊಂಡ ಅಗ್ನಿದೇವನು ಕಟುಕ . . . ಅಧರ್ಮಿ! ಕಲಿತ ಧರ್ಮವನ್ನೆಲ್ಲ ನನ್ನ ಮುಂದೆಯೆ ಉಪಯೋಗಿಸುತ್ತಿರುವೆ. ನೀನು ಸಮವರ್ತಿ, ನಾನು ವಿಷಮವರ್ತಿ, ಅಲ್ಲವೆ? ಆಂ . . .! ಹರಿಶ್ಚಂದ್ರನಲ್ಲಿ ಕನಿಕರ ತೋರಿಸುವವನಂತೆ ನಟಿಸಿ, ಆಡಿದ ಮಾತಿಗೆ ತಪ್ಪಿಸಿಕೊಳ್ಳಲು ಪ್ರಯತ್ನಿಸುವೆಯಲ್ಲವೆ? ಅದಕ್ಕೆ ಬದಲು ನಾನು ಚಂಡಾಲನಾಗುವುದಿಲ್ಲವೆಂದು ಹೇಳಿಬಿಡು. ಇಲ್ಲಿಂದ ಹೊರಟುಹೋಗುತ್ತೇನೆ.

**ಯಮ:** (ದೈನ್ಯದಿಂದ ಕೈಮುಗಿದು) ದೇವರ್ಷಿ, ಕಠಿಣರಾಗಬೇಡಿ. ನನ್ನಲ್ಲಿ ದಯೆತೋರಿ. ಬೇಡಿದುದನ್ನು ನೀಡುವುದು ತಮ್ಮಂಥ ಕರುಣಾಳುವಿಗೆ, ತಮ್ಮಂಥ ದಾನಶೂರರಿಗೆ ಸಾಧುವಲ್ಲವೆ?

**ವಿಶ್ವಾ:** (ಅತಿಯಾದ ಸಿಟ್ಟಿನಿಂದ, ಹೊರಡಲುದ್ಯುಕ್ತನಾಗಿ) ಛೀ ಛೀ, ! ನೀನು ಹೆಸರಿಗೆ ಮಾತ್ರ ಧರ್ಮನು. ಅಧರ್ಮದ ಅಪರಾವತಾರ . . . ಠಕ್ಕಿನ ದೊಡ್ಡ ಮುದ್ದೆ . . . ನೀನು! ಇನ್ನು ನಾನಿಲ್ಲಿ ಒಂದು ಅರೆಕ್ಷಣವೂ ನಿಲ್ಲಲಾರೆ. (ಎಂದು ಮುಂದಕ್ಕೆ ಕಾಲು ತೆಗೆಯುವನು.)

**ಯಮ:** (ಹೊರಟ ಮುನಿಯನ್ನು ತಡೆದು, ಕುಗ್ಗಿದ ಮನಸ್ಸಿನಿಂದ) ಕುಪಿತರಾಗಬೇಡಿ. ಏನೋ ಚಂಡಾಲನಾಗಬೇಕಲ್ಲಾ ಎಂದು ಅಂಜಿ ತಮ್ಮನ್ನು ಬೇಡಿದೆ. ತಮಗೆ ನನ್ನಲ್ಲಿ ದಯೆ ಬರಲಿಲ್ಲ. ಹೋಗಲಿ ಬಿಡಿ. ಭಾಷೆಕೊಟ್ಟು ತಪ್ಪಿ, ಭಾಷೆಗೆ ತಪ್ಪಿದವನೆಂಬ ಅಪಕೀರ್ತಿ ಪಡೆಯುವುದಕ್ಕಿಂತಲೂ ಚಂಡಾಲ ನಾಗುವುದು ಹೇಯವಾದುದಲ್ಲ. ತಮ್ಮ ಇಚ್ಛೆಯಂತೆ ಈಗಲೆ ಕಾಶಿಗೆ ತೆರಳು ವೆನು. ಇನ್ನು ತಾವು ನಿಶ್ಚಿಂತರಾಗಿ ಮರಳಿ. (ಎಂದು ನಮಸ್ಕರಿಸುವನು.)

**ವಿಶ್ವಾ:** (ಯಮನನ್ನು ಸಂತೈಸಿ, ಆಶೀರ್ವದಿಸಿ) ಧರ್ಮ, ನಿನ್ನ ಔದಾರ್ಯ ತ್ಯಾಗ ಶೀಲಗಳು ನಿಜವಾಗಿಯೂ ಹೊಗಳಿಕೆಗೆ ಪಾತ್ರವಾದವುಗಳೇ ಸರಿ. ಇನ್ನು ನಾನು ಹೋಗಿಬರುತ್ತೇನೆ. ನಿನ್ನ ಕೆಲಸದಲ್ಲಿ ಎಚ್ಚರಿಕೆಯಿರಲಿ. ಸಕಲ ಪ್ರಯತ್ನಗಳಿಂದಲೂ ಹರಿಶ್ಚಂದ್ರನನ್ನು ಸತ್ಯಭ್ರಷ್ಟನಾಗುವಂತೆ ಮಾಡಲು ಯತ್ನಿಸು. ತಿಳಿಯಿತೆ?

[ವಿಶ್ವಾಮಿತ್ರನು ತನ್ನ ಆಶ್ರಮದ ಕಡೆಗೆ ಹೊರಟುಹೋಗುವನು. ದುಃಖಿ ಯಾದ ಯಮನು ತನ್ನ ಪೆಚ್ಚುತನಕ್ಕೆ ನೊಂದುಕೊಂಡು ಭೂಗತನಾಗುವನು.]

—ಟಿ. ಎಸ್. ಅನ್ನಪೂರ್ಣಾ.

---

## ಧಾತ ತಿಲಘಾತಕ

ಧಾತನೆಣ್ಣೆಯಗಾಣದೆಳ್ಳುಕಾಳಲೆ ನೀನು;
ಆತನೆಲ್ಲರನರೆವನ್, ಆರನುಂ ಬಿಡನು ;
ಆತುರಂಗೊಳದೆ ವಿಸ್ಮೃತಿಬಡದುಪೇಕ್ಷಿಸದೆ
ಘಾತಿಸುವನೆಲ್ಲರನು—ಮಂಕುತಿಮ್ಮ

# ಪೊಸದು ತೆರನೀ ಮಿಥಿಲೆಯರಸನದು

"ನಾನೊಬ್ಬ ಸುದ್ದಿಗಾರ, ಪ್ರಭು. ತಮಗೆ ಅರುಹಿರುವೆ ಅಯೋಧ್ಯೆಯ ಎಲ್ಲ ಸುದ್ದಿಯನು. ಪ್ರಜೆಗಳೆಲ್ಲರೂ ತಮ್ಮ ಅಭಿಮತವ ತಿಳಿಯಲು ಕಾತರ ದಿಂದಿಹರು. ತಮ್ಮ ಅಭಿಮತವ ತಿಳಿದು, ಅದ ಪ್ರಕಟಿಸಿ, ಜನಗಳಿಗೆ ತಿಳಿಸುವುದು ನನ್ನ ಉದ್ದೇಶ."

"ಹೇ ಬೇಹುಗಾರ, ನನ್ನ ಅಭಿಮತವನೇನೆಂದು ಅರುಹಲಿ? ಎದೆ ಬಾಯ್ಗೆ ಬಂದಿಹುದು, ನಿನ್ನಿಂದ ಸುದ್ದಿಯನು ಕೇಳಿ. ದುಃಖದಿಂ ತುಟಿ ಎರಡಾಗದು!"

"ಪ್ರಜೆಗಳೆಮ್ಮದೆ ಅಳಲು ಇನಿತಿರಲು, ಜನಕರೇ ತಮ್ಮ ಮನದಳಲು ಅಳೆಯಲಳವೆ? ತಾಳಲಸದಳ ತಮ್ಮ ದುಃಖ. ಆದೊಡಂ ವಿಷಮ ಸಮಯ ವಿದು. ಈಗ ತಮ್ಮಭಿಮತವ ಜನ ತಿಳಿದರೊಳ್ಳಿತ್ತೆಂದು ತೋರುತಿದೆ! ಮಿಥಿಲೆಗಿಂ ಮಿಗಿಲಾಗಿ, ಸಾಕೇತವಾಸಿಗಳು ತಮ್ಮ ಹಿತನುಡಿಯನಾಲಿಸಿದರಾದೀತು."

"ಕಳವಳಿಸಲಾಗದು ಪ್ರಜಾವರ್ಗ—ಇಲ್ಲಿಯುಂ ಅಲ್ಲಿಯುಂ. ದುಃಖ ಬರುವುದು, ನಮಗೆ ಮಾನವರ್ಗಲ್ಲದೇಂ ಮರಕೆ ಬಹುದೆ? . . . ಮುದ್ದು ಜಾನಕಿ ನನಗೆ ಸುತೆಯಾಗದಿದ್ದೊಡೆ, ಒಳಿತಾಗುತಿತ್ತು!!"

"ಪ್ರಭುವೆ, ಅಂತೆನ್ನಲಾಗದು ತಾವು. ಮಿಂಚಿರ್ಪ ಕಾರ್ಯಕ್ಕೆ ಚಿಂತಿಸಿ ದೊಡೇನು ಫಲ? ತಾವೆ ಇಂತಾಡಿದೊಡೆ, ತಮ್ಮ ಮಕ್ಕಳೀ ಪ್ರಜೆಗಳಿಗೆ ಗತಿಯೇನು? ಅಯೋಧ್ಯೆಗೇಂ ಗತಿ? ಮತಿ? ತಾವಲ್ಲದಿನ್ನಾರು!?"

"ಇಂತಪ್ಪುದೆಂದು ನಾ ಕನಸಿನಲು ಎಣಿಸಲಿಲ್ಲ. ವಿಧಿಗೆ ಯಾರ್ ಇದಿರು? ನಾಲ್ಕು ಮಕ್ಕಳ ತಂದೆ ದಶರಥಂಗೊದಗಿದಾ ದುಃಸ್ಥಿತಿಗೆ ನಾ ದುಃಖಿ ಸುತಿಹೆ. ಪುತ್ರರತ್ನ ಚತುಷ್ಕದೊಳಗೊಬ್ಬನೂ ಇಲ್ಲವಾದತ್ತೇ! ತಂದೆಯವ ನಂತ್ಯಕಾಲಕ್ಕೆ! ಸಹಿಸಲಸದಳ! ಸಹಿಸಲಸದಳ! . . . ಕೈಕೆಗೇನ್ ಕೊಟ್ಟುದೋ ದುರ್ಬುದ್ಧಿಯಂ ದೈವ! ಮರನ ತುದಿಯೊಳ್ಕುಳ್ತು ಬುಡಕೆ ಕೊಡಲಿಯನಿಕ್ಕುವರೆ ತನ್ನ ಕೇಡಂ ಮರೆತು!"

"ಯಾವ ಪುರುಷಾರ್ಥಕ್ಕೆ ಈ ದುರ್ಬುದ್ಧಿ ಬಂದಿತೊ, ಚಿಕ್ಕರಾಣಿಯರಿಗೆ!"

"ಕರ್ಮವೆಂತೆಂತಿಹುದೊ, ಸವೆಸಲೆಬೇಕು; ಬೆನ್ನ ಬಿಡದದು!"

"ಅಯೋಧ್ಯೆಗೆ ಮುಂದೆ ಗತಿಯೇನು, ಮಹಾರಾಜ? ರಾಮಭದ್ರಂ ಮತ್ತೆ ಹಿಂತಿರುಗಲಾರ. ಭರತ ಶತ್ರುಘ್ನರೊ ಮಾವನ ಮನೆಯೊಳಿಹರು. ಏಂಗೈವುದೀಗ?"

"ಮಂತ್ರಿವರ್ಗಂ ಭರತನಿಗಾಗಿ ಬೇಹು ಕಳುಹಿಸಿರಬೇಕೀಗ. ಆತನುಂ ಆಳಲಿಕ್ಕೊಪ್ಪನೆಂದೇ ನನ್ನೆಣಿಕೆ! ತನ್ನಣ್ಣ ರಾಮನಂ ಕರೆತರುವ ಸಾಹಸಕೆ ಕೈಹಾಕಿದರೂ ಹಾಕಿಯಾನು."

"ರಾಮಚಂದ್ರಂ ಹಿಂತಿರುಗಬಹುದೇ ಪ್ರಭು?"

"ಪಿತೃವಾಕ್ಯಪರಿಪಾಲನೆಗೋಸುಗ ಸರ್ವವನು ತ್ಯಜಿಸಿ ಹೋದಾ ದಾಶರಥಿ, ಹಿಂತಿರುಗಿ ಬರಲಾರ!"

"ಹಾಗಾದೊಡೆ ಭರತಂ ಮುಂದೇನಗೈಯುವನೊ?"

"ಈತ ಬಿಡುವವನಲ್ಲ, ಆತ ಬರುವವನಲ್ಲ. ಭರತನೇ ಹದಿನಾಲ್ಕು ವರುಷ ನೋಡಬೇಕಾಗಬಹುದು ರಾಜ್ಯವನು . . . ಸೀತೆಯ ಅದೃಷ್ಟ! ಲಕ್ಷ್ಮಣನ ಸುಕೃತ!! ಸೀತಾರಾಮಲಕ್ಷ್ಮಣರ ಸೌಭಾಗ್ಯ!!!"

"ಹೀಗೇಕೆ ನುಡಿಯುವಿರಿ ಪ್ರಭುವೆ? ಇದೇನು ಸುಕೃತ, ಇದೇನು ಸೌಭಾಗ್ಯ? ಅದೃಷ್ಟವಿದೇನು ಬಂತು ಈ ಸಂಕಟದ ಸ್ಥಿತಿಯಲ್ಲಿ?"

"ಬಹುದಿನಗಳಾಶೆ, ಆ ಸೀತೆಯಾಸೆ, ವನಸಿರಿಯ ಸೊಬಗನನುಭವಿಸುವ ಅತ್ಯಾಶೆ, ಇಂದು ಕೈಗೂಡಿದುದು, ಸುದ್ದಿಗಾರ. ಶ್ರೀರಾಮನೊಡನೆ ಹೊರಟ ಸೀತಾಲಕ್ಷ್ಮಣರಿಗೆ ಇದು ಒಂದು ಸುಕೃತವಲ್ಲದೆ ಬೇರೇನು ತಿಳಿದಿರುವೆ? ಶ್ರೀರಾಮ ಯಾವ ಲೋಕೋಪಕಾರಕ್ಕಾಗಿ ಹೊರಟಿಹನೊ ಆತನೇ ಬಲ್ಲ; ಹಿಂದೆ, ವಿಶ್ವಾಮಿತ್ರಮುನಿಯೊಡನೆ ಕಂಡ ವನಸಿರಿಯನಿಂದು ಪುನಃ ಕಾಣುವರು, ಸೀತೆಯೊಡನೆ ಹೊರಟ ರಾಮಲಕ್ಷ್ಮಣರು! ಅದರಿಂದ, ಸುದ್ದಿಗಾರ, ತಿಳಿಸು ನೀ ಸರ್ವರಿಗು: ದುಃಖಿಸುವ ಕಾರಣವಿಲ್ಲ ಎಂದು. ಮರುಗಿದರೆ ಅಯೋಧ್ಯೆಗೆ ಮರುಗಬೇಕೇ ಹೊರತು ರಾಮಲಕ್ಷ್ಮಣ ಸೀತೆಯರಿಗಾಗಿ ಬೇಡ!"

"ಏನು ಹೇಳಿದಿರಿ, ಪ್ರಭುವೆ!!"

"ಆಶ್ಚರ್ಯಪಡದಿರು, ನಿಜಸ್ಥಿತಿಯನರುಹಿದೆನು; ಒಂದು ಊರಿನ ಸುಖಕಾಗಿ ಮನೆಯೊಂದ ತ್ಯಜಿಸು, ಒಂದು ಮನೆಯ ಸುಖಕಾಗಿ ಒಬ್ಬನನು

ತ್ಯಜಿಸು, ಎಂಬಂತೆ, ಶ್ರೀರಾಮಚಂದ್ರಂ ಲೋಕಸುಖಕಾಗಿ, ಲೋಕಕಲ್ಯಾಣಕಾಗಿ ಯಾತ್ರೆ ಹೊರಟಿರುವನು. ವಿಜಯಯಾತ್ರೆಯಿದಾಗಲೆಂದು ಹರಸುವುದು ನನ್ನ ಕೆಲಸ. ಅದಕಾಗಿ ಬೇಡುವುದೆ—ನಿಮ್ಮೆಲ್ಲರ, ಸರ್ವಪ್ರಜೆಗಳ ಕೆಲಸವಾಗಲಿ! ಮುನಿಗಳನು ಸಂಧಿಸುತ, ಅವರೆಲ್ಲರಾಶೀರ್ವಾದವಂ ಹೊಂದುವ ಭಾಗ್ಯ ಅವರಿಗೆ! ಅದಕೆ ಸಂತೋಷಪಡಬೇಕು ನಾವು! ತೆರೆಯಿತು ಹೆಬ್ಬಾಗಿಲು, ಶ್ರೀರಾಮಚಂದ್ರನ ಸೌಭಾಗ್ಯದ ಬಾಗಿಲು. ಮಂಗಳವಾಗಲಿ ಸೀತಾರಾಮ ಲಕ್ಷ್ಮಣರಿಗೆ. ಯಾತ್ರೆಯಿದು ವಿಜಯಯಾತ್ರೆಯಾಗಲಿ ಶ್ರೀರಾಮಭದ್ರಂಗೆ!!"

"ಭರತ ಮುಂತಾಗಿ ಅಯೋಧ್ಯೆಗೆ ಗತಿಯೇನು ಮಹಾಪ್ರಭು?"

"ಅವರಿಗಿದು ಪರೀಕ್ಷಾ ಸಮಯ. ಕಷ್ಟನಿಷ್ಠುರಗಳಿಂದಲೆ ಮಾನವನ ಜೀವ ಪಕ್ವಗೊಳಬೇಕು . . . ಪಾಪ, ಊರ್ಮಿಳೆಯ ಸ್ಥಿತಿ ನೆನೆದೊಡೆ ಮೈಯೆಲ್ಲ ನಡುಗುವುದು! ಅವಳಿಗೂ ಇದು ಕಾಲ, ಪರೀಕ್ಷಾಕಾಲ! ಸುಖ, ದುಃಖ, ಸುಖ, ಹೀಗೆಯೇ ಕಾಲಚಕ್ರ ತಿರುಗುವುವು. ಹದಿನಾಲ್ಕು ವರುಷಗಳು ಹದಿನಾಲ್ಕು ಕ್ಷಣವಾಗಿ ಮುಗಿಯುವುದು. ಅಯೋಧ್ಯೆಯ ಪರಿಸ್ಥಿತಿ ಬೇಗನೆ ಉತ್ತಮಗೊಳ್ಳುವುದು. ಸೀತಾರಾಮಲಕ್ಷ್ಮಣರ ವಿಜಯಯಾತ್ರೆ ಶೀಘ್ರವಾಗಿ ಮುಕ್ತಾಯವಾಗಲಿ. ಶ್ರೀರಾಮ ಕೀರ್ತಿಯಂ ಸಂಗಳಿಸಲಿ!"

"ಪೊಸದು ತೆರನೀ ಮಿಥಿಲೆಯರಸನದು. ದುಃಖದೊಳಗುಂ ಸುಖವ, ಸಂತೋಷವ ಕಾಂಬ ಈ ನೀತಿ, ಈ ರೀತಿ ತುಂಬ ಒಳಿತು. ಪೊಸದು ತೆರನೀ ಮಿಥಿಲೆಯರಸನದು."

—ಎಂ. ಚಂದ್ರಶೇಖರಯ್ಯ.

---

## ನೋವೆಲ್ಲ ಪಾವಕ

ಆವ ಜೀವದ ಪಾಕವಾವನುಭವದಿನಹುದೊ?
ಆವ ಪಾಪಕ್ಷಯವದಾವ ಪುಣ್ಯದಿನೋ?
ಕಾವಿರದೆ ಪಕ್ವವಹ ಜೀವವಿಳೆಯೊಳಗಿರದು;
ನೋವೆಲ್ಲ ಪಾವಕವೊ—ಮಂಕುತಿಮ್ಮ

# ಮುನಿರಾಕ್ಷಸ

**ವಿಶ್ವಾಮಿತ್ರ:** "ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು" ಎಂಬ ನಾಣ್ಣುಡಿಯಂತೆ ವಶಿಷ್ಠ ವಿಶ್ವಾಮಿತ್ರರಾದ ನಮ್ಮ ವೈರವು ಹರಿಶ್ಚಂದ್ರರಾಯನ ಪ್ರಾಣಕ್ಕೆ ಸಂಚಕಾರ ತಂದಿತು. ವಶಿಷ್ಠನು ನನ್ನನ್ನು "ರಾಜರ್ಷಿ" ಎಂದು ಕೆಟ್ಟಾಡಿದ್ದಕ್ಕೆ ಅವನ ಶಿಷ್ಯನಾದ ಹರಿಶ್ಚಂದ್ರನನ್ನು ಹುಸಿಕನನ್ನಾಗಿ ಮಾಡಿ, ಅನಂತರ ವಶಿಷ್ಠನನ್ನು ಜಯಿಸಬೇಕೆಂಬ ಇಚ್ಛೆಯು ನನ್ನಲ್ಲಿ ಮೂಡಿತು. ಅದಕ್ಕಾಗಿ ಹಲವು ಉಪಾಯಗಳನ್ನು ಹುಡುಕಿ, ಅವು ಸಾಗದೆ, ಅಷ್ಟದಿಕ್ಪಾಲಕರಲ್ಲಿ ಕೆಲವರ ಸಹಾಯದಿಂದಲಾದರೂ ಹರಿಶ್ಚಂದ್ರನನ್ನು ಹುಸಿಕನನ್ನಾಗಿ ಮಾಡಲು ಯತ್ನಿಸಿದೆನು. ಹರಿಶ್ಚಂದ್ರನನ್ನು ರಾಜ್ಯಭ್ರಷ್ಟನನ್ನಾಗಿಸಿ ಆತನ ಮಡದಿಮಕ್ಕಳನ್ನು ವಿಪ್ರವೇಷದ ಅಗ್ನಿಗೆ ಆಳಾಗುವಂತೆ ಮಾಡಿದ್ದಾಯಿತು. ಈಗ ಹರಿಶ್ಚಂದ್ರನನ್ನು ಯಮನಿಗೆ ಒಪ್ಪಿಸಿ, ಅವನ ಸತ್ಯಗಿತ್ಯದ ಬಲುಹನ್ನು ನೋಡುವೆನು.

(ಯಮಲೋಕದಲ್ಲಿ ವಿಶ್ವಾಮಿತ್ರನ ಪ್ರವೇಶ. ಅನಿರೀಕ್ಷಿತವಾಗಿ ಬಂದ ಮುನಿಯನ್ನು ಕಂಡು, ಕುಶಲಪ್ರಶ್ನೆ ಮಾಡಿ, ಸುಖಾಸನದ ಮೇಲೆ ಆತನನ್ನು ಕುಳ್ಳಿರಿಸಿ)

**ಯಮ:** ಲೋಕದಲ್ಲಿ ಜನರು ನಿಧಿಯನ್ನು ಅರಸುವರು. ಆದರೆ ತಪೋನಿಧಿಯು ಅನಾಯಾಸವಾಗಿ ನಮಗೆ ದೊರೆತದ್ದರಿಂದ ನಾವು ಕೃತಾರ್ಥರು.

**ವಿಶ್ವಾಮಿತ್ರ:** ನಿನ್ನ ಸಹಾಯವನ್ನು ಪಡೆಯಲೆಂದೇ ಬಂದೆ.

**ಯಮ:** (ಆತ್ಮಗತ) ದುಃಖಹೇತುವಾದ ಸಕಲ ಆಸೆಗಳನ್ನೂ ತೊರೆದು ನಿಷ್ಕಾಮನಾಗಿ ತಪಸ್ಸಿನಲ್ಲಿಯೇ ಲೀನನಾಗಿರಬೇಕಾದ ಈ ಋಷಿಗೆ ನನ್ನಿಂದ ಯಾವ ಸಹಾಯವೊ? (ಪ್ರಕಾಶ) ಪಾಪಪುಣ್ಯಗಳನ್ನು ವಿಚಾರಿಸುವ ನನ್ನಿಂದ ಯಾವ ಸಹಾಯ ದೊರಕುವುದು?

**ವಿಶ್ವಾ:** ಭೂಲೋಕದಲ್ಲಿ ಅಯೋಧ್ಯಾಧಿಪತಿ ಹರಿಶ್ಚಂದ್ರನೆಂಬೊಬ್ಬ ಅರಸುಂಟು. ಅವನು ಸತ್ಯವಂತನಂತೆ.

**ಯಮ:** ಕೇಳಿಯುಂಟು, ಅವನು ಸತ್ಯವಂತನೆಂದು.

**ವಿಶ್ವಾ:** ಅವನಿಂದ ಹೇಗಾದರೂ ಅಸತ್ಯವನ್ನು ನುಡಿಯಿಸಬೇಕು.

**ಯಮ:** ಛೆ! ಛೆ! ಬಲಾತ್ಕಾರದಿಂದ ಅಸತ್ಯವನ್ನು ನುಡಿಸುವುದು ತಪ್ಪು. ಅದರಿಂದ ಬರುವ ಫಲವಾದರೂ ಏನು?

**ವಿಶ್ವಾ:** ನನಗೂ ವಶಿಷ್ಠನಿಗೂ ಉಂಟಾಗಿರುವ ವೈರದ ಫಲ, ಮಹರ್ಷಿಯಾದ ನನ್ನನ್ನು "ರಾಜರ್ಷಿ" ಎಂದು ಕೆಟ್ಟಾಡಿದ್ದರ ಫಲ—ಈ ಸತ್ಯಪರೀಕ್ಷೆ. ಇದಕ್ಕೆ ಫಲ—ನನ್ನ ಪ್ರತಿಜ್ಞಾಪೂರ್ತಿ.

**ಯಮ:** (ಆತ್ಮಗತ) ನನಗೆಲ್ಲಿಯ ಗ್ರಹಚಾರ? (ಪ್ರಕಾಶ) ಧರ್ಮಮಾರ್ಗದಲ್ಲಿ ಪರೀಕ್ಷಿಸಬಹುದಲ್ಲ?

**ವಿಶ್ವಾ:** ಧರ್ಮರಾಜ, ನಿನಗೆ ಧರ್ಮವು ತಿಳಿಯದೆ? ಸಕಲಸಂಪತ್ತುಗಳಿಗೆ ಒಡೆಯನಾಗಿ, ಚಕ್ರವರ್ತಿಯಾಗಿ, ಯಾವ ಕೊರತೆಯೂ ಇಲ್ಲದಿರುವಾಗ ಸತ್ಯವನ್ನು ಏಕೆ ನುಡಿಯಬಾರದು? ಆದರೆ ನೋವು, ಸಂಕಟ, ಕಷ್ಟಗಳಲ್ಲಿ ಸತ್ಯವನ್ನು ಬಿಡದಿದ್ದರೆ ತಾನೆ? ಚಕ್ರವರ್ತಿ, ಅದರಲ್ಲೂ ಧನವುಳ್ಳ ಶಿಷ್ಯನಾಗಿರುವುದರಿಂದ, ವಶಿಷ್ಠನು ಬಿರುದನ್ನು ಕೊಟ್ಟರಾಯಿತೆ? ಸುಖದುಃಖಗಳಲ್ಲಿ ಸತ್ಯವು ಒಂದೇ ಆಗಿರಬೇಕು.

**ಯಮ:** ಅದರಿಂದ ಆತನನ್ನು ಹಿಂಸಿಸಬೇಕೆಂಬುದು ತಮ್ಮ ಅಭಿಮತವೆ?

**ವಿಶ್ವಾ:** ಚಿತ್ರಹಿಂಸೆಯನ್ನಾದರೂ ಕೊಟ್ಟು, ಹೀನಕೃತ್ಯಗಳನ್ನಾದರೂ ಮಾಡಿಸಿ, ಅವನನ್ನು ಎಂತಾದರೂ ಅಸತ್ಯವಂತನೆನಿಸಬೇಕು.

**ಯಮ:** ಋಷಿಯೇ, ನಿರಪರಾಧಿಗಳನ್ನು ಹಿಂಸಿಸಬಾರದು. ಅಂಥವರ ಪೀಡನೆ ಮಹಾಪಾಪ. ಧರ್ಮವನ್ನೇ ನಂಬಿದ್ದ ಬ್ರಾಹ್ಮಣ ದಂಪತಿಗಳು ಮಗನಿಗೆ ಅಸೂಯೆಯಿಂದ ವಿಷಕೊಟ್ಟು ಕೊಲ್ಲಲು, ಧರ್ಮದೇವತೆಯೇ ಋಷಿಯಂತೆ ಬಂದು ಮಗುವನ್ನು ರಕ್ಷಿಸಲಿಲ್ಲವೆ? ಇದಲ್ಲದೆ ಜೀವಿಸಿರುವವರೆಗೂ ಎಲ್ಲಾ ಅವಯವಗಳೂ ದೇಹಕ್ಕೆ ವಶವಾಗಿರುವ ಹಾಗೆ, ಕಡಿವಾಣವು ಕೈಲಿರುವವರೆಗೆ ಕುದುರೆಗಳು ಸಾರಥಿಗೆ ವಶವಾಗಿರುವಂತೆ, ಸತ್ಯವಂತನಿಗೆ ಎಲ್ಲಾ ದೈವಗಳೂ ಸಹಾಯಕರಾಗಿರುವರು.

**ವಿಶ್ವಾ:** (ತನ್ನೊಳು) ಇದೇನು, ಪುರಾಣಶ್ರವಣಮಾಡಿಸುವನಲ್ಲಾ? ಆಗಲಿ. (ಪ್ರಕಾಶ) ಯಮ, ನೀನು ವಶಿಷ್ಠನಿಗಾಗಲಿ, ಹರಿಶ್ಚಂದ್ರನಿಗಾಗಲಿ ಹೆದರಿದೆಯೊ?

**ಯಮ :** ಕೃತಾಂತನ ಹೆಸರೆತ್ತಿದರೆ ಸಾಕು, ಲೋಕವೆಲ್ಲಾ ಕಂಗೆಟ್ಟು ನಡುಗುವುದು. (ನಗು) ಮಹನೀಯರು ಪುಟವಿಟ್ಟ ಚಿನ್ನದಂತೆ, ತೇದ ಗಂಧದಂತೆ, ಅನೇಕ ಮುಖಗಳನ್ನೊಂದಿದ ವಜ್ರದಂತೆ ಪರಿಶುದ್ಧರು. ಹುತ್ತದಲ್ಲಿ ಮಲಗಿ ನಿದ್ರಿಸುವ ಸರ್ಪವನ್ನು ಕುತ್ತಿಗೆಗೆ ಸುತ್ತಿಕೊಂಡಂತಾಗಿ ಕೇಡಾದರೆ?

**ವಿಶ್ವಾ:** (ಗರ್ವದಿಂದ) ಪ್ರಜಾಪತಿಗೆ ಸಮನಾದ ನನಗೇನು ಭಯ? ಬೇಕಾದರೆ ಬ್ರಹ್ಮನನ್ನೇ ಸೃಷ್ಟಿಸುವೆನು.

**ಯಮ:** ಕೇಡಾಗದಿದ್ದರೂ, ಮಡಕೆಯನ್ನು ಒಡೆದು ಅದರಲ್ಲಿಯೇ ಪ್ರಕಾಶಿಸುವ ದೀಪವನ್ನು ಜಗಜ್ಜ್ವಾಜ್ಯಲ್ಯವಾಗುವಂತೆ ಮಾಡಿದರೆ!

**ವಿಶ್ವಾ:** ಆಗುವುದೇನು? ಎಲ್ಲವೂ ಮುಗಿದಂತೆಯೆ.

**ಯಮ:** ಮುನಿಯೇ, ಮುನಿಯದಿರು. ಲೋಕದಲ್ಲಿ ಯಾವ ಫಲಕ್ಕೂ ದೈವವೊಂದೇ ಕಾರಣ. ಪುರುಷಪ್ರಯತ್ನಕ್ಕೂ ದೈವದ ಫಲಕ್ಕೂ ವ್ಯತ್ಯಾಸವಿದೆ. ಕೇಳು, ದಾರಿಹೋಕರಿಬ್ಬರು ಮಧ್ಯಾಹ್ನ ಕಾಡಿನಲ್ಲಿ ಹೋಗುತ್ತಾ ಹಸಿವಾಗಲು ಒಂದು ಮರದಡಿ ಕುಳಿತರು. ಒಬ್ಬನು ಸೌದೆಯನ್ನೂ ಎಲೆಗಳನ್ನೂ ತರಲು ಹೋದನು. ಒಂದು ಕೋತಿಯು ಗಂಟನ್ನು ಕಸಿದುಕೊಳ್ಳಬೇಕೆಂದಿರುವಾಗ ಮತ್ತೊಬ್ಬನು ಅದನ್ನು ಅಟ್ಟಿಸಿಕೊಂಡು ಹೋದಾಗ ಮರದಮೇಲಿಂದ ಹಾವಿನ ಮರಿಯೊಂದು ಆ ಗಂಟಿನ ಮೇಲೆ ಬಿದ್ದು ಸತ್ತಿತು. ಅದನ್ನು ಕಂಡ ಆ ಪ್ರಯಾಣಿಕರು ಆ ಗಂಟನ್ನು ಅಲ್ಲಿಯೇ ಬಿಸಾಡಿ ಹೊರಟುಹೋಗಲು, ಕೋತಿಯು ಆ ಗಂಟಿನಲ್ಲಿದ್ದ ಪದಾರ್ಥವನ್ನು ತಿಂದು ಸತ್ತಿತು. ಆದಕಾರಣ ಯಾವುದಕ್ಕೂ ದೈವಪ್ರಯತ್ನವೇ ಮುಖ್ಯ. ನಮ್ಮ ಪ್ರಯತ್ನವು ದೈವಪ್ರಯತ್ನಕ್ಕೆ ಹೊಂದಿಕೊಳ್ಳಬೇಕು.

**ವಿಶ್ವಾ:** ದೈವವೇ ದೊಡ್ಡದೊ! ಎರಡನೆಯ ಸ್ವರ್ಗವನ್ನೇ ಸೃಷ್ಟಿಸಿದ ನನಗಿಂತ?

**ಯಮ:** (ಆತ್ಮಗತ) ಶೋಧಿಸಲು ಉಪಯೋಗಿಸುವ ಬಟ್ಟೆಯು ಒಳ್ಳೆಯದನ್ನು ಬಿಟ್ಟು ಕಶ್ಮಲವನ್ನು ಹೀರುವಂತೆ ಈ ಋಷಿಯ ಮನಸ್ಸು ಒಳ್ಳೆಯದನ್ನು ಹಿಡಿಯದು. ಬೇಟೆಗಾರನು ಮೃಗಗಳಿಗಾಗಿ ಗಂಗಾನದಿಯನ್ನು ಕಾಯ್ದು, ನೀರಡಿಕೆಯಾದರೂ ದಾಹಪರಿಹಾರ ಮಾಡಿಕೊಳ್ಳದೆ ಕಡೆಗೆ ಯಾವ ಬೇಟೆಯೂ ಸಿಕ್ಕದೆ ಹೋದ ಹಾಗೆ ಈತನಿಗೆ ತಪಸ್ಸೂ ಸಿದ್ಧಿಸದು, ಕೀರ್ತಿಯೂ ಫಲಿಸದು.

**ವಿಶ್ವಾ:** ಅಂಜದಿರು, ಫಲವುಂಟು. ಇಂದ್ರನಿಗೆ ಸಮಾನವಾದ ಪದವಿಯನ್ನು ಕೊಡುವೆ. ಐಶ್ವರ್ಯದಲ್ಲಿ ಕುಬೇರನಿಗೆ ಸಮಾನನನ್ನಾಗಿ ಮಾಡಿ, ಅಷ್ಟಭೋಗಗಳನ್ನೂ ಪಡೆಯುವಂತೆ ನಿನಗೊಪ್ಪುವ ಒಂದು ನವೀನ ಜಗತ್ತನ್ನೇ ಸೃಷ್ಟಿಸಿ, ಅಷ್ಟದಿಕ್ಪಾಲಕರಲ್ಲಿ ನಿನ್ನನ್ನು ಪ್ರಮುಖನೆನಿಸುವಂತೆ ಮಾಡುವೆನು.

**ಯಮ:** ನನಗಾವುದೂ ಕೊರತೆಯಿಲ್ಲ. ನನ್ನಿಂದೇನಾಗಬೇಕು, ದಯೆಯಿಟ್ಟು ಬೆಸಸಿ.

**ವಿಶ್ವಾ:** ಹರಿಶ್ಚಂದ್ರನ ಐಶ್ವರ್ಯವೆಲ್ಲಾ ಸೂರೆಹೋಯಿತು. ಅವನ ಹೆಂಡತಿ ಮಕ್ಕಳನ್ನು ಅಗ್ನಿಗೆ ಆಳಾಗುವಂತೆ ಮಾಡಿಬಂದೆ. ಇನ್ನು ಅತಿ ತುಚ್ಛ ಕಾರ್ಯಗಳನ್ನು ಅವನಿಂದ ಮಾಡಿಸಿ, ಮಾನಹೋಗುವಂತೆ ಪ್ರಾಣಹೋಗುವವರೆಗೂ ಪರೀಕ್ಷಿಸಿ, ಅವನಿಂದ ಅಸತ್ಯವನ್ನು ನುಡಿಸಬೇಕು.

**ಯಮ:** (ತನ್ನಲ್ಲಿ) ಈತನ ಮನಸ್ಸು ಬಹಳ ಕಠಿಣವಾದುದು. ಋಷಿಗಳಿಗೆ ಸದಾಕಾಲ ಭಗವಂತನ ನಾಮೋಚ್ಚರಣೆಯಿರಬೇಕು. ಈತನಲ್ಲಿ ಲವಲೇಶವೂ ಇಲ್ಲ. ಇರಲಿ. ಧರ್ಮರೀತಿಯಲ್ಲೇ ಆತನನ್ನು ಪರೀಕ್ಷಿಸಲು ಪ್ರಯತ್ನಿಸುವೆನು. ಅಗ್ನಿಯೇ ಈ ಕಾರ್ಯದಲ್ಲಿ ಕೈಹಾಕಿರುವುದರಿಂದ ನಾನೂ ಪ್ರಯತ್ನಿಸುವುದರಲ್ಲಿ ಯಾವ ದೋಷವೂ ಇರಲಾರದು. (ಪ್ರಕಾಶ) ಆಗಲಿ. ನಾನು ಯಾವ ರೀತಿ ಪರೀಕ್ಷಿಸಲಿ? ಒಂದುಪಾಯ ತೋರಿಸಿ.

**ವಿಶ್ವಾ:** ಸತ್ತವರನ್ನು ವಿಚಾರಿಸುವ ನೀನು ವೀರಬಾಹುಕನೆನಿಸಿ, ಚಂಡಾಲವೇಷ ತಾಳಿ, ಅವನನ್ನು ನಿನ್ನಡಿಯಾಳಾಗಿಟ್ಟುಕೊಂಡು ಪರಿಪರಿಯಾಗಿ ಹಿಂಸಿಸುವುದಲ್ಲದೆ ಅವನಿಂದ ತುಚ್ಛಕೆಲಸಗಳನ್ನು ಮಾಡಿಸಬೇಕು.

**ಯಮ:** (ಆತ್ಮಗತ) ಪಾಪಪುಣ್ಯಗಳನ್ನು ವಿವರಿಸುವುದು ಅತಿ ಪವಿತ್ರವಾದುದಲ್ಲದೆ ಸೂಕ್ಷ್ಮವಾದುದೆಂಬುದು ಈ ಮೂರ್ಖನಿಗೆಲ್ಲಿ ತಿಳಿದೀತು? (ಪ್ರಕಾಶ) ವಿಶ್ವಾಮಿತ್ರರೆ! ನನ್ನ ಕೆಲಸವನ್ನು ಹಿಯ್ಯಾಳಿಸಬೇಡಿ.

**ವಿಶ್ವಾ:** ಚಿಂತಿಸದಿರೈ. ಅವರವರ ಕುಲಕಸುಬನ್ನು ಅವರವರು ಏನಾದರೂ ಬಿಡಬಾರದು. ಪೂರ್ವದಲ್ಲಿ ಒಬ್ಬ ವರ್ತಕನು ಮಂತ್ರಿಯಾಗಿ, ರಾಜ್ಯವನ್ನು ನಾಶಗೈದು, ತಾನೂ ಹತನಾದಂತಾಗಬಾರದು.

**ಯಮ:** ಅದು ಹೇಗೆ ವ್ಯಾಪಾರಿಗೆ ಮಂತ್ರಿಪದವಿ ಬಂತು?

**ವಿಶ್ವಾ:** ಕೇಳು, ರಾಜನೊಂದಿಗೆ ಸಲಿಗೆಯಿಂದಿದ್ದ ವ್ಯಾಪಾರಿಯೊಬ್ಬನು

ರತ್ನಾಭರಣಗಳಿಂದಲೂ, ಆಯುಧಗಳಿಂದಲೂ, ಚತುರಂಗಬಲ ಸಮೇತನಾಗಿ ಸಕಲ ವೈಭವಗಳಿಂದಲೂ ಇದ್ದ ಮಂತ್ರಿಯನ್ನು ನೋಡಿ, ಆತನ ಪದವಿಗೆ ಕರುಬಿ, ತನ್ನ ಕಸುಬಿಗೆ ಜುಗುಪ್ಸೆಪಟ್ಟು, ರಾಜನಲ್ಲಿ, ದೇಶಪರ್ಯಟನೆ ಮಾಡಿ ಜ್ಞಾನಾರ್ಜನೆ ಮಾಡಿದ ತಾನು ಮಂತ್ರಿಗಿಂತ ಯಾವ ರೀತಿಯಲ್ಲೂ ಕೀಳಲ್ಲ ವೆಂದು ನುಡಿಯುತ್ತಿದ್ದನು. ಕೆಲವು ಕಾಲದಲ್ಲೇ ಮುದಿ ಮಂತ್ರಿಯು ತೀರಿ ಹೋಗಲು, ವರ್ತಕನ ವಾಚಾಳತ್ವವನ್ನು ಕಂಡ ರಾಜನು ಅವನನ್ನು ಮಂತ್ರಿ ಯಾಗಿ ಆರಿಸಿದನು. ಸತ್ವವಿಲ್ಲದ ಮಂತ್ರಿ ಮಂತ್ರಿಪದವಿಗೆ ಬಂದದ್ದನ್ನು ಕಂಡು ಶತ್ರುರಾಜರು ಅವನ ಮೇಲೆ ದಂಡೆತ್ತಿ ಬರಲು ವರ್ತಕಮಂತ್ರಿಯು ಒಂದುಪಾಯ ಮಾಡಿದನು. ಸುಶಿಕ್ಷಿತ ಸೈನ್ಯವನ್ನು ಕಳುಹಿದರೆ ಅದು ಹಾಳಾಗುವುದೆಂದು ಹೇಡಿ ಗಳನ್ನೂ ಅಯೋಗ್ಯರಾದ ಸೈನಿಕರನ್ನೂ ಆಯುಧ ಸಮೇತ ಕಳುಹಿಸಿ ಸೋತನು. ರಾಜನಿಗೆ ಕೋಪಬಂದು ಅವನನ್ನು ಕೂಡಲೆ ಕೊಲ್ಲಿಸಿದನು. ಆದುದರಿಂದ ಮನದಲ್ಲಿ ಏನೂ ತಿಳಿದುಕೊಳ್ಳದೆ, ಋಷಿಗಾಗಿ ನಿನ್ನ ಉಪಕಾರ ಬೇಕು.

**ಯಮ:** ಆಗಲಿ. ಹರಿಶ್ಚಂದ್ರನು ಸತ್ಯಸಂಧನೆಂದು ನಾನೂ ಕೇಳಿರು ವೆನು. ಆತನ ಸತ್ಯವು ಯಾವ ಸ್ಥಿತಿಯಲ್ಲಿದೆ ಎಂದು ತಿಳಿಯಲು ನನಗೂ ಕಾತರ. ಧರ್ಮಾಧರ್ಮಗಳನ್ನು ಪರೀಕ್ಷಿಸಲು ಬ್ರಹ್ಮನು ನನ್ನನ್ನು ನಿಯಮಿ ಸಿರುವುದರಿಂದ ನಾನಲ್ಲದೆ ಮತ್ತಾರು ಆತನ ಸತ್ಯವನ್ನು ಪರೀಕ್ಷಿಸುವುದು? ನಾನು ಹೇಗೆ ಪವಿತ್ರನೋ ಹಾಗೆಯೇ ಪವಿತ್ರರೀತಿಯಿಂದ ಧರ್ಮವನ್ನು ಅನುಸರಿಸಿ ಆತನನ್ನು ಪರೀಕ್ಷಿಸುವೆನು.

**ವಿಶ್ವಾ:** (ಆತ್ಮಗತ) ಕೃತಕಾರ್ಯನಾದೆನು. ನನ್ನ ಮಾತಿಗೊಡಂಬಡ ದವರಾರು ? (ಪ್ರಕಾಶ) ನಿನಗೆ ಮಂಗಳವಾಗಲಿ. ನನ್ನ ಕಾರ್ಯವು ನಿನ್ನಿಂದ ಸಫಲವಾಗಬೇಕು, ಯಮಧರ್ಮರಾಜ. (ತೆರಳುವನು.)

**ಯಮ:** ಇವನು ಋಷಿಯಲ್ಲ, ರಾಕ್ಷಸ! ಮುನಿರಾಕ್ಷಸ!

—ಎ. ರಾಮಚಂದ್ರ.

## ಯಮುನಾದನ್ ಅನಾಮಿಕನ್

**ಯಮು :** ಸ್ವಾಗತಮಯ್ ಮುನಿವರೇಣ್ಯ. ವಂದಿಸುವೆ ನಿಮ್ಮ ಚರಣದ್ವಯಂಗಳಿಗೆ. ಋಷಿವರ್ಯ, ನಿಮಗೆ ಬಯಸುವೆ ಸುಖಾಗಮನವ. ಏನಿದೀ ಅಪರೂಪ ದರ್ಶನ?

**ಕೌಶಿಕ :** ಶುಭಮಕ್ಕು, ಮಂಗಳಮಕ್ಕು, ಸೌಭಾಗ್ಯಮೆನಗಕ್ಕು, ನಿನ್ನ ದರ್ಶನದಿಂದ. ಜವರಾಯ, ಮೂರುಲೋಕದೊಳಗಿರಬಹುದು ನುಡಿತಪ್ಪಿ ನಡೆವವರು. ಆದರೋ, ಮೂರ್ತಿತ್ರಯಗಳಾಣೆ, ನೀ ನುಡಿದು ತಪ್ಪುವುದ ಕನಸಿನಲು ಭಾವಿಸಲುಬಾರದು. ಧರ್ಮಾವತಾರ, ಧನ್ಯನಾದೆನು ನಿನ್ನ ದರ್ಶನವ ಪಡೆದು, ನಾನಿಂದು ಧನ್ಯನಾದೆ!!

**ಯಮು :** ಸಾಕು, ಬೇಡ. ತಡೆ, ಬ್ರಹ್ಮಋಷಿ, ಹೊಗಳದಿರೆನ್ನ! ಪರರನಿಂತೆದುರೆದುರು ಹೊಗಳುವುದು ತರವಲ್ಲ! ಅಣು ನಾಂ. ನನ್ನನೇಕಿಂತು ಹೊಗಳುವಿರಿ. ಆ . . . ಬಂದ ಕಾರ್ಯಾರ್ಥವೇನೋ ಬೆಸಸಿ.

**ಕೌಶಿಕ :** ಕ್ಷೇಮವೇ? ಮನೆಯೊಳಗೆ, ಮನದೊಳಗೆ, ಈ ನಿನ್ನ ಲೋಕದೊಳಗೆ?

**ಯಮು :** ತಮ್ಮ ಆಶಿಷದ ಬಲದಿಂದ ಸುಕ್ಷೇಮ! [**ಅತಿವಿನಯವೇಕಿಂದು ಮುನಿಯೊಳಗೆ? ಅತಿವಿನಯಂ ಧೂರ್ತಲಕ್ಷಣವೆಂಬರಲ್ತೆ!**] ದೂತನೊರ್ವನ ಕಳಿಸಿರಲು, ನಾನೇ ಬರುತ್ತಿದ್ದೆ. ತಾವೇಕೆ ಶ್ರಮವ ವಹಿಸಿದಿರಿ, ವೃಥಾ.

**ಕೌಶಿಕ :** ಕಾರ್ಯವಾಸಿ ಕಣಾ ಧರ್ಮ, ನಾನೀಗ. ಅದಕಾಗಿ ಬಂದೆ. ಧರ್ಮ! ಪ್ರಯೋಗವೊಂದ ನಾ ಕೈಕೊಂಡಿಹೆನು . . . ಅರೆಯಾಗಿ ನಿಂತಿಹುದು, ಪೂರ್ಣಗೊಳಿಸಲು ನಿನ್ನ ಸಹಕಾರ ಸಾಹಾಯ್ಯಗಳು ಬೇಕೆನಗೆ. ನಾನು ಅದಕಾಗಿ ನಿನ್ನನ್ನರಸಿ ಬಂದೆ.

**ಯಮು :** ಆ! ಪ್ರಯೋಗ? ಆವುದೋ ಪ್ರಯೋಗ? ನನ್ನಿಂದ ಸಾಹಾಯ್ಯ? [**ಏನೋ ಬಿರುಗಾಳಿ ಎದ್ದಂತಿಹುದು! ಏಗೈವುದೋ!**]

**ಕೌಶಿಕ :** ಸತ್ಯವನ್ನಾರಯ್ದು, ಅರಸಿ, ಶೋಧಿಸಿ, ಪುಟಕಿಡುವ ಪರಮ ಪ್ರಯೋಗ! ಧರ್ಮಸತ್ಯಂಗಳ ತಳವ ತಿಳಿಯುವ ಜ್ಞಾನ.

**ಯುವು :** ಅದೆ ಮಹಾಜ್ಞಾನ, ಅದುವೆ ಸುಜ್ಞಾನ. ಅರೆಯಾಗಿ ನಿಂತಿಹುದೆ ಅದು? [ಹರಿಶ್ಚಂದ್ರನನು ಕುರಿತ ರಗಳೆಯಿರಬಹುದೆ?] . . . ಅದಕೆ, ವಿಶ್ವಾಮಿತ್ರಮುನಿ, ನನ್ನಿಂದ ಬೇಕಾದುದೇನು ?

**ಕೌಶಿಕ:** ನನಗಾಗಿ ನೀನೊಂದು ಕಾರ್ಯವನೆಸಗಬೇಕು. ಸಣ್ಣ ಕೆಲಸವದು. ನಿನ್ನಿಂದ ಮಾತ್ರ ಸಾಧ್ಯ!

**ಯುವು :** ಪರರಿಗದರಿಂದ ಕೇಡಿಲ್ಲದಿರೆ, ನಿನಗೆ ಉಪಕಾರವಾಗುವೊಡೆ ಧರ್ಮಸತ್ಯದ್ವಯಕೆ ಪ್ರತಿಕೂಲಮಿಲ್ಲದೊಡೆ, ನಾನದನು ಮಾಡುವೆನು. [ಎದೆ ನಡುಗುತಿಹುದೇಕೊ! ಯಾವ ಬಲೆಯೊ! ಏನು ಕಾರ್ಯವೊ! ಅಕಾರ್ಯವೊ?]

**ಕೌಶಿಕ :** [ಸಾಕಿನ್ನು. ಬಂದ ಕಾರ್ಯವು ಅರ್ಧ ಆದಂತಾಯ್ತು! ಅವನ ಮಾಡುವೆನ್ ಇವನಿಗಾಳಾಗಿ! ಕೊಡುವೆನಿವನಿಗೆ ಇವನ ಪ್ರಕೃತಿಗನುಗುಣವಾದ ಕಠಿಣ ಪಾತ್ರವಂ!] ಯಮಧರ್ಮಾ ದಿಗಿಲುಬೀಳಬೇಡ! ಅನ್ಯಾಯವೇನಿಲ್ಲ! ಸತ್ಯಾತ್ಮನೊರ್ವನಾ ಸತ್ಯವನು, ಮೂಸೆಯೊಳಗಿಟ್ಟ ಸುವರ್ಣದೊಲ್ ಪುಟಕಿಕ್ಕುವುದು ಸದ್ಯದ ಕೃತಿ! ಮೂಸೆ ನಾನಾಗಿಹೆನು, ಒಳಗುಂಟು ಸ್ವರ್ಣ, ಬೆಂಕಿ ನೀನಾಗೆ ಸಾಕು! ಮಿಕ್ಕುದನು ನಾ ನೋಡಿಕೊಳುವೆ! ಇದು ಅಧರ್ಮದ ಕೆಲಸವೇನಲ್ಲ; ಚಿನ್ನ ಪರಿಶುದ್ಧವಪ್ಪುದೆ—ಅದರ ಪುಣ್ಯವು ನಿನಗೆ ಸಲ್ಲುವುದು!

**ಯುವು :** ಮುನಿಶ್ರೇಷ್ಠ! ದ್ರಾವಿಡ ಪ್ರಾಣಾಯಾಮವಿಂತೇಕೆ? ಬಳಸು ದಾರಿಯೊಳೇನ ಹೇಳುತಿಹಿರಿ? ನೇರಾಗಿ ನುಡಿಯಿರಲ. ಅದರಿಂದ ಬರುವ ಪುಣ್ಯವದೆಲ್ಲ ಇರಲಿ. [ಮುನಿ ಮುನಿದೊಡೆ ಮನೆಹಾಳು! ಯಾರ ಮನೆಗಿಟ್ಟಿಹನೊ ಕಿಚ್ಚಂ! ಹರಿಶ್ಚಂದ್ರ ಭೂವರನ ದೇಶದಿಂದಟ್ಟಿದನು! ಚಂದ್ರಮತಿ ಲೋಹಿತಾಶ್ವರ ಪರರ ತೊತ್ತಾಗಿಸಿದ! ಈಗ ಇನ್ನಾರಿಗೋ ಬಲೆಯನೊಡ್ಡಿಹನು.]

**ಕೌಶಿಕ :** ಚಿಂತೆಯೇತಕೆ ಕಾಲ? ಇಷ್ಟವಿಲ್ಲವೆ ಒಲ್ಲೆನೆನ್ನು! ಬಲಾತ್ಕಾರವಿಲ್ಲ! [ಹೊಳೆದಿರಬಹುದೆ ನನ್ನ ಅಭೀಷ್ಟ ಈತನಿಗೆ?] ಹುಂ, ಏನು ಹೇಳುವೆ ಜವನೆ? ನಿಶ್ಚಯಿಸಿತೋ ಮನಸ್ಸು? ಏನು ನಿರ್ಧಾರ? ಹೊತ್ತಿಲ್ಲ, ಕಾಲ ಕಳೆಯಲೆನಗೀಗ. ಹೇಳು.

**ಯುವು :** [ಆದುದಾಗಲಿ. ಮುನಿಯನೆದುರು ಹಾಕಿಕೊಳ್ಳುವುದು ತರವಲ್ಲ! ಮೂರುಲೋಕಗಳ ಸುಟ್ಟು ಹುಟ್ಟಿಸಬಲ್ಲ ಇವ ಶಾಪವೀಯದಿರ! ಸತ್ಯಧರ್ಮಕೆ ಹಾನಿ ಬಾರದಿರೆ ಸಾಕು.] ತಾಳಿಕೊಳಿ, ಮುನಿವರಿಷ್ಠ. ನಗುನಗುತ

ಬಂದವರು ಹೊಗೆಹತ್ತಿ ಹೊರಡುವುದೇತಕೆ? ಇಗೋ ಹೊರಡುವೆನು! ಆವ ಕಾರ್ಯವದೆಂದು ಬೆಸಸಿ, ಸಾಕು! ಆದೊಡದು ಸತ್ಯಧರ್ಮಂಗಳಿಗೆ ಅವಿರೋಧಿ ಯಾಗಿರಬೇಕು! ಇದಿಷ್ಟೆ ನನ್ನ ಸವಿನಯದ ಪ್ರಾರ್ಥನೆ!

**ಕೌಶಿಕ:** [ಬಿದ್ದೆಯಲ್ಲಾ ಕಡೆಗು ಕೌಶಿಕನ ಬಲೆಗೆ! ಭಲೆ, ಕಟುಕನಿಗೆ ಸಮನಾದ ಕಾಠಿಣ್ಯ! ದುಷ್ಟಂಗೆ ಮಿಗಿಲಾದ ದರ್ಪ! ರೂಪ, ಆಕಾರ, ಸಕಲವೂ ಹೇಳಿ ಮಾಡಿಸಿದಂತೆ! ಪ್ರೇತಭೂಮಿಗೆ ತಕ್ಕ ಪಾತ್ರವನು ನಿನಗೆ ವಹಿಸಿಕೊಡುವೆ. ಸಾರ್ಥಕ ವಾಯಿತ್ತು ನನ್ನ ಶ್ರಮ. ಪಾತ್ರಕ್ಕೆ ಸರಿಯಾದ ಪಾತ್ರಧಾರಿಯನೆ ಹಿಡಿದೆ.] ಏನಿಲ್ಲ ಧರ್ಮರಾಜ! ಎಂಥದೆಂಥದೊ ಕಾರ್ಯಗಳಿಗಾಗಿ ಸಾಕ್ಷಾತ್ ತ್ರಿಮೂರ್ತಿಗಳೆ ಅವತಾರಗಳನೆತ್ತಲಿಲ್ಲವೆ! ಆ ಮಹಾವಿಷ್ಣು, ಚತುರ್ದಶಭುವನಪಾಲಕ, ಅವನೆ ಅಂದೊಮ್ಮೆ ಆಮೆಯಾಗಲಿಲ್ಲವೆ? ಹಿಂದೊಮ್ಮೆ ಹಂದಿಯಾಗಲಿಲ್ಲವೆ? ಜಗದೀಶ ಈಶ್ವರನೆ ವಿಷ ಕುಡಿಯಲಿಲ್ಲವೆ? ಅವರು ಇಂತಹ ಕೆಲಸಗಳನೇಕಾಗಿ ಮಾಡಿ ದರು? ಏಕಾಗಿ? ಲೋಕದುದ್ಧಾರಕ್ಕಾಗಿ, ಧರ್ಮೋದ್ಧಾರಕಾಗಿ, ಸತ್ಯವನು ಉಳಿಸಲಿಕ್ಕಾಗಿಯಲ್ಲಾ? ಇಂಥ ಸೇವೆಗೆ ಸಮಯ ಸಿಕ್ಕೀತೆ ಎಂದು ಕಾಯ ಬೇಕು, ಯಮ. ಇಂದು ನಾನಾಗಿ ಬಂದು ಸಹಾಯವ ಕೋರಿದಾಗ ಬರಿದೆ ಚಿಂತಿಸುವೆಯಲ್ಲಾ!

**ಯಮ:** ಸ್ವಾಮಿ, ಕಾರ್ಯ ಏನೆಂದು ಹೇಳಿ. ನಾ ಸದಾ ಸಿದ್ಧ. ಇದೋ ನೀವು ಬೆಸಸುವ ಕೆಲಸಕ್ಕೆ ಹೊರಟೆ! ಕೆಲಸವೇನೆಂದು ಬೇಗ ಹೇಳಿ.

**ಕೌಶಿಕ:** [ಜೇಡನ ಬಲೆಗೆ ಬಿದ್ದ ನೊಣವೆ! ಇನ್ನು ಕಾರ್ಯ ಮುಗಿ ದಂತೆಯೆ! ರಾಜಾಧಿರಾಜನಾ ಅಯೋಧ್ಯೆಯ ಅರಸು—ಹೊಲೆಯನಿಗೆ ಆಳು! ಶ್ಮಶಾ ನಾಧಿಕಾರಿಯ ಸೇವಕ, ರುದ್ರಭೂಮಿಯೊಡೆಯ! ಇನ್ನು ಮುಂದೆ ತೋರಿಸುತ್ತೇನೆ ನನ್ನ ಕೈವಾಡ! ಬೆಳ್ಳಿಯ ಗಡ್ಡದ ಮುನಿ ವಶಿಷ್ಟನ ಮುಖ ನೋಡುವುದಿನ್ನು ಅವನು ದಿಗಂಬರನಾದಾಗ! ನರಕಪಾಲದೊಳು ಸೆರೆ ಕುಡಿಯುತ ತೆಂಕಮುಖನಾಗಿ ಹೋಗು ವಾಗ! ಆಗ ನೋಡುವೆನವನ ಸತ್ಯಗಿತ್ಯದ ಬಲುಹ! ರಾಜರ್ಷಿಯಂತೆ ನಾ! ರಾಜರ್ಷಿ! ನೋಡಲಿ ಮುಂದೆ ಯಾರು ಯಾರೆಂಬುದನ್ನು!] ಧನ್ಯನಾದೆ ಧರ್ಮಾತ್ಮ! ನಾ ಬಂದ ಶ್ರಮ ಸಾರ್ಥವಾಯ್ತು!!

**ಯಮ:** ಸ್ವಾಮಿ, ಬಂದ ವಿಷಯವನ್ನೆ ತಿಳಿಸಿಲ್ಲ. ಏನೇನೋ ಹೇಳು ವಿರಿ. ಏನು ವಿಚಾರ ಅದ ಮೊದಲು ಹೇಳಿ.

**ಕೌಶಿಕ:** ಓ, ಮರೆವು ಮುಸುಕಿತ್ತು, ರಾಜ! ವಿಷಯಗಳ ಮಸೆದಾಟ

ದಲಿ ಹೇಳುವುದ ಮರೆತೆ. ಅಂದು ಇಂದ್ರನ ಮುಂದೆ, ಸತ್ಯವಂತನ ಕುರಿತು ವಶಿಷ್ಠಮುನಿಗೂ ನನಗೂ ಮಾತಾಯಿತೆಂಬುದದ ಕೇಳಿರುವೆಯಷ್ಟೆ?

**ಯುವು:** [ಹಾ! ಕೆಲಸ ಕೆಟ್ಟಿತೇ! ಹರಿಶ್ಚಂದ್ರನಿಗೆ ಇವ ಕೊಡುತ್ತಿರುವ ಕಷ್ಟಗಳಿಗೆ ಕಡೆಯಿಲ್ಲವೆ? ಇನ್ನೂ ಏನೇನ ಹವಣಿಸಿರುವನೊ!] ಸ್ವಾಮಿ, ಆ ವಿಚಾರ ನನಗೊಬ್ಬನಿಗೇನು, ದೇವಾನುದೇವತೆಗಳಾದಿಯಾಗಿ ಸರ್ವರಿಗೂ ಅದು ವಿದಿತ.

**ಕೌಶಿಕ:** ಅದಕಾಗಿ, ಅವನಲ್ಲಿ ಸತ್ಯವನು ಅರಸುತಿರುವೆ.

**ಯುವು:** [ಅರಸುತಿರುವೆಯ ಮುನಿಯೆ! ದೇಶದಿಂ ತೊಲಗಿ, ಕಾಶಿಯಲಿ ನೀ ಕೊಟ್ಟ ಕಷ್ಟಗಳನೆಲ್ಲ ಅವ ಸಹಿಸುತಿದ್ದರೂ, ಅವನಲ್ಲಿ ಸತ್ಯವನು ಅರಸುತಿಹೆಯಾ! ಇಲ್ಲವೆ ಅಸತ್ಯವನೆ ಅರಸುತಿಹೆಯೊ?] .

**ಕೌಶಿಕ:** ಅವನೀಗ ನನಗೆ ತೆರಬೇಕಾದ ಹಣಕಾಗಿ ಸತಿಸುತರ ಮಾರಿ ತನ್ನನೂ ಮಾರಿಕೊಳಲಿದ್ದಾನೆ. ಅದಕಾಗಿ ನೀನೀಗ ಶ್ಮಶಾನದೊಡೆಯ 'ಅನಾಮಿಕ'ನ ವೇಷದಿಂ ಹೋಗಿ ಅವನನ್ನು ಬೆಲೆಗೆ ಕೊಂಡು ಶ್ಮಶಾನ ಕಾಯಲು ನಿಯಮಿಸು. ಉಳಿದದ್ದು ನಾನು ನೋಡಿಕೊಳುವೆ . . . ಇದರಿಂದ ಅವನ ಸತ್ಯವನ್ನು ಚೆನ್ನಾಗಿ ಒರೆಹಚ್ಚಿ ನೋಡಿದಂತಾಗುವುದು.

**ಯುವು:** [ಪಾಪ! ಅಯೋಧ್ಯೆಯ ಅರಸು ಅನಾಮಿಕನ ಸೇವಕ! ಆತನ ದೃಢ ಸತ್ಯವನ್ನು ನೋಡುವ ಭಾಗ್ಯ ನನ್ನದು! ಅದಕ್ಕಾಗಿ ಹೆಮ್ಮೆ ಪಡಬೇಕು! ಮುನಿ ನನ್ನನ್ನೇ ಇಂಥ ಕೆಲಸಕ್ಕೆ ನಿಯಮಿಸಿದುದು ನನ್ನ ಸುಕೃತ.] ಅಪ್ಪಣೆ, ಆಗಲಿ.

**ಕೌಶಿಕ:** ದಯೆ ದಾಕ್ಷಿಣ್ಯಗಳ ಮರೆತು ವರ್ತಿಸಬೇಕು, ಯಮ!

**ಯುವು:** ಏನು ಹೇಳಿದಿರಿ, ಸ್ವಾಮಿ?

**ಕೌಶಿಕ:** ಇದು ನೀನು ನಟಿಸುವ ಪಾತ್ರ ಮಾತ್ರ ಎಂಬುದನು ಮರೆಯದಿರು. ನೀನು ಅನಾಮಿಕನಾಗಿ ಹೆಸರಿಗಿರು. ನಿನ್ನೆಲ್ಲ ಬುದ್ಧಿಯೊಳಗೂ ನಾನಿದ್ದು ಕೆಲಸಮಾಡಿಸುವೆ, ತಿಳಿಯಿತೊ?

**ಯುವು:** ಹಾಗೆಯೆ ಆಗಲಿ ಸ್ವಾಮಿ, ತಮ್ಮ ಚಿತ್ತ!

**ಕೌಶಿಕ:** ನೀನಿನ್ನು ಹೊರಡು. ಶುಭಮಕ್ಕೆ ನಿನಗೆ.

—ಎಂ. ಚಂದ್ರಶೇಖರಯ್ಯ.

# ಗೆದ್ದವ ಸೋತ, ಸೋತವ ಸತ್ತ

ಮಾನವನು ತನ್ನ ಜೀವಮಾನದಲ್ಲಿ ನಾನಾತರಹ ಘಟನೆಗಳನ್ನು ಬಹಳ ಸೂಕ್ಷ್ಮಬುದ್ಧಿಯಿಂದ ದಾಟಬೇಕಾಗಿಬರುತ್ತೆ. ಈ ದೇಹವು ಕಷ್ಟಸುಖಗಳನ್ನು ಕಟ್ಟಿಕೊಂಡೇ ಜನಿಸಿದೆ. ಆದರೆ ಕಷ್ಟವನ್ನು ಅನುಭವಿಸುವುದು ಮನುಷ್ಯನ ಅರಿವಿಗೆ ಬರುತ್ತದೆ, ಸುಖದ ಕಾಲವನ್ನು ಮಾತ್ರ ಲೀಲಾಜಾಲವಾಗಿ ಕಳೆದು ಮರೆತುಬಿಡುತ್ತಾನೆ. ಕಷ್ಟಸುಖಗಳಂತೆ, ಗೆಲವು ಸೋಲುಗಳ ದಾರಿಯಲ್ಲಿಯೂ ಮಾನವನು ಅನೇಕಸಾರಿ ನಡೆಯಬೇಕಾಗುತ್ತದೆ. ಗೆದ್ದವನು, ತನ್ನ ಹಟವನ್ನು ಸಾಧಿಸಿ, ತನ್ನ ಮನೋವೃತ್ತಿಗೆ ಬಂದಂತೆ ನಡೆದು, ಸೋತವರನ್ನು ಹೀನವಾಗಿ ಕಾಣುವುದು ಅವನ ಅವಲಕ್ಷಣವನ್ನು ಎತ್ತಿತೋರಿಸುತ್ತದೆ. ಸೋತವನು ಗೆದ್ದವನಿಗೆ ಅಡಿಯಾಳಾಗಿದ್ದು ತನ್ನ ಆತ್ಮಗೌರವ ಹೋದಬಳಿಕ ತಾನು ಜೀವಿಸಿರುವುದಕ್ಕಿಂತ ಸಾಯುವುದು ಮೇಲು, ತಾನು ಬದುಕಿದ್ದರೂ ಸತ್ತಂತೆಯೇ ಎಂಬ ಅಭಿಪ್ರಾಯಕ್ಕೆ ಬಂದಿರುತ್ತಾನೆ.

ಈಗಿನ ಜೀವನದಲ್ಲಿ ಅನ್ಯೋನ್ಯಭಾವನೆ ಮಾಯವಾಗಿದೆ. ಸೌಹಾರ್ದ ಸರಳತೆಗಳು ಅತಿ ಸ್ವಲ್ಪಪ್ರಮಾಣದಲ್ಲಿ ಜನರಲ್ಲಿ ಬೆರೆತಿದೆ. ಎಲ್ಲರೂ ಭಿನ್ನ ಭಿನ್ನ ಅಭಿಪ್ರಾಯದ ಮಳೆಯಲ್ಲಿ ತೊಯ್ದೇ ಇರುತ್ತಾರೆ. ರಾಜ್ಯ ರಾಜ್ಯಕ್ಕೆ ಕಲಹ, ಮನೆ ಮನೆಗೆ ಕಲಹ, ತಂದೆ ಮಗನಿಗೆ ಕಲಹ, ತಾಯಿ ಮಗಳಿಗೆ ಕಲಹ, ಪ್ರಿಯನಿಗೆ ಪ್ರೇಯಸಿಯೊಂದಿಗೆ ಕಲಹ; ಈ ಕಲಹಗಳಲ್ಲಿ ಒಲವಿನ ಮಾರ್ಗ ಹಿಡಿಯದವರು, ಗೆದ್ದರೂ ಸೋತವರಂತಾಗುತ್ತಾರೆ, ಸೋತವನು ಸತ್ತವನಂತೆ ಇರಬೇಕಾಗುತ್ತದೆ.

ಗೆಲ್ಲುವುದು ಎಂದರೆ, ಶತ್ರುವನ್ನು ತನ್ನ ಕಾಲಿನಿಂದ ತುಳಿದು ಮೆಟ್ಟಲೆ ಬೇಕೆಂದಲ್ಲ; ತನ್ನ ದೇಹಶಕ್ತಿಯಿಂದ ಪರರ ದೇಹವನ್ನು ಬಂಧಿಸಬೇಕಾಗಿಲ್ಲ. ಹಾಗೆ ಗೆದ್ದವರು ತಮ್ಮ ಶಕ್ತಿಯನ್ನು ದುರುಪಯೋಗಿಸಿಕೊಂಡರೂ, ಸೋತವರ ದೇಹವನ್ನು ಮಾತ್ರ ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಬಹುದು. ಆದರೆ ಸೋತವರ ಮನಸ್ಸನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳಲಾರರು. ಸೋತವರು ನೆಪ ಮಾತ್ರಕ್ಕೆ ಗೆದ್ದವರಿಗೆ ಗೌರವವನ್ನು ಸಲ್ಲಿಸುತ್ತಾರೆ. ಆದರೆ ಸೋತವರು ತಮಗೆ ಉಂಟಾದ ಅವಮಾನವನ್ನು ಹಿಂತಿರುಗಿಸಲು ಒಳಸಂಚು ನಡಸುತ್ತ ಸಮಯ

ಕಾಯುತ್ತಿರುತ್ತಾರೆ. ಸಮಯ ದೊರಕಿದಾಗ ಎದುರುಬೀಳುತ್ತಾರೆ. ಆಗ, ಮೊದಲು ಗೆದ್ದವರು ತಮ್ಮ ದೇಹಶಕ್ತಿಯಿಂದ, ಸೋತವರ ದೇಹವನ್ನು ಮೃತ್ಯು ದೇವತೆಗೆ ಬಲಿಕೊಡುವರು. ಆದರೆ, ಗೆದ್ದವರು ಸೋತುಹೋದವರ ಹೆಣಕ್ಕೆ ಯಜಮಾನರಾಗಬೇಕು. ಅವರ ಬೂದಿಗೆ ಇವರು ಮಾಲೀಕರಾಗಬೇಕು. ಇಂತಹದು ಗೆಲವೆ? ಗೆದ್ದರೂ ಸೋತವನಂತಿರಬೇಕಾಯಿತು. ಸೋತವನು ಸತ್ತ ನೆಂದಾಯಿತು.

ಮಾವಿನ ಮರದಲ್ಲಿ ಹಣ್ಣು ಮಾಗಿನಿಂತಿದೆ. ಅದನ್ನು ತಿನ್ನಬೇಕೆಂಬ ಆಸೆ ನಮಗಿದೆ. ಹಣ್ಣನ್ನು ನಾವು ಗೆಲ್ಲಬೇಕು, ಎಂದರೆ ಅದನ್ನು ಪಡೆಯಬೇಕೆಂಬ ಉದ್ದೇಶದಿಂದ, ನಮ್ಮ ಕೈಯಲ್ಲಿರುವ ಕಲ್ಲನ್ನು ಅದಕ್ಕೆ ಬೀರುವೆವು. ಮಾಗಿದ ಹಣ್ಣು ಬೀರುಕಲ್ಲಿನ ಹೊಡೆತಕ್ಕೆ ಗಜಿಬಿಜಿಯಾಗಿ ಕೆಳಗಿನ ಕೆಸರಿನಲ್ಲಿ ಬೀಳು ವುದು. ಹಣ್ಣನ್ನು ನಾವು ಗೆದ್ದರೂ ಅದರಿಂದ ನಮಗೆ ಏನೂ ಉಪಯೋಗ ವಾಗಲಿಲ್ಲ. ಇದು ನಮಗೆ ಮೊದಲನೆಯ ನಷ್ಟ. ಎರಡನೆಯದಾಗಿ, ಕೈಗೆ ಬಂದ ಹಣ್ಣು ಬಾಯಿಗೆ ಬಾರದೆ, ನಮ್ಮ ಆಶೆ ನಿರಾಶೆಯಾಯಿತು. ಉಪ ಯೋಗಿಸಿದ ಶಕ್ತಿಯೂ ವ್ಯರ್ಥವಾಯಿತು. ಇಂತಹ ಗೆಲವನ್ನು ಗೆದ್ದರೂ ಒಂದೇ, ಸೋತರೂ ಒಂದೆ. ಸೋತ ಹಣ್ಣು ಕೆಳಕ್ಕೆ ಬಿದ್ದು ಸತ್ತಿತು. ಹಣ್ಣನ್ನು ಗೆದ್ದವರು ನಾವು ಹಣ್ಣಿಲ್ಲದೆ ಸೋತೆವು.

ದೇಶ ದೇಶಕ್ಕೆ ಕಲಹಗಳು ಪ್ರಾರಂಭವಾಗಿ, ಎರಡು ಪಕ್ಷಗಳಲ್ಲೂ ಜನ ನಾಶವಾಗುತ್ತಾರೆ. ಯಾಂತ್ರಿಕಶಕ್ತಿಯನ್ನೂ ಅಟಾಮಿಕ್ ಶಕ್ತಿಯನ್ನೂ ಶತ್ರು ದೇಶದ ಮೇಲೆ ದುರುಪಯೋಗಿಸಿ ಆ ದೇಶವನ್ನೂ ಜನರನ್ನೂ ಭಸ್ಮಮಾಡು ತ್ತಾರೆ. ತಮ್ಮ ಬುದ್ಧಿಶಕ್ತಿಯನ್ನೂ ದೇಹಶಕ್ತಿಯನ್ನೂ ದುರುಪಯೋಗಿಸಿ, ಗೆಲವು ಸಂಪಾದಿಸುವ ಉದ್ದೇಶದಿಂದ ಹೊರಟವರಿಗೆ ರುದ್ರಭೂಮಿಯ ಒಡೆತನ ದೊರೆಯುತ್ತದೆ. ಇಂತಹ ಗೆಲವಿನಿಂದ ಬಂದ ಪ್ರಯೋಜನವೇನು ?

ಅಲೆಕ್ಸಾಂಡರ್, ನೆಪೋಲಿಯನ್, ಚಂದ್ರಗುಪ್ತಾದಿ ವೀರರು ತಮ್ಮ ಸೇನಾ ಬಲವನ್ನು ವೆಚ್ಚಮಾಡಿ, ಜನ ನಾಶರಾದ ಮೇಲೆ ರಾಜ್ಯಾಧಿಪತಿಗಳಾದರು. ಜೂಲಿಯಸ್ ಸೀಸರ್ ರಾಜ್ಯವನ್ನು ಗೆದ್ದ; ಆದರೆ ಜನರ ಮನವನ್ನು ಗೆಲ್ಲಲಿಲ್ಲ. ಜನರೇ ಎದುರುಬಿದ್ದು ಅವನನ್ನು ಕೊಂದರು. ಆದರೆ ಅಶೋಕ, ಇವರಂತೆಯೆ ಅಖಂಡ ಸಂಸ್ಥಾನಾಧಿಪತಿಯಾಗಿ ಮೆರೆದವನು, ಸೈನ್ಯಶಕ್ತಿ ಇಲ್ಲದೆ ಬಲ

ಹೀನನಾಗಿರಲಿಲ್ಲ. ಅಶೋಕನ ಗೆಲುವಿನ ಲಕ್ಷಣವೆ ಬೇರೆ. ದೇಶ ಮಾತ್ರವಲ್ಲ, ತನ್ನ ಪ್ರಜೆಗಳ ಮನಸ್ಸನ್ನು ಕೂಡ ಗೆದ್ದು, ಪ್ರೀತಿ ಕರುಣೆಗಳ ಮಳೆಯನ್ನು ಸುರಿಸಿ, ಜನರನ್ನು ಮೆಚ್ಚಿಸಿ, ಅವರ ಹೃದಯವನ್ನು ತಣಿಸಿದ. ಒಲವಿನಿಂದ ದೇಶವನ್ನು ಆಳಿದ. ಈ ಗೆಲುವಿಗೆ ಬೆಲೆ ಹೆಚ್ಚಲ್ಲವೆ? ಇದು ನಿಜವಾದ ಗೆಲುವಿನ ಲಕ್ಷಣ.

ಹುಲಿಯನ್ನು ಹಿಡಿದು ಬೋನಿನಲ್ಲಿ ಹಾಕಬಹುದು. ಆದರೆ ಅದನ್ನು ಸಾಧುಮಾಡಲು ಶಕ್ತಿ ಮತ್ತು ಯುಕ್ತಿಗಳೊಂದಿಗೆ ಒಲವನ್ನೂ ಬೆರಸಬೇಕು. ಆಗ ಅದನ್ನು ಗೆಲ್ಲಬಹುದು. ಆನೆಯನ್ನು ಹಳ್ಳದಲ್ಲಿ ಕೆಡವಿದ ಮಾತ್ರಕ್ಕೆ, ಸಾಧುಮಾಡಿದಂತಾಗುವುದಿಲ್ಲ. ಒಲವಿನ ಗೆಲುವಿಗೇ ಬೆಲೆ ಹೆಚ್ಚು. ಹಾಗಲ್ಲದೆ ಶಕ್ತಿಯನ್ನು ದುರುಪಯೋಗಿಸಿ, ಆನೆಯನ್ನೂ ಹುಲಿಯನ್ನೂ ಕೊಂದರೆ, ಅದು ಪ್ರಾಣಬಿಟ್ಟು ಸೋಲುವುದು. ಗೆದ್ದವರು ನಾವು ಸೋತಂತಿರಬೇಕಾಗುತ್ತದೆ.

ತಂದೆಯು ಅನೇಕವೇಳೆ ಮಗನನ್ನು ಗೆಲ್ಲಬೇಕಾಗುತ್ತದೆ; ಎಂದರೆ, ತನ್ನ ಮನೋವೃತ್ತಿಯಂತೆ ಮಗನು ನಡೆಯುವಂತೆ ಮಾಡಬೇಕಾಗುತ್ತದೆ. ತಂದೆಯು ಬಾಲ್ಯದಲ್ಲಿ ಮಗನಿಗೆ ಅನೇಕ ರೀತಿಯ ಭಯವಿಟ್ಟು, ಕೆಲವು ವೇಳೆ ಕೋಲಿನ ಭಯವನ್ನೂ ಇಟ್ಟು, ಅವನನ್ನು ಗೆಲ್ಲಬೇಕಾಗುತ್ತದೆ. ಮಗನು ತರುಣನಾದ ಮೇಲೆ ಕೋಲಿನ ಬಲ ಉಪಯೋಗಿಸಿ ಗೆಲ್ಲಲಾಗದು. ಹಾಗೂ ಗೆದ್ದರೂ, ಅದು ಗೆಲುವಲ್ಲ. ತನ್ನ ಆತ್ಮಗೌರವವನ್ನು ತಾನೇ ಕಳೆದುಕೊಂಡಂತಾಗುತ್ತದೆ. ವಯಸ್ಸು ಬಂದ ಮಗನನ್ನೂ ಮಗಳನ್ನೂ ತನ್ನ ಕಣ್ಣನೋಟವೆಂಬ ಹಗ್ಗದಿಂದ ಒಲುಮೆಯ ಗೂಟಕ್ಕೆ ಕಟ್ಟಬೇಕು. ಆಗ ಅವರನ್ನು ಸುಲಭದಲ್ಲಿ ಗೆಲ್ಲಬಲ್ಲ. ಅವರಿಂದ ಗೌರವ ಗಳಿಸಬಲ್ಲ. ಗೌರವವಿಲ್ಲದ ಆಳ್ವಿಕೆಯಿಂದ ಪ್ರಯೋಜನ ವೇನು? ಅಂತೆಯೇ ತನ್ನ ಪತ್ನಿಯನ್ನು ಗೆಲ್ಲಲು ತನ್ನ ಹೃದಯವನ್ನು ಕೊಟ್ಟು ಗೆಲ್ಲಬೇಕು. ಹೃದಯದ ಒಲವಿನ ಸಾಗರದಲ್ಲಿ ಆಕೆ ಮೀಯುವಂತೆ ಮಾಡಬೇಕು. ಆಗ ಪತ್ನಿಯನ್ನು ಗೆದ್ದಂತೆ ಮಾತ್ರವಲ್ಲ, ಅವಳ ಮನಸ್ಸನ್ನು ತನ್ನ ಕೈಹಿಡಿಯಲ್ಲಿ ಹಿಡಿದಿರುವಂತಾಗುತ್ತದೆ.

ಲೋಕವ್ಯವಹಾರದಲ್ಲಿ ಸೋಲಿಗೆ ಸಾಮಾನ್ಯವಾಗಿ ಎಲ್ಲರೂ ತಲೆಬಾಗಬೇಕಾಗುತ್ತದೆ. ಆದರೆ, ಸೋತಮಾತ್ರಕ್ಕೆ ಹಿಡಿದ ಕಾರ್ಯವನ್ನು ಅರ್ಧದಲ್ಲಿ ಬಿಡುವುದು ಹೀನಾಯ. ಯುದ್ಧರಂಗಕ್ಕೆ ಹೋದವರೆಲ್ಲರೂ ಗೆಲ್ಲುತ್ತಾರೆಂದು

ಹೇಳಲಾಗದು. ವೀರವೃತ್ತಿಯನ್ನು ಪ್ರದರ್ಶಿಸುವ ಕಾಲದಲ್ಲಿ ಹೆದರಿ ಹಿಂದಕ್ಕೆ ಹೆಜ್ಜೆ ಇಡುವುದು, ಆತ್ಮಗೌರವಕ್ಕೆ ಕುಂದಲ್ಲದೆ, ಅವನು ಸೋತಂತಾಯಿತು. ಮಾನಹೋದಮೇಲೆ ಪ್ರಾಣಕ್ಕೆ ಬೆಲೆಯಿಲ್ಲ. ಅಂದರೆ ಸೋತವನು ಸತ್ತ.

ಲೋಕವ್ಯವಹಾರ ಮತ್ತು ಸಾಂಸಾರಿಕ ವ್ಯವಹಾರದಲ್ಲಿ ಒದಗಬಹುದಾದ ಅನೇಕ ಕಷ್ಟಗಳನ್ನು ಸೂಕ್ಷ್ಮಬುದ್ಧಿಯಿಂದಲೂ ಯುಕ್ತಿಯಿಂದಲೂ ದಾಟಬೇಕು. ಎಲ್ಲಕ್ಕಿಂತಲೂ ಒಲವಿನ ಹಾದಿ ಹಿಡಿದರೆ ಗೆಲವು ಸುಲಭವಾಗುವುದು. ಒಲವು ಮತ್ತು ಸತ್ಯಗಳ ದಾರಿ ಇಲ್ಲದೆ ಗೆದ್ದವನು, ಸೋತವನಂತೆ ಬಾಳಬೇಕಾಗುತ್ತದೆ. ಒಲವು ಮತ್ತು ಸತ್ಯದ ಅರಿವಿಲ್ಲದವನಿಗೆ ಸೋತು ಅಡಿಯಾಳಾಗಿ ಬಾಳುವುದಕ್ಕಿಂತ, ಸಾಯುವುದು ಉತ್ತಮವಾಗಿ ಕಾಣುತ್ತದೆ. ಅಂದರೆ ಸೋತವನು ಸತ್ತ.

—ಕೆ. ಎಚ್. ಕೃಷ್ಣಮೂರ್ತಿ.

---

## ಅದೃಶ್ಯ ಸೇನಾಪತಿ

ಸೈನಿಕನು ನೀನು, ಸೇನಾಧಿಪತಿಯೆಲ್ಲಿಹನೊ!
ಆಣತಿಯ ಕಳುಹುತಿಹನದನು ನೀನರಿತು
ಜಾಣಿನಥಟಿಂ ಪೋರು; ಸೋಲು ಗೆಲವವನೆಣಿಕೆ;
ಕಾಣಿಸದನಾಳ್ಕೆಯದು—ಮಂಕುತಿಮ್ಮ

ನಾಯಕನಿಗಿರಲಿ ರಣವಿಜಯ ಪರಿಭವ ಗಣನೆ,
ಆಯವದರಿಂ ಭಟನ ಸತ್ತ್ವಶಿಕ್ಷಣಕೆ;
ಸ್ವೀಯ ಸತ್ತ್ವವಿಕಾಸ ನಿಜಶಕ್ತ್ಯಭ್ಯಾಸ
ಶ್ರೇಯಸಿಗೆ ಸೋಪಾನ—ಮಂಕುತಿಮ್ಮ

ಕಾಯಕವ ಚರಿಸುತ್ತ, ಮಾನಸವ ಸಯ್ತಿಡುತ,
ಆಯಸಂಬಡಿಸದವೊಲಂತರಾತ್ಮನನು,
ಮಾಯೆಯೊಡನಾಡುತ್ತ, ಬೊಮ್ಮನನು ಭಜಿಸುತ್ತ
ಆಯುವನು ಸಾಗಿಸೆಲೊ—ಮಂಕುತಿಮ್ಮ

# ಯಾರಿಗೆ ಬೇಕು ಈ ಎಲ್ಲ ಕಗ್ಗ?

ಒಂದು ಪ್ರಬಂಧ ಬರೆಯಬೇಕಂತೆ. ಐದು ಪುಟವಿರಬೇಕಂತೆ, ಅದು ಸ್ವಾರಸ್ಯವಾಗಿರಬೇಕಂತೆ. ಯಾರಿಗೆ ಬೇಕು ಈ ಎಲ್ಲ ಕಗ್ಗ?

ಬೆಳಗಾದರೆ ರೇಷನ್‌ಗೆ ಓಡಬೇಕು, ಕ್ಯೂ ನಿಲ್ಲಬೇಕು; ಕಾರ್ಡುಗಳನ್ನು ಅದಲುಬದಲು ಮಾಡಿ, ಅವರಿವರ ಕೈಲಿ ನೂಕಿಸಿಕೊಂಡು, ತಳ್ಳಿಸಿಕೊಂಡು, ಸಾಮಾನು ತರಬೇಕು. ಸೊಸೈಟಿಯಿಂದ ಬರುವಾಗ ಪಾಸುಬುಕ್ಕು ಮರೆತು ಬರಬೇಕು. ಅರ್ಧದಾರಿ ಬಂದು, ಓಡಿಹೋಗಿ ಇನ್ಯಾರದೋ ತಂದು, ಪುನಃ ಓಡಿ ಪಾಸುಬುಕ್ಕು ಸರಿಯಾದ್ದನ್ನು ಹೊತ್ತುಕೊಂಡು ಬಂದು, ಮನೆಗೆ ಹೋಗಿ ಉಸ್ಸಪ್ಪ ಅಂತ ಸಾಮಾನು ಇಳಿಸಿದರೆ, ಮನೆಯಲ್ಲಿ "ರವೆ ಚೆನ್ನಾಗಿಲ್ಲ; ಕೊಪ್ಪರಿಗಿಟುಕು ಕಮಟುವಾಸನೆ; ಹೇಳಿದ್ದು ಹೆಸರುಬೇಳೆ—ತಂದದ್ದು ತೊಗರಿ ಬೇಳೆ" ಎಂದು ಗೊಣಗಿಸಿಕೊಳ್ಳಬೇಕು. ಯಾರಿಗೆ ಬೇಕು ಈ ಎಲ್ಲ ಕಗ್ಗ?

ಗಂಟೆ ಹತ್ತಾದರೆ ಕಾಲೇಜಿಗೆ ಹೊರಡಬೇಕು, ಅಡಿಗೆ ಅವಾಂತರ. ತಾಯಿ ಅನ್ನುತ್ತಾರೆ: "ನಿಮಗೋಸ್ಕರ ಎಷ್ಟು ಮಾಡಲಿ"ಅಂತ. ತಂದೆಯೊ "ನಿಮ್ಮನ್ನು ಓದಿಸಿ ನಾನು ಕೈ ಬರಿದು ಮಾಡಿಕೊಳ್ಳಬೇಕಾಗಿದೆ" ಎಂದು ಅವರು ಗೊಣಗುತ್ತಾರೆ. ಹೀಗೆ ಈ ಬೈಗಳು ಗೊಣಗು ಎಲ್ಲಾ ಸಹಿಸಿಕೊಂಡು, ಕಾಟ ಕತ್ತರಿಸಿತೆಂದು ಪುಸ್ತಕ ಜೋಡಿಸಿಕೊಂಡು, ಹಸಿಯೊ ಬಿಸಿಯೊ ತಿಂದು, ಎಂಥದೋ ಕೈಗೆ ಸಿಕ್ಕಿದ ಬಟ್ಟೆಬರೆ ಹಾಕಿಕೊಂಡು, ಒಂದು ಕಾಲಿಗೆ ತಮ್ಮನ ಚಪ್ಪಲಿ, ಮತ್ತೊಂದಕ್ಕೆ ತಂಗಿಯ ಕಾಲಿನದು, ಹೀಗೆ ಹಾಕಿಕೊಂಡು ಹೊರಟರೆ, ಬಸ್ಸು ಅದೇತಾನೆ ಹೋಗಿ ಒಂದು ನಿಮಿಷವಾಗಿರುತ್ತದೆ. ಇನ್ನೊಂದು ಬಸ್ಸಿಗೆ ಕಾಯುವುದಕ್ಕೆ ಬೇಸರ, ಮುಖ್ಯವಾಗಿ ವೇಳೆಯಿಲ್ಲ. ಜಟಕಾದಲ್ಲಿ ಹೋಗುವುದಕ್ಕೆ ದುಡ್ಡು ಸಾಲದು. ಕೊನೆಗೆ ನಮ್ಮ ಪಾಲಿಗೆ 'ವಾಕೋ ಮೊಬೈಲೇ' ಶಾಶ್ವತ! ಯಾರಿಗೆ ಬೇಕು ಈ ಎಲ್ಲ ಕಗ್ಗ?

ಗಡಿಬಿಡೀಲಿ ಹಸಿ ಬಿಸಿ ತಿಂದು ಹೊರಟದ್ದು, ಮೇಷ್ಟ್ರರ ಪಾಠ ಕೇಳಿದ ಕೂಡಲೆ ವಾಂತಿಗೆ ಸಂಕಟ! ಮೈ ಚೆನ್ನಾಗಿಲ್ಲವೆಂದು ಒಂದು ಪೀರಿಯಡ್ ರಜ ಕೇಳಬಹುದು, ಎರಡು ಪೀರಿಯಡ್ ಕೇಳಬಹುದು. ಪ್ರತಿ ಪೀರಿಯಡ್ಡಿಗೂ ಇದೇ ಸಂಕಟ ಬಂದರೆ ಏನು ಮಾಡಬೇಕು? ಕೆಮಿಸ್ಟ್ರಿ ಕೇಳಿದರೆ, ಹೊಟ್ಟೆ

ತೊಳಸಿಕೊಂಡು ಬರುತ್ತೆ. Physics ಕೇಳಿದರೆ, ತಲೆಯಲ್ಲಿ ಹೊಗೆ ಎದ್ದಂತೆ ಆಗುತ್ತೆ. ಲೆಕ್ಕ ಮಾಡಿದರೆ, ಕಣ್ಣುಗುಡ್ಡೆಯೇ ಗರಗರ ತಿರುಗುತ್ತದೆ. ಇನ್ನು ಭಾಷೆಗಳ ಭವಣೆ ಯಾರಿಗೂ ಬೇಡ. ಹೀಗಾದರೆ ಪಾಠ ಕಲಿಯುವುದೇನು? ಯಾರಿಗೆ ಬೇಕು ಈ ಎಲ್ಲ ಕಗ್ಗ?

ಸಂಜೆ ಮನೆಗೆ ಬಂದರೆ, ಯಥಾಪ್ರಕಾರ ಯಾವುದೋ ಓಬೀರಾಯನ ಬಳಗ ಹಾಜರ್! ತಾಯಿಯ ಮೈದುನನ ವಾರಗಿತ್ತಿಯ ಸೊಸೆಯ ತಂಗಿಯ ಮಗಳ ಗಂಡ—ಇದೇ ತಾನೆ ಬಂದು ನಮ್ಮ ಪಾಲಿನ ಕಾಫಿಯನ್ನು ಅರ್ಧ ಲೋಟಕ್ಕೆ ಇಳಿಸಿರುತ್ತಾರೆ. ಇನ್ನು ತಿಂಡಿ—ಈಗೇಕೆ—ಆಗಲೇ ಕತ್ತಲೆ ಯಾಗುತ್ತಿದೆ, ತಣ್ಣಗೆ ಊಟ ಮಾಡಿಬಿಟ್ಟರೆ ಸಾಕು, ದೇಹಕ್ಕೂ ಒಳ್ಳೆಯದು, ಮನೆಯವರ ಮನಸ್ಸಿಗೂ ನೆಮ್ಮದಿ. ತಣ್ಣಗೆ ಊಟ ಮಾಡಿದರೆ, ಆ ಬಿಸಿ ಬಿಸಿ ಪಾಠಗಳನ್ನು ಅರಗಿಸಿಕೊಳ್ಳುವುದು ಹೇಗೆ? ಹಾಗೆ ಕೇಳಿದರೆ, ತಂದೆ ಅನ್ನು ತ್ತಾರೆ: "ನಮ್ಮ ಕಾಲದಲ್ಲಿ ನಾವು ಹೇಗಿದ್ದೆವು, ಏನು ಕತೆ? ಬೆಳಗ್ಗೆದ್ದು ಒಂದು ಲೋಟ ನೀರು ಕುಡಿದರೆ—ರಾತ್ರಿ ಹತ್ತು ಗಂಟೆಗೆ ಹುರುಳಿ ಸಾರು ಅನ್ನ! ನಿಮ್ಮನ್ನ ನೋಡಿದರೆ 'ಖಂಡಗ ತಿಂದರೂ ಕಳೆ ಇಲ್ಲ' ಅಂತ ದಿನಕ್ಕೆ ಮೂರುಸರ್ತಿ ಊಟ ಮಾಡುತ್ತೀರಿ. ಆದಷ್ಟು ಹೊತ್ತು ತಿಂಡಿ ತಿಂತೀರಿ. ಬಸ್ಸಿನಲ್ಲಿ ತಿರು ಗುತ್ತೀರಿ. ಇಷ್ಟಾದರೂ ನಿಮ್ಮಲ್ಲಿ ನಮ್ಮ ಆಗಿನ ಲಕ್ಷಣ ಇದೆಯೆ? . . ." ಯಾರಿಗೆ ಬೇಕು ಈ ಎಲ್ಲ ಕಗ್ಗ?

"ಸರಿಯಪ್ಪ, ಎಲ್ಲಾ ಮುಗೀತು" ಅಂತ ವ್ಯಾಸಂಗದ ಕಡೆ ಗಮನ ಕೊಡೋಣ ಅಂತ ಬಂದು, ಸರಸ್ವತಿಯ ಮುಂದೆ ಕುಳಿತರೆ, ಹಿಂದುಗಡೇನೇ ನಿದ್ರಾದೇವಿ ಸೈತಾನನಂತೆ ಕಾದಿರ್ತಾಳೆ. ಪುಸ್ತಕದ ಮುಂದೆ ಕೂತು Simple Pendulum oscillationsನಂತೆ ತಲೆ ತೂಗಾಡಿಸ್ತಾ ಇದ್ದರೆ ಅದೇ ಸಮ ಯಕ್ಕೆ ಸರಿಯಾಗಿ ಚಾಪೆ ಕೆಳಗಿನಿಂದ ಒಂದು ತಿಗಣೆ ತೂರಿ ಬಂದು ನಮ್ಮನ್ನ ಕಡೀಬೇಕೇ? ಅಲ್ಲಿಗೆ ನಿದ್ರಾಭಂಗವಾಯಿತಪ್ಪ, ಇನ್ನಾದರೂ ಓದೋಣ ಅಂದರೆ, ಸೊಳ್ಳೆ ಕಡಿತ ಷುರುವಾಗುತ್ತೆ. ಮೈ ಕೆರೆದ ತಕ್ಷಣ ಕೈ, ಕೈ ಕೆರೆದ ತಕ್ಷಣ ಕಾಲು, ಕಾಲು ಕೆರೆದ ತಕ್ಷಣ ಹೊಟ್ಟೆ, ಹೀಗೆ ಮೈ ಕೈ ಮೇಲೆಲ್ಲ ಸೊಳ್ಳೆ ಕಡಿದು ಪ್ರಾಣಸಂಕಟಕ್ಕಿಟ್ಟುಬಿಡುತ್ತೆ. 'ಸೊಳ್ಳೆ ಕಾಟ ಮುಗೀತು. ಇನ್ನಾ ದರೂ ಕುಕ್ಕರಿಸಿಕೊಂಡು ಓದೋಣ' ಅಂದರೆ, ಆಗಲೇ ಹನ್ನೊಂದು ಗಂಟೆ.

ಸರಿ, ಹನ್ನೊಂದಾಯ್ತು, ಇನ್ನು ಮಲಗೋಣ ಅಂತ ಹಾಸಿಗೆ ಹಾಕಿ ಅಂದಿನ ಕಥೆ ಪರ್ಯವಸಾನ ಮಾಡುತ್ತೇವೆ. ಈ ಕಗ್ಗ ಯಾರು ಕೇಳ್ತಾರೆ?

ಸರಿಯಪ್ಪ, ಮಲಗಿದೆವು ಅಂತ ಹಾಸಿಗೆ ಮೇಲುರುಡಿದರೆ ಅಂದಿನ ಶನಿ ಇನ್ನೂ ನಮ್ಮನ್ನ ಬಿಟ್ಟಿಲ್ಲ. ಮರೆತು ಅಕ್ಕನೋ ತಂಗಿಯೋ ಹಾಸಿಗೆಯನ್ನು ಕೊಡವದೇ ಹಾಸಿರುತ್ತಾರೆ. ಅದರೊಳಗಿಂದ ತಿಗಣೆಗಳು ಗುಂಪುಗುಂಪಾಗಿ ಬಂದು ನಮ್ಮ ಪ್ರಾಣ ಹಿಂಡುತ್ತವೆ. ಅಷ್ಟರಲ್ಲೇ ಅಟ್ಟದ ಮೇಲೆ ಒಂದು ಹೆಗ್ಗಣ ಓಡಾಡುತ್ತೆ. ಸರಿ, ಆ ಶಬ್ದ ಕೇಳಿದೊಡನೆ ಕಳ್ಳ ಬಂದು ನೆಲಮಾಳಿಗೆ ಮೇಲೆ ತೂತು ಕೊರೀತಿದಾನೆ ಅಂತ ಹೆದರಿ, ಪಟ್ಟಾಗಿ ಮುಸುಕು ಎಳೆದು ಕೊಳ್ಳೋದು. ಇದೇ ಸಮಯ ಕಾದಿದ್ದು ರೂಮಿನ ಕಿಟಕಿ ಬಾಗಿಲು ಗಾಳಿಗೆ ಡಬ್ ಅಂತ ಮುಚ್ಚಿಕೊಳ್ಳುತ್ತೆ. 'ಓ! ಕಳ್ಳ ಒಳಕ್ಕೆ ಬಂದೇಬಿಟ್ಟ!' ಅಂತ ಕಿಟಾರ್ ಅಂತ ಕಿರಿಚೋದು. ಈ ಕೂಗಿಗೆ ಮನೆಯ ಮಾತೆ ಮಡದಿ ಮಕ್ಕಳೆಲ್ಲ ಬೆದರಿ ಚೀರಿ ಎದ್ದು ಬಂದು ನೋಡಿದರೆ, ಏನೂ ಇಲ್ಲ! ಯಾರಿಗೆ ಬೇಕು ಈ ಎಲ್ಲ ಕಗ್ಗ?

ಹೆದರಿಕೆ ತಪ್ಪಿಸಿಕೊಳ್ಳಲೋಸುಗ ಒಳಗೆ ಹೋಗಿ ಮಲಗಿದರೆ ನಿದ್ದೆ ಏನೋ ಹಾಗೂ ಹೀಗೂ ಬಂದುಬಿಡುತ್ತೆ. ಜೊತೇಲಿ ಕೆಲಸಕ್ಕೆ ಬಾರದ ಕನಸುಗಳು ಬಂದು ಮನಃಶಾಂತಿಗೆ ಧಕ್ಕೆ ತರುತ್ತವೆ. ಅಕ್ಕೋ ಇಕ್ಕೋ ಅನ್ನೋದರಲ್ಲಿ ಬೆಳಕು ಹರಿಯುತ್ತೆ. ಆಗಲೇ ಮನೇಲಿ ಹಿರಿಯೋರ ಬೈಗಳ ಮೊದಲಾಗುತ್ತೆ: "ಆಗಲೇ ಒಂಬತ್ತಾಯಿತು, ಉಂಡಾಡಿಗಳು ಇನ್ನೂ ಮಲಗೇ ಇವೆ. ಓದಿಲ್ಲ ಬರಾವಿಲ್ಲ, ಸ್ಕೂಲಿಲ್ಲ ಕಾಲೇಜಿಲ್ಲ, ದಿನ ಬೆಳಗ್ಗೆದ್ದರೆ ರಜ, ಹಾಸಾ ಹರಿಯಾ ಫೀಜು ಮಾತ್ರ ತೊಗೋತಾರೆ, ಇವಕ್ಕೆ ನೋಡಿದರೆ ಅಷ್ಟು ಶ್ರದ್ಧೆ" ಅಂತ ನಮಗೆ ಆಗುತ್ತಿರುತ್ತದೆ. ಅವರನ್ನ, ಇವರನ್ನ ಎಲ್ಲರನ್ನೂ ಸೇರಿಸಿ ಕೊಂಡು ಬೈಗುಳದ ಸುರಿಮಳೆ. ಎದ್ದು ಮುಖ ತೊಳೆದು ಹೋದರೆ, ನಮ್ಮ ಪಾಲಿನ ಆರಿದ ಗಶಿಕಾಫಿ ಸಿದ್ಧವಾಗಿರುತ್ತೆ. ಯಾರಿಗೆ ಬೇಕು ಈ ಎಲ್ಲ ಕಗ್ಗ?

ಇಷ್ಟು ಕಗ್ಗಗಳ ಜೊತೆಗೆ "ಯಾರಿಗೆ ಬೇಕು ಈ ಎಲ್ಲ ಕಗ್ಗ?"—ಎಂದು ಒಂದು ಕಗ್ಗವನ್ನು ಈಗ ಬರೆಯಬೇಕಾಗಿದೆ. ಕಗ್ಗ ಕೇಳುವುದೇ ಬೇಸರ —ಹೇಳುವುದು ಇನ್ನೂ ಬೇಸರ—ಅವನ್ನೇ ಬರೆಯಬೇಕೆಂದರೆ, ಮತ್ತೂ ಬೇಸರ. 'ಬರೆಯದೇ ಹೋದರೆ ಅದೂ ಒಂದು ದೊಡ್ಡಕಗ್ಗವೇ ಆಗುತ್ತದೆ

—ಕೆಲಸಕ್ಕೆ ಬಾರದ ಕಗ್ಗವಾಗುತ್ತದೆ’ ಎಂದು ಬರೆಯಲು ಹೇಳಿದವರಿಗೂ ಗೊತ್ತು, ಬರೆದವರಿಗೂ ಗೊತ್ತು. ಆದರೆ ಕಗ್ಗ ಕೆಲಸಕ್ಕೆ ಬಾರದ್ದಾದರೂ ಅಗ್ಗ ವಲ್ಲ. ಅದನ್ನು ಬರೆಯಬೇಕಾದರು ಕೂಡ “ಯಾರಿಗೆ ಬೇಕು ನಿನ್ನ ಕಗ್ಗ” ಅನ್ನಿಸಿಕೊಂಡು ಕಾಗದದ ಥಾನು ಥಾನು ಹಾಳೆಗಳನ್ನು ಕೊಂಡುಕೊಳ್ಳ ಬೇಕಾಗುತ್ತದೆ, ಮಣ ಮಣ ಮಸಿಯನ್ನು ತರಬೇಕಾಗುತ್ತದೆ. ಈಗ ಶಾಯನ್ನು ಪೆನ್ನಿನೊಳಗೆ ತುಂಬಿಸಿಕೊಂಡು, ಕಾಗದ ಹರಡಿಕೊಂಡು ಬರೆಯಲು ಕುಳಿತರೆ, ಅದೊಂದು ಹೊಸ ಕಗ್ಗವೇ ಆಗಿಬಿಡುತ್ತದೆ. ಅದೇನೆಂದರೆ, ಪೆನ್ನಿನಲ್ಲಿ ಶಾಯಿ ಭರ್ತಿ—ಆದರೆ ತಲೆಯಲ್ಲಿ ಬುದ್ಧಿ ಖಾಲಿ. ಈಗೇನು ಮಾಡುವುದು? ಆದ್ದರಿಂದ ಈ ಕಗ್ಗದ ಹುಚ್ಚನ್ನು ಬೇರೆಯವರ ತಲೆಗೆ ಭದ್ರವಾಗಿ ಕಟ್ಟಿ, ಅವರನ್ನು ಎಡೆ ಬಿಡದೆ ಕಾಡಿ, ಬೇಡಿ, ಗೋಳಾಡಿಸಿ, ಅವರಿಂದ ಅಭಿಪ್ರಾಯಗಳನ್ನು ಕೇಳಿ ತಿಳಿದುಕೊಂಡು, ಕಲಸುಮೇಲೋಗರ ಮಾಡಿಕೊಂಡು ಕುಳಿತುಕೊಳ್ಳು ವಷ್ಟರಲ್ಲೆ ಇನ್ನೊಂದು ಕಗ್ಗವಾಗಿಬಿಟ್ಟಿರುತ್ತದೆ . . . ಅಯ್ಯೋ—ಯಾರಿಗೆ ಬೇಕು ಈ ಎಲ್ಲ ಕಗ್ಗ ?

ಈ ಕಗ್ಗಗಳನ್ನು ಬರೆಯೋಣ ಅಂತ ಕೂತರೆ ವಿಶ್ವಾಮಿತ್ರ ಹರಿಶ್ಚಂದ್ರನ್ನ ಕಾಡಿದ ಹಾಗೆ ಸುತ್ತುಮುತ್ತಿನ ವಾತಾವರಣಗಳು ಕಾಡುತ್ತವೆ. ಇನ್ನೇನು ಕಗ್ಗ ಬರೆಯುವುದಕ್ಕೆ ಮೊದಲು ಮಾಡೋಣ ಎನ್ನುವಷ್ಟರಲ್ಲಿ ತಾಯಿಯೋ ಅಜ್ಜಿಯೋ, “ಲೋ! ನಾಣಿ, ಪೇಟೇ ಬೀದೀಗೆ ಹೋಗಿ ಅರ್ಧಪಾವು ಇಂಗು ತೊಗೊಂಡು ಬಾರೋ” ಅನ್ನೋದು. ಅಲ್ಲಿಗೆ ಬಂತು ಕಗ್ಗಕ್ಕೆ ಕಂಟಕ !.

ಇಂಗಿಗೆ ಅಂತ ಹೊರಟರೋದು, ದಾರಿಯಲ್ಲಿ ಕಗ್ಗದ ಯೋಚನೆ. ಈ ಗಲಿಬಿಲೀಲಿ ಅಂಗಡಿಯೋನ ಹತ್ತಿರ ‘ಅರ್ಧ ತೊಲ ಕೇಸರಿ ಕೊಡಿ’ ಅಂದು, ಒಂದು ರೂಪಾಯಿ ನೋಟು ಕೊಟ್ಟು, ಚಿಲ್ರೆ ತೊಗೊಳ್ಳದೇ ಬರೋದು. ಮನೇಲಿ ಅಜ್ಜಿ ಇದನ್ನ ನೋಡಿದ ಕೂಡಲೆ ಒಂದು ದೊಡ್ಡ ಹಗರಣ. ಇಷ್ಟರ ಮಧ್ಯೆ ಚಿಲ್ಲರೆ ಮರೆತುಬಂದದ್ದು ಇದ್ದಿದ್ದೂ ದೊಡ್ಡತಪ್ಪು. ಅಜ್ಜಿಯ ಬೈಗಳು ತಡೀಲಾರದೆ ಅಂಗಡಿಯೋನ ಹತ್ತಿರ ಹೋಗಿ ಚಿಲ್ಲರೆಗೆ ಬೇಡಿಕೊಳ್ಳೋದು ಅವನು ಪಟಿಂಗ ವರ್ತಕನಾದರೆ ‘ನಾನು ಆಗಲೇ ತಮ್ಮ ಕೈಲೆ ಕೊಟ್ಟೆ’ ಅನ್ನಿಸಿ ಕೊಂಡು ಪೆಚ್ಚುಮೋರೇಲಿ ಮನೇಗೆ ಹಿಂತಿರುಗೋದು. ಕಗ್ಗ ಬರೆಯಲು ಹೋಗಿ ಇದೇ ಒಂದು ದೊಡ್ಡ ಕಗ್ಗವಾಗಿಹೋಗುತ್ತೆ. “ಆದದ್ದಾಯಿತು,

ಹೋದದ್ದು ಹೋಯಿತು" ಅಂತ ಮತ್ತೆ ಬರೆಯೋಕ್ಕೆ ಅಂತ ಕುಳಿತುಕೊಂಡರೆ, ಪೆನ್ನು ಗಸ್ತುಕೊಡುತ್ತೆ. ಈ ಕಗ್ಗ ಹೇಳಿದರೆ ಯಾರು ಕೇಳುತ್ತಾರೆ ?

ಇಷ್ಟರಲ್ಲೆ ಇನ್ನೊಂದು ಕಗ್ಗ ಕಾದಿರುತ್ತೆ. ಯಾವಾಗ ಪೆನ್ನು ತಕರಾರು ಮಾಡ್ತೋ—ಅಣ್ಣಂದೋ ಅಪ್ಪನಜೇಬಿಂದೋ "Parker 51" ತೆಗೆದು ಬರೆಯೊಕ್ಕೆ ಮೊದಲು ಮಾಡೋದು. ಅದು ನಮ್ಮ ಕಗ್ಗದ ಭರಕ್ಕೆ ಮುಂದೆ ಮುಂದೆ ಸಾಗೋಲ್ಲ. ಸರಿ, ಶಾಯಿ ಇಲ್ಲವೇನೋ ಅಂತ ರೇಗಿಕೊಂಡು ಕೊಡವೋದು. ಆ ರಭಸದಲ್ಲಿ ಆ ನಿಬ್ಬು ಟೇಬಲ್ಲಿಗೆ ತಾಕಿ ಚಿಡಿಲುವುದು. ಬರೆಯುವಾಗ ಕರಕರ ಅಂತ ಶಬ್ದ ಮಾಡುತ್ತೆ, ಅಂತ ಅದರ ತುದೀನ ಹಿಂದಕ್ಕೆ ಮುಂದಕ್ಕೆ ನಾಲ್ಕು ಸಲ ಚುಚ್ಚುವುದರಲ್ಲಿ ಅಷ್ಟು ಬೆಲೆ ಬಾಳುವ ಪೆನ್ನಿನ ನಿಬ್ ಕಳಕ್ ಎಂದು ಮುರಿದು ಕೆಳಕ್ಕೆ ಬೀಳುವುದು. ಸರಿ, ಕಗ್ಗದ ಲೇಖಕನಿಗೆ ಎದೆಯಲ್ಲಿ ಡವಡವಗುಟ್ಟಲಾರಂಭಿಸುವುದು. ಅಪ್ಪನೋ ಅಣ್ಣನೋ ಬಂದ ಮೇಲೆ ಮಾಡಿದ ತಪ್ಪಿಗೆ ಚಡಿ ಏಟು ಬಿದ್ದು, ಕಗ್ಗ ಬರೆಯುವುದಕ್ಕೆ ಹೋದುದೇ ಒಂದು ದೊಡ್ಡ ಕಗ್ಗವಾಗಿಬಿಡುತ್ತೆ.

ಈ ಕಗ್ಗದ ಸಂಬಂಧದಲ್ಲಿ ಪುರಾತನ ಕಾಲದ ಕಗ್ಗವೊಂದಿದೆ. ಯಾವನೋ ಒಬ್ಬ ವಿದ್ವಾಂಸ ರಾಜನಿಂದ ಇನಾಮು ಪಡೆಯಲು ಹಗಲೂ ರಾತ್ರಿ ಒಂದು ಕಗ್ಗ ಬರೆಯಲು ಮೊದಲುಮಾಡಿದ. ಒಂದು ದಿನ ರಾತ್ರಿ ಮೇಣದ ಬತ್ತಿ ಹತ್ತಿರ ಕುಳಿತು, ಕಗ್ಗಸ್ಫೂರ್ತಿಯಿಂದ ಕಗ್ಗ ಬರೆಯುತ್ತಿದ್ದಾನೆ. ಅಷ್ಟೇ ಸ್ಫೂರ್ತಿಯಿಂದ ಮೇಣದ ಬತ್ತಿ ಉರಿಯುತ್ತಿದೆ. ಇದ್ದಕ್ಕಿದ್ದಂತೆ ಆತನ ಉದ್ದನೆ ಜುಟ್ಟನ್ನು ಮೇಣದ ಬತ್ತಿ ಲೀಲಾಜಾಲವಾಗಿ ಸ್ವಾಹಾಮಾಡುತ್ತಿದೆ. ಆತನ ಗಮನ ಆ ಕಡೆ ಸೆಳೆದೇ ಇಲ್ಲ. ಸ್ವಲ್ಪ ಹೊತ್ತಿನಲ್ಲೇ ಆತನ ಮಡದಿ ವೀಳೆಯವನ್ನು ತೆಗೆದುಕೊಂಡು ರೂಮಿನ ಕಡೆ ಬಂದು ನೋಡುತ್ತಾಳೆ, ವಿದ್ವಾಂಸನ ತಲೆಯಲ್ಲಿ ಅನಾಯಾಸವಾಗಿ ಹೊಗೆಯಾಡುತ್ತಿದೆ. ಆದರೂ ಆತ ಬಹಳ ಜೋರಿನಿಂದ ಲೇಖಣಿಯನ್ನು ಓಡಿಸುತ್ತಿದ್ದಾನೆ. ವಾತಾವರಣವನ್ನು ಆತನ ಮಡದಿ ನೋಡಿ ಗಟ್ಟಿಯಾಗಿ ಚೀರಿ, ಅಕ್ಕಪಕ್ಕದವರನ್ನು ಕರೆಸಿ, ತಲೆಗೆ ಹಂಡೆಗಟ್ಟಲೆ ನೀರೆರೆದು ತಲೆಗೆ ಜೇನುತುಪ್ಪ ಸವರಿ, ಎರಡು ತಿಂಗಳು ಆ ವಿದ್ವಾಂಸನು ಆರೈಕೆ ಹೊಂದಿದನು. ಅಂದಿನಿಂದ "ಕಗ್ಗ ಬರೆಯೊಕ್ಕೆ ಹೋಗಿ ಕೂದಲು ಸುಟ್ಟ್ಕೊಂಡ" ಅಂತ ಒಂದು ಸ್ವಾರಸ್ಯದ ನಾಣ್ಣುಡಿ ವಾಡಿಕೆಯಾಗಿದೆ.

ಕಗ್ಗ ಬರೆಯಬೇಕಾದರೂ ಶತಪ್ರಯತ್ನ ಮಾಡಬೇಕು. ಒಂದು ವೇಳೆ ಮನೆಯನ್ನಾದರೂ ಕಟ್ಟಿ, ಮದುವೆಯನ್ನಾದರೂ ಮಾಡಿ, ಜಯಿಸಬಹುದು. ಆದರೆ ಅಷ್ಟು ಅಗ್ಗವಾಗಿ ಕಗ್ಗ ಬರೆಯಲು ಖಂಡಿತ ಸಾಧ್ಯವಿಲ್ಲ. ಏಳು ಸಮುದ್ರಗಳನ್ನಾದರೂ ದಾಟಬಹುದು. ಆದರೆ ಈ ಕಗ್ಗ ಬರೆಯಲು ಕುಳಿತರೆ ಏನಾದರೂ ಅಡ್ಡಿ ಆತಂಕಗಳು ಎಡೆಬಿಡದೆ ಕಾದಿರುತ್ತವೆ.

ನೋಡಿ; "ಯಾರಿಗೆ ಬೇಕು ಈ ಎಲ್ಲ ಕಗ್ಗ?" ಎಂಬ ಪ್ರಬಂಧ ಬರೆಯಲು ಹೋಗಿ ಇದೂ ಒಂದು ಸುಮಾರು ಕಗ್ಗವೇ ಆಗಿಹೋಯಿತು. ಅಷ್ಟಲ್ಲದೆ "ಕಗ್ಗಕ್ಕೆ ಕವಲಿಲ್ಲ, ಕಥೆಗೆ ಕಾಲಿಲ್ಲ" ಎಂದು ತಿಳಿದವರು ಹೇಳುತ್ತಾರೆಯೆ ?

—**ಬಿ. ವಿ. ವೆಂಕಟಾಚಲಪತಿ.**

---

## ವಿಸ್ತಾರದಲಿ ಬಾಳು

ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು,
ಕತ್ತಲೆಯ ಮೊಡಕು ಮೂಲೆಗಳ ಸೇರದಿರು;
ಭಾಸ್ಕರನನುಗ್ರಹವೆ ನೂತ್ನ ಜೀವನಸತ್ತ್ವ;
ಮೃತ್ಯು ನಿನಗಲ್ಪತೆಯೊ—ಮಂಕುತಿಮ್ಮ

ತೆರೆಯಾಗು ವಿಶ್ವಜೀವನದ ದಿವ್ಯಾಬ್ಧಿಯಲಿ;
ಕರಗಿಸದರಲಿ ನಿನ್ನ ಬೇರೆತನದಿರವ;
ಮರುತನುರುಬನು ತಾಳುತೇಳುತೋಲಾಡುತ್ತ
ವಿರಮಿಸಾ ಲೀಲೆಯಲಿ—ಮಂಕುತಿಮ್ಮ

ಶರಣುವೊಗು ಜೀವನರಹಸ್ಯದಲಿ ಸತ್ತ್ವದಲಿ
ಶರಣು ಜೀವನವ ಸುಮವೆನಿಪ ಯತ್ನದಲಿ
ಶರಣಂತರಾತ್ಮ ಗಂಭೀರ ಪ್ರಶಾಂತಿಯಲಿ
ಶರಣು ವಿಶ್ವಾತ್ಮದಲಿ—ಮಂಕುತಿಮ್ಮ

# ಲೇಖಕರ ಸೂಚಿ


| | ಪುಟ |
|---|---|
| ಅನ್ನಪೂರ್ಣಾ, ಟಿ. ಎಸ್. .... .... | ೧೬೬ |
| ಅಶ್ವತ್ಥನಾರಾಯಣರಾವ್, ಬಿ. ಟಿ. .... .... | ೪೩, ೯೭ |
| ಕೃಷ್ಣಮೂರ್ತಿ, ಎಚ್. .... .... | ೧೦೮ |
| ಕೃಷ್ಣಮೂರ್ತಿ, ಕೆ. ಎನ್. .... .... | ೧೬೦, ೧೮೫ |
| ಕೃಷ್ಣಸ್ವಾಮಿ, ಎನ್. ಎಸ್. .... .... | ೭೬ |
| ಗುರುಶಾಂತ, ಬಿ. .... .... | ೧೧೧ |
| ಚಂದ್ರಶೇಖರಯ್ಯ, ಎಂ. .... | ೮೧, ೧೨೩, ೧೮೧ |
| ಚಿಕ್ಕವೀರೇಗೌಡ, ಪಿ. ಜಿ. .... .... | ೮೨ |
| ನಾಗಭೂಷಣಯ್ಯ, ಪಿ. ಎಂ. .... .... | ೫೪ |
| ನಾಗರಾಜನ್, ಎಂ. ಆರ್. ಸಿ. .... | ೯, ೧೦೨, ೧೭೪, ೧೩೨ |
| ನಾಗರಾಜಾರಾವ್, ಬಿ. ಕೆ. .... .... | ೬೩ |
| ಪುಟ್ಟಸ್ವಾಮಿ, ಟಿ. ಕೆ. .... .... | ೧೩ |
| ಭಗವಾನ್, ಮ. ರಾ. .... .... | ೧೩೩ |
| ಭುಜಂಗಸ್ವಾಮಿ, ಕುಂಚಾಲ. .... .... | ೩೫ |
| ಮಾರುತಿರಾವ್, ಹಾಲಾಡಿ. .... | ೧೯, ೪೦, ೧೪೪ |
| ರಾಮಚಂದ್ರ, ಎನ್. .... .... | ೧೨೬ |
| ರಾಮಚಂದ್ರರಾವ್, ಬಿ. ಕೆ. .... .... | ೩೧ |
| ವೆಂಕಟಾಚಲಪತಿ, ಬಿ. ವಿ. .... .... | ೧೮೯ |
| ಶಿವಶಂಕರಶರ್ಮ, ನೆ. ಚಿ. .... .... | ೧೭೫ |
| ಶ್ರೀನಿವಾಸಮೂರ್ತಿ. .... .... | ೭೯ |
| ಶ್ರೀಹರಿರಾವ್, ಕೆ. ಎನ್. .... | ೧೬, ೬೨, ೧೫೭ |
| ಶೇಷಗಿರಿರಾವ್, ಕಾ. ನಾ. .... .... | ೧ |
| ಸತ್ಯನಾರಾಯಣರಾವ್, ಜಿ. ಜೆ. .... .... | ೪೮ |
| ಸಂಜೀವರೆಡ್ಡಿ, ಬಿ. ಆರ್. .... .... | ೨೭, ೯೮ |

ಕರ್ಣಾಟಕ ಸಂಘದಿಂದ
ವಿದ್ಯಾರ್ಥಿಗಳಿಗೋಸ್ಕರ ಪ್ರಕಟವಾದ
ಎರಡು ತಿಳಿವಳಿಕೆಗಳನ್ನು
ಮುಂದೆ ಕೊಟ್ಟಿದೆ.

**ತಿಳಿವಳಿಕೆ ೧ : ೧೦--೧೦--೫೨**

# ಕರ್ಣಾಟಕ ಸಂಘ

## ಸೆಂಟ್ರಲ್ ಕಾಲೇಜ್, ಬೆಂಗಳೂರು

[**ಸ್ಥಾಪನೆ : ಆಗಸ್ಟ್, ೧೯೧೮**]

---

ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲಿ ವಿಜ್ಞಾಪನೆಗಳು.

ಈ ವರ್ಷ **೧೯೫೨-೫೩**ರಲ್ಲಿ

ಕರ್ಣಾಟಕ ಸಂಘದ ವಿಶಿಷ್ಟ ಕಾರ್ಯಕ್ರಮ ಏನೆಂದರೆ :

**" ಕೃತಿಗಳ ರಚನೆ ಮತ್ತು ಪ್ರಕಟನೆ "**

ಸಂಘವು ಈ ವರ್ಷ ಇದುವರೆಗೆ ನಾಲ್ಕು ಕೃತಿಗಳನ್ನು ಪ್ರಕಟಿಸಿದೆ.

ಈಗ ಐದನೆಯದಾಗಿ

ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರ ಕೃತಿರಚನೆಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದು ಸಂಘವು ಸಂಕಲ್ಪಿಸಿದೆ

ಆದಕಾರಣ, ದಯೆಮಾಡಿ—

೧. ನೀವು ಇದುವರೆಗೆ ರಚಿಸಿರಬಹುದಾದ ಗದ್ಯ ಪದ್ಯ ಕೃತಿಗಳನ್ನು ಇದೇ ತಿಂಗಳು ೧೬ರ ಒಳಗಾಗಿ (೧೬-೧೦-೫೨) ಸಂಘಕ್ಕೆ ತಂದುಕೊಡಿ.

೨. ಸಂಘವು ಸದ್ಯದಲ್ಲಿಯೆ ಸೂಚಿಸುವ ವಿಷಯಗಳನ್ನು ಕುರಿತು ಆಯಾ ತಾರೀಕಿನೊಳಗಾಗಿ ಬರೆದು ಕಳುಹಿಸಿ.

**ನಿಮ್ಮ ಬರಹಗಳಲ್ಲಿ ಅತ್ಯುತ್ತಮವಾದದ್ದು**
**೧೯೫೩ನೇ ಜನವರಿಯಲ್ಲಿ ಪುಸ್ತಕವಾಗಿ ಪ್ರಕಟಗೊಳ್ಳುವುದು**

(೧) ಪುಸ್ತಕದಲ್ಲಿ ಯಾರ ಲೇಖನ ಪ್ರಕಟವಾಗುವುದೋ ಅವರಿಗೆ ಅದರ ಒಂದು ಸಾದಾ ಪ್ರತಿಯನ್ನೂ ಒಂದು ಕ್ಯಾಲಿಕೊ ಪ್ರತಿಯನ್ನೂ ಉಚಿತವಾಗಿ ಕೊಡಲಾಗುವುದು.

(೨) ಅದೇ ಪುಸ್ತಕವು ಸಂಘದ ಸದಸ್ಯರಿಗೆ ಅರ್ಧ ಬೆಲೆಗೆ ದೊರಕುವುದು.

ಸಂಘದ ಈ ಕಾರ್ಯದಲ್ಲಿ ನಿಮ್ಮ ಸಹಕಾರವು ಸಂಪೂರ್ಣವಾಗಿ ಬರಲಿ.

ನಿಮ್ಮ ಬರವಣಿಗೆ ಏನಿದ್ದರೂ ತನ್ನಿ. **ಸಂಕೋಚ ಬೇಡ.**

ತಿಳಿವಳಿಕೆ ೨: ೧೬—೧೦—೫೨

# ಕರ್ಣಾಟಕ ಸಂಘ

## ಸೆಂಟ್ರಲ್ ಕಾಲೆಜ್, ಬೆಂಗಳೂರು

ಕಾಲೆಜ್ ವಿದ್ಯಾರ್ಥಿ ವಿದ್ಯಾರ್ಥಿನಿಯರ ಬರಹಗಳಿಂದ ಆದ

# "ಬಾಲ ಸರಸ್ವತಿ"

**(ಹೊಸ ಪ್ರಕಟನೆ—ಅಚ್ಚಾಗುತ್ತಿದೆ)**

ಕಳೆದ ವರ್ಷ ಮತ್ತು ಅದರ ಹಿಂದಿನ ವರ್ಷ
ಸಂಘದ ಸ್ಪರ್ಧೆಗಳಲ್ಲಿ
ಬಹುಮಾನ ಪಡೆದ ಕೆಲವು ಬರಹಗಳಿಂದ ಆರಂಭವಾಗಿದೆ.

**ಈ ವರ್ಷದ ಬರಹಗಳು ಬೇಗ ಬರಲಿ.**

ಕಾಲೇಜಿನಲ್ಲಿ ಓದುವವರೆಲ್ಲರೂ
—ಅವರ ದ್ವಿತೀಯ ಭಾಷೆ ಯಾವುದೇ ಇರಲಿ—
ಸಂಘದ ಸ್ಪರ್ಧೆಗಳಲ್ಲಿ ಸೇರಬಹುದು.
ಬರಹಗಳನ್ನು ಕನ್ನಡದಲ್ಲಿ ಬರೆಯುವವರಾಗಬೇಕು, ಅಷ್ಟೆ.
ಸ್ಪರ್ಧೆಗಳಿಗೆ ಪ್ರವೇಶಧನವಿಲ್ಲ.

### ಸ್ಪರ್ಧೆಯ ನಿಯಮಗಳು

೧. ನಿಮ್ಮ ಸ್ವಂತವಾದ ಚಿಂತನೆ, ಸ್ವಂತವಾದ ಕಲ್ಪನೆ, ಸ್ವಂತವಾದ ವಿಚಾರ ನಮಗೆ ಬೇಕು. ಆದ್ದರಿಂದ ಯಾರ ಸಲಹೆ ಸಹಾಯವನ್ನೂ ಪಡೆಯದೆ ನೀವೇ ಬರೆಯಿರಿ.

೨. ಬರವಣಿಗೆಯ ಅಕ್ಷರ ಸ್ಫುಟವಾಗಿರಲಿ. ಕಾಗದದ ಒಂದು ಮಗ್ಗುಲಲ್ಲಿ ಮಾತ್ರ ಬರೆಯಿರಿ. ಎರಡೂ ಕಡೆ ಬರೆಯಕೂಡದು.

೩. ಬರವಣಿಗೆಗಳ ಪ್ರಮಾಣ: ಫುಲ್‌ಸ್ಕೇಪ್ ಅರ್ಧ ಗಜದಲ್ಲಿ ಸುಮಾರು ಐದು ಪುಟಗಳಷ್ಟಾದರೆ ಸಾಕು.

**೪. ಕಳಿಸಲು ಕಡೆಯ ತಾರೀಕು ಮೀರಬೇಡಿ.**

## ಸ್ಪರ್ಧೆ ಒಂದು: ಕಥೆಗಳ ರಚನೆ

**(ಕಳಿಸಲು ಕಡೆಯ ತಾರೀಖು: 25-10-1952)**

೧. ನಿಮ್ಮ ಗ್ರಾಮಾಂತರಗಳಲ್ಲಿ ನೀವು ಕೇಳಿರಬಹುದಾದ ಯಾವುದಾದರೂ ಅಜ್ಜಿಕಥೆಯನ್ನು, ಸಾಧ್ಯವಾದಷ್ಟು ಆ ಮಾತಿನಲ್ಲಿಯೆ, ಬರೆಯಿರಿ.

೨. 'ನಗೆಗಡಲು' ಮಾದರಿಯಲ್ಲಿ ದಡ್ಡರ ಕತೆಗಳು; 'ಅರೇಬಿಯನ್ ನೈಟ್ಸ್' ಮಾದರಿಯಲ್ಲಿ ಅದ್ಭುತ ಕತೆಗಳು; 'ಪಂಚತಂತ್ರ'ದ ಮಾದರಿಯಲ್ಲಿ ಮೃಗಪಕ್ಷಿಗಳ ಕತೆಗಳು; ಇದರಲ್ಲಿ ಯಾವುದನ್ನಾದರೂ ಸ್ವತಂತ್ರವಾಗಿ ಸೃಷ್ಟಿಸಿ.

೩. ನಿಮ್ಮ ಅನುಭವಕ್ಕೆ ಬಂದ ಯಾವುದಾದರೂ ಒಂದು ಅತ್ಯಂತ ಸಂತೋಷದ, ಅತ್ಯಂತ ವಿಷಾದದ, ಅತ್ಯಂತ ರೋಮಾಂಚದ, ಅತ್ಯಂತ ಹಾಸ್ಯದ ಪ್ರಕರಣವನ್ನು ಚಿತ್ರಿಸಿ.

೪. ನಿಮ್ಮ N.C.C., Laboratory, Hostel, Class-room ಅಥವಾ Sports-field—ಯಾವುದಾದರೂ ಒಂದರ ಹಿನ್ನೆಲೆಯಲ್ಲಿ, ಒಂದು ಸ್ವಾರಸ್ಯವಾದ ಕತೆಯನ್ನು ಕಟ್ಟಿ.

## ಸ್ಪರ್ಧೆ ಎರಡು: ಇಂಗ್ಲಿಷ್ ಸಾಹಿತ್ಯದ ರುಚಿ

**(ಕಳಿಸಲು ಕಡೆಯ ತಾರೀಕು: 10-11-1952)**

೧. ನೀವು ಓದಿ ಮೆಚ್ಚಿರುವ ಯಾವುದಾದರೂ ಒಂದು ಇಂಗ್ಲಿಷ್ ಕವನದ ಸ್ವಾರಸ್ಯವನ್ನು, ಇಂಗ್ಲಿಷ್ ಬಾರದವರಿಗೆ ರುಚಿಸುವಂತೆ, ಕನ್ನಡದಲ್ಲಿ ತಿಳಿಸಿ.

೨. ನಿಮ್ಮ ಇಂಗ್ಲಿಷ್ ಪಠ್ಯಪುಸ್ತಕದ ಕತೆಕಾದಂಬರಿಗಳಲ್ಲಿನ ಯಾವುದಾದರೂ ಒಂದು ವ್ಯಕ್ತಿಯನ್ನು ಚಿತ್ರಿಸಿ.

೩. ನಿಮ್ಮ ಇಂಗ್ಲಿಷ್ ಪಠ್ಯಪುಸ್ತಕಗಳಿಂದ ಯಾವುದಾದರೂ ಒಂದು ಸನ್ನಿವೇಶವನ್ನು ಆರಿಸಿಕೊಂಡು, ಅದರಿಂದ ಒಂದು ದೃಶ್ಯವನ್ನು ನಿರ್ಮಿಸಿ.

ಅಥವಾ—

೪. ನೀವು ನೋಡಿರುವ ಯಾವುದಾದರೂ ಒಂದು ಉತ್ತಮವಾದ ಇಂಗ್ಲಿಷ್ ಚಲಚ್ಚಿತ್ರವನ್ನು ಕುರಿತು—ಅದರ ಕತೆ, ಪಾತ್ರ, ನಟನ, ಶಿಲ್ಪ (technique), ನಿರ್ದೇಶನ, ಛಾಯಾಗ್ರಹಣಗಳನ್ನು ದೃಷ್ಟಿಯಲ್ಲಿಟ್ಟು—ವಿಮರ್ಶೆಮಾಡಿ.

## ಸ್ಪರ್ಧೆ ಮೂರು: ಸಂವಾದ ಕಲ್ಪನೆ

**(ಕಳಿಸಲು ಕಡೆಯ ತಾರೀಖು : 25-11-1952)**

೧. ರಾಮನಿಗೆ ಪಟ್ಟಾಭಿಷೇಕ ತಪ್ಪಿ, ಸೀತಾರಾಮಲಕ್ಷ್ಮಣರು ಕಾಡಿಗೆ ಹೊರಟು, ದಶರಥನು ಮರಣಹೊಂದಿದ ಮೇಲೆ ಯಾವನಾದರೂ ವೃತ್ತಪತ್ರಿಕೆಯ ಸುದ್ದಿಗಾರನು ಜನಕನೊಡನೆ 'ಇಂಟರವ್ಯೂ' ಪಡೆದಿದ್ದರೆ, ಏನು ಮಾತುಕತೆ ನಡೆದಿರಬಹುದು? ಕಲ್ಪಿಸಿ.

೨. ಯಮಧರ್ಮನು ವಿಶ್ವಾಮಿತ್ರನ ಮಾತಿನ ಮೇರೆಗೆ ಅನಾಮಿಕನ ವೇಷದಲ್ಲಿ ಬಂದು ಹರಿಶ್ಚಂದ್ರನನ್ನು ಕೊಂಡುಕೊಂಡನಷ್ಟೆ. ಈ ಕಾರ್ಯಕ್ಕಾಗಿ ಯಮನನ್ನು ಒಲಿಸಿ ಒಪ್ಪಿಸಿಕೊಳ್ಳಲು ವಿಶ್ವಾಮಿತ್ರನು ಹೋಗಿದ್ದಾಗ, ಅವರಿಬ್ಬರಿಗೂ ಏನು ಮಾತುಕತೆ ನಡೆದಿರಬಹುದು? ಕಲ್ಪಿಸಿ.

## ಸ್ಪರ್ಧೆ ನಾಲ್ಕು: ಲಘುಪ್ರಬಂಧ

**(ಕಳಿಸಲು ಕಡೆಯ ತಾರೀಖು : 10-12-1952)**

೧. ನಾನು ಮುಖ್ಯಮಂತ್ರಿ ಆದರೆ—

೨. ನಾಳೆ ಸ್ಟ್ರೈಕ್.

೩. ಸೀಮೆಗೆ ಹೋಗಿ ಬಂದಿದ್ದಾರೆ.

೪. ಗೆದ್ದವ ಸೋತ, ಸೋತವ ಸತ್ತ.

೫. ಯಾರಿಗೆ ಬೇಕು, ಈ ಎಲ್ಲ ಕಗ್ಗ!

ಮೇಲಿನದರಲ್ಲಿ ಯಾವುದಾದರೂ ಒಂದು ಶೀರ್ಷಿಕೆ(Title)ಗೆ ಹೊಂದಿಕೊಳ್ಳುವಂತೆ ಒಂದು ಲಘುಪ್ರಬಂಧವನ್ನು ಬರೆಯಿರಿ.

## ಸ್ಪರ್ಧೆ ಐದು: ಖಂಡಕಾವ್ಯ

**(ಕಳಿಸಲು ಕಡೆಯ ತಾರೀಖು : 20-12-1952)**

ಬುದ್ಧ, ಕನ್‌ಫ್ಯೂಷಿಯಸ್, ಅಶೋಕ, ಯೇಸುಕ್ರಿಸ್ತ, ಹರ್ಷವರ್ಧನ, ಹಜ್ಜರತ್ ಮಹಮ್ಮದ್, ಬಸವಣ್ಣ, ವಿವೇಕಾನಂದ, ಗಾಂಧೀಜಿ—ಇವರಲ್ಲಿ ಯಾರಾದರೂ ಒಬ್ಬರ ಜೀವನದಿಂದ ವಸ್ತುವನ್ನು ಆಯ್ದು, ೧೦೦ ಪಂಕ್ತಿಗಳಿಗೆ ಕಡಮೆಯಿಲ್ಲದಂತೆ ಒಂದು ಖಂಡಕಾವ್ಯವನ್ನು ರಚಿಸಿರಿ.

---

# ನಮ್ಮ ಪುಸ್ತಕಗಳು

**೧. ಶ್ರೀ ಕೈಲಾಸಂ ಅವರ ಸ್ಮರಣೆ** ರೂ. ೨/೪

ಶ್ರೀ ಕೆ. ವಿ. ಐಯರ್ ಬರೆದದ್ದು. ಕೈಲಾಸಂ ಅವರ ಚೈತನ್ಯದ ಲೀಲೆಗಳನ್ನು ಚಿತ್ರಿಸಿರುವ ಪುಸ್ತಕ. ಶ್ರೀ ಡಿ. ವಿ. ಜಿ. ಅವರ ಮುನ್ನುಡಿಯೊಡನೆ.

**೨. ಕರ್ಣಾಟಕ ಮಾಲವಿಕಾಗ್ನಿಮಿತ್ರ ನಾಟಕಂ** ರೂ. ೧/೧೨

ಆಸ್ಥಾನ ವಿದ್ವಾನ್ ಮೋ. ಶಂ. ಸುಬ್ರಹ್ಮಣ್ಯ ಶಾಸ್ತ್ರಿಗಳ ಅನುವಾದ. ಶ್ರೀ ಎ. ಆರ್. ಕೃಷ್ಣಶಾಸ್ತ್ರೀ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.

**೩. ಮೊನ್ನ ವನ್ನ** (ಮೂರು ಅಂಕಗಳ ನಾಟಕ) ರೂ. ೨/-

ಬೆಲ್ಜಿಯಂ ದೇಶದ ಮಾರಿಸ್ ಮ್ಯಾಟರ್‌ಲಿಂಕ್ ಮಹಾಕವಿಯ ನಾಟಕದ ಅನುವಾದ. ಶ್ರೀ ಎಸ್. ಜಿ. ಶಾಸ್ತ್ರೀ ಅವರು ಮಾಡಿದ್ದು. ಶ್ರೀ ಜಿ. ಪಿ. ರಾಜರತ್ನಂ ಅವರ 'ಕವಿ ಕಾವ್ಯ ಪರಿಚಯ'ದೊಂದಿಗೆ.

**೪. ನಾಗನ ಪದಗಳು** ರೂ. ೧/೪

ಶ್ರೀ ಜಿ. ಪಿ. ರಾಜರತ್ನಂ ಬರೆದುವು. 'ರತ್ನನ ಪದಗಳು' ಜಾತಿಯವು.

**೫. ಬಾಲ ಸರಸ್ವತಿ** (೩೬ ಬೇರೆ ಬೇರೆ ಕೃತಿಗಳು) ರೂ. ೨/೮

ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಸದಸ್ಯರಿಂದ.

**೬. ನಮ್ಮ ನಮ್ಮವರು** (೬೬ ಬೇರೆ ಬೇರೆ ಕೃತಿಗಳು) ರೂ. ೨/೮

ಮೈಸೂರು ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ವಿದ್ಯಾರ್ಥಿಗಳಿಂದ.

**೭. ಚಿನ್ನದ ದೋಸೆ ಮತ್ತು ಇತರ ಕಥೆಗಳು** ಹನ್ನೆರಡಾಣೆ

ಸಂಘದ ಸದಸ್ಯರು ಸಂಗ್ರಹಿಸಿದ ಎಂಟು ಜಾನಪದ ಕಥೆಗಳು.

---

**ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜ್, ಬೆಂಗಳೂರು**